# ಗೆಲ್ಲಬಲ್ಲವರು

ಕಾದಂಬರಿ




ಚ. ನಿಂ. ಸುಮಂತರಾಜ, ಎಂ. ಎಸ್ಸಿ.,



ಪ್ರಕಾಶನ
ಶ್ರೀ ಎಸ್. ಆರ್. ಪುಟ್ಟಣ್ಣ ಕಣಗಾಲ್ ಪ್ರಕಾಶನ
ಕಾಗಿನಲ್ಲಿ ಅಂಚೆ, ಶಿಕಾರಿಪುರ ತಾಲ್ಲೂಕು

GELLABALLAVARU — a novel by *C. N. Sumantharaja* Published by Sri S. R. Puttanna Kanagal Prakashana, Kaginali Post, Shikaripura Taluku.



**ಮುಖಪುಟ** : ಎಸ್. ವೆಂಕಟೇಶ್.

**ಬೆಲೆ** : ಹದಿನೈದು ರೂಪಾಯಿಗಳು.

**ಮುದ್ರಕರು** : ಶ್ರೀ ನಂಜುಂಡೇಶ್ವರ ಪ್ರಿಂಟರ್ಸ್,
ಕೆ. ಆರ್. ಪುರಂ ರೋಡ್, ಶಿವಮೊಗ್ಗ.

# ಅರ್ಪಣೆ

ದಿವಂಗತ ಶ್ರೀ ಎಸ್. ಆರ್. ಪುಟ್ಟಣ್ಣ ಕಣಗಾಲ್
ಅವರಿಗೆ

# ಪ್ರಕಾಶಕರ ನುಡಿ

ನಮ್ಮೂರ ಶ್ರೀ ಎಸ್.ಆರ್.ಪುಟ್ಟಣ್ಣ ಕಣಗಾಲ್ ಕಲಾ ಕ್ಷೇತ್ರದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಕ್ಕಾಗಿ ತಿರುಗಾಡುವಾಗ ಪ್ರಕಾಶಕರ ನೆರವಿಲ್ಲದೆ ಅನೇಕ ಜಾಣಜಾಣೆಯರು ತಾವು ರಚಿಸಿದ ಕಥೆ, ಕವನ, ನಾಟಕಗಳನ್ನು ಹಿಡಿದು ಅಲೆಯುತ್ತಿರುವುದನ್ನು ಕಂಡುದುಂಟು.ಪ್ರೋತ್ಸಾಹವಿಲ್ಲದೆ ಮುರುಟಿ ಹೋಗುವುದನ್ನು ತಡೆಯುವ ಕಿರು ಪ್ರಯತ್ನದ ಫಲವೆ ಚ.ನಿಂ.ಸುಮಂತರಾಜರವರ 'ಗೆಲ್ಲಬಲ್ಲವರು' ಕಾದಂಬರಿ ನಿಮ್ಮ ಕೈಯಲ್ಲಿರುದವುಕ್ಕೆ ಸಾಕ್ಷಿ.ಈ ಕಾದಂಬರಿಯನ್ನು ನಮ್ಮ ಪ್ರಕಾಶನದಡಿ ಹೊರ ತರಲು ಸಹಕರಿಸಿದವರಿಗೆಲ್ಲ ಕೃತಜ್ಞರಾಗಿದ್ದೇವೆ. ಅಂತೆಯೆ ಕನ್ನಡ ಕುಲಕೋಟಿ ಈಕಾದಂಬರಿಗೆ ಹೆಚ್ಚಿನಪ್ರೋತ್ಸಾಹ ನೀಡಿ ಮುಂದಿನ ಯತ್ನಕ್ಕೆ ಸಹಕರಿಸಬೇಕಾಗಿ ಕೋರುತ್ತೇವೆ.

— ಪ್ರಕಾಶಕರು.

# ಮುನ್ನುಡಿ

‘ಕೈಗೆ ಭಾರವೆನಿಸಿತ್ತು. ತಿರುತಿರುವಿದಂತೆ ಹಗುರವಾಗಿ, ಬರಿಗೈ ಚಲ್ಲಿದಾಗ, ಮತ್ತಷ್ಟು ಭಾರವಿರಬಾರದಿತ್ತ?’ ಎನಿಸಿತು.ನೋಟ ಕಿಟಕಿಯಾಚೆ ಹಾಯ್ದಾಗ ಪಡುವಣ ಅಂಬರದಲ್ಲಿ ಬಂಗಾರದ ಓಕಳಿ ಚಲ್ಲಿತ್ತು. ಹೊರಬಂದೆ ಮನಸ್ಸು ಹಳಾರೆನಿಸಿತ್ತು. ಶರೀರದಲ್ಲಿ ಯೌವನದ ಕಾವು ಮಿಂಚಿ ಅಡ್ಡಾಡ ಹತ್ತಿದೆ. ಮಿತ್ರ ಚ. ನಿಂ. ಸುಮಂತರಾಜ ರವರು ತಮ್ಮ ‘ಗೆಲ್ಲಬಲ್ಲವರು’ ಕಾದಂಬರಿಯ ಹಸ್ತಪ್ರತಿಯನ್ನು ಮುನ್ನುಡಿಬರೆಯಲು ಕೊಟ್ಟು, ನಾನೊಂದು ಉತ್ತಮ ಸಂಜೆ ಕಳೆಯುವಂತೆ ಮಾಡಿದ್ದಲ್ಲದೆ ಮಾಸುತಿದ್ದ ಯೌವನದ ದಿನಗಳನ್ನು ನೆನಪು ಮಾಡಿಕೊಟ್ಟಿದ್ದಾರೆ.

ಕಾದಂಬರಿಯಲ್ಲಿ ಬರುವ ಪ್ರತಿ ದಿನಗಳು ನನ್ನವು, ಸುತ್ತಲಿನ ಹರೆಯದ ಹುಡುಗರವು ಆಗಿ ಉರುಳುತ್ತವೆ ಕಾರಿಲ್ಲ, ಬೈಕಿಲ್ಲ, ಬಂಗ್ಲೆ ಇಲ್ಲ. ಎಲ್ಲಾ ಮಧ್ಯಮ. ಕನ್ನಡದ ಕಥೆ, ಕಾದಂಬರಿಗಳನ್ನು ಕೊಂಡು ಓದುವ ಮಧ್ಯಮ ವರ್ಗದ ಜನರ ಸಮೀಪದ ನಡುವೆ ನಡೆದ ಒಂದು ಚಿಕ್ಕ ಘಟನೆಯ ಜಾಡನ್ನು ಹಿಡಿದು ಹಂದರವನ್ನು ಮೀರದೆ ರೂಪಗೊಂಡಿದೆ. ಓದುತ್ತಾ ಹೋದಂತೆ ಬಿಡದೆ ಓದಿಸುವಘಟನೆಗಳ ಸಂಕಲನ, ಭಾಷೆಯ ಹರವು ಇಲ್ಲಿ ಗೋಚರವಾಗುತ್ತದೆ.

ನಾನು ಸುಮಂತರಾಜನನ್ನು ಹೊಗಳಿ ಅಟ್ಟಕ್ಕೇರಿಸುತ್ತಿಲ್ಲ. ಅವರು ಹುಟ್ಟಿನಿಂದಲೇ ಗಳಿಸಿದ್ದಾರೆ. ಓದು ಬಾರದ ಅಜ್ಜ ಭಜನೆ, ಜಾನಪದ ಗೀತೆ ಕಲಿಯಲು ಮನೆ ಬಿಟ್ಟು ತಿರುಗಿದವರು. ಓದಬಲ್ಲ ತಂದೆ ಬೆಳಸಿಕೊಂಡು ಸಾಹಿತ್ಯಾಭಿರುಚಿ ಸುಮಂತರಾಜನ ಮೇಲೆ ಚಿಕ್ಕಂದಿನಿಂದಲೇ ಪ್ರಭಾವ ಬೀರಿದೆ. ಶಾಲಾ ಕಾಲೇಜುಗಳಲ್ಲಿ ಕಥೆ,ಕವನ ಬರೆದು ಬಹುಮಾನ ಗಿಟ್ಟಿಸಿಕೊಂಡಿದ್ದಾರೆ. ಬರೆವ ಹವ್ಯಾಸ ಹಚ್ಚಿಕೊಂಡು ಪತ್ರಿಕೆ, ಹಾಗು ಪ್ರಕಾಶಕರಿಂದ ನಿರ್ಲಕ್ಷಿಸಿದಂತ

ನಮ್ಮವರನ್ನು ಕಾಗಿನಲ್ಲಿ ಕಣಗಾಲ್ ಪ್ರಕಾಶನದಡಿ ಹೊರತರಲು ಕಾಗಿನಲ್ಲಿ ಸಿದ್ದಯ್ಯನವರು ಮುಂದೆ ಬಂದಿರುವುದು ಹೆಮ್ಮೆಯ ಸಂಗತಿ.

ಈ ಕಾದಂಬರಿಯಲ್ಲಿ ಕುಂದು, ಕೊರತೆಗಳಿವೆ. ಅವಕ್ಕೆ ಮೇಕಪ್ ಸರಳ ಎನಿಸಬಹುದು. ಅಪೆಲ್ಲೋ ಸಿನಿಮಾ ಘಟನೆಗಳ ನೆರಳನ್ನು ನೆನಪಿಗೆ ತರಬಹುದು.ಆದರೆ ಅವುಗಳಾವುವೂ ಓದನ್ನು ನಿಲ್ಲಿಸದೆ ಚಂಗನೆ ಮುಂದಕ್ಕೆ ಹಾರಿ ಮತ್ತೊಂದು ಘಟನೆ ಮುತ್ತನಿಕ್ಕಿದಷ್ಟು ಖುಷಿ ಕೊಡುತ್ತವೆ. ಇದು ಲೇಖಕರ ಜಾಣ್ಮೆ, ಚಾಕಚಕ್ಯತೆ ಮತ್ತು ಕಸುವನ್ನು ತೋರಿಸುತ್ತದೆ. ಬೇಸರವೆನಿಸುವ ವಿವರಣೆಯಾಗಲಿ, ಪಾಂಡಿತ್ಯ ಪ್ರದರ್ಶನಕ್ಕೆ ತಿಣುಕಿ ತುರುಕುವ ವಿವರಣೆ,ವರ್ಣನೆಗೆ ಅವಕಾಶವಿಲ್ಲದಂತೆ ಮಾಡಿರುವ'ಗೆಲ್ಲಬಲ್ಲವರು'ಓದುಗರನ್ನು ಗೆಲ್ಲುವುದರಲ್ಲಿ ಸಂದೇಹವಿಲ್ಲ. ವ್ಯಕ್ತಿಗತ ಪಾತ್ರಗಳ ಚಿತ್ರಣ ಮೆಚ್ಚುಗೆಯಾದರೆ, ಸಾವಿನಲ್ಲಿ ಅಸಹಜತೆ ಗೋಚರಿಸುತ್ತದೆ. ಇದು ಲೇಖಕರ ಸಹಜ ಗೋಳು. ಏಕೆಂದರೆ ಸಾವಿನ ಸಹಜತೆ ಕಂಡು ಬರೆಯಲು ಸೋಲುತ್ತೇವೆ. ಮುನ್ನುಡಿ ಬರೆದು ಹಿಂತಿರುಗಿಸುವಾಗ ಕಂಡ ಲೇಖಕರ ಬಗಲ ಚೀಲ ತುಂಬಿತ್ತು. ನನ್ನ ಆಸೆಗಣ್ಣು ಅದನ್ನು ತುಂಬು ನಿರೀಕ್ಷೆಯಿಂದ ನೋಡಿ, ಮುಟ್ಟಿ ಹರ್ಷಗೊಂಡು ಭುಜ ಚಪ್ಪರಿಸಿದಾಗ ಕಣ್ಣು ಹನಿಗೂಡಿದವು. ಪ್ರೋತ್ಸಾಹದ ಪ್ರಕಾಶಕರು, ಪತ್ರಿಕೆಯವರ ಕೃಪೆಯಿಂದ ಬಹುದಿನಗಳಿಂದ ಬಗಲ ಚೀಲದಲ್ಲಿ ಕೊರಗುತ್ತಿರುವ ಕೃತಿಗಳು ಓದುಗರ ಮುಂದೆ ಬರುವಂತಾಗಲಿ, ಜಿ ನಿಂ. ಸುಮಂತರಾಜರವರು ಈ ಖುಷಿಯಿಂದ ನಗುವಂತಾಗಲಿ ಎಂದು ಹಾರೈಸುತ್ತೇನೆ.

- **ಡಿ. ಬಿ ಶಂಕರಪ್ಪ,** ಕೆಂಚಿಕೊಪ್ಪ.

# ಕೃತಜ್ಞತೆಗಳು

ಆಗ ಕನ್ನಡದ ಪ್ರಮುಖ ಪತ್ರಿಕೆಗಳಲ್ಲಿ ಕತೆ, ಕವನ, ಕಾದಂಬರಿ ಅಪೇಕ್ಷಿಸಿ ಶಿಕಾರಿಪುರ ತಾ॥ ಕಾಗಿನಲ್ಲಿ ಶ್ರೀ ಎಸ್. ಆರ್. ಪುಟ್ಟಣ್ಣ ಕಣಗಾಲ್ ಕಲಾಕ್ಷೇತ್ರದ ಪ್ರಕಾಶನದಿಂದ ಕರೆ ಬಂದಿತ್ತು. ಎಂದೋ ಕಾಪಿ ಮಾಡಿಟ್ಟ 'ಗೆಲ್ಲಬಲ್ಲವರು' ಕಾದಂಬರಿಯನ್ನು ಕಳುಹಿಸಿದೆ. ತಿಂಗಳೊಂದು ದಾಟಿದರೂ ಪ್ರತ್ಯುತ್ತರವಿಲ್ಲದಾಗ ಬಹುಶಃ ಕಸದ ಬುಟ್ಟಿ ಸೇರಿರಬೇಕೆಂದುಕೊಂಡೆ. ಅಷ್ಟ ರಲ್ಲಿ ಪ್ರಕಾಶಕರಿಂದ ಮೆಚ್ಚುಗೆಯೊಂದಿಗೆ ಪ್ರಕಟಿಸುವುದಾಗಿ ಪತ್ರ ಬಂದಾಗ ನನಗಾದ ಸಂತೋಷ ಅಷ್ಟಿಷ್ಟಲ್ಲ. ಈ ಪ್ರಕಾಶನಕೇಂದ್ರಕ್ಕೆ ಕೃತಜ್ಞತೆಗಳು. ಪ್ರಕಾಶಕರಿಲ್ಲದೆ ಬೆಳಕು ಕಾಣದ ಸಾಹಿತಿಗಳು ಈ ನಾಡಲ್ಲಿ ಎಷ್ಟಿದ್ದಾರೋ ತಿಳಿ ಯದು. ಹೆಚ್ಚು ವರ್ಷಗಳಿಂದ ನೋವನ್ನುಂಡ ನನ್ನ ಹಿರಿ ಸಾಹಿತಿ ಬಳಗದವ ರಿಗೂ ಅವಕಾಶ ಸಿಗುವಂತಾಗಲಿ ಎಂದು ಆಶಿಸುತ್ತೇನೆ.

ಈ ಸಂದರ್ಭದಲ್ಲಿ ವಾತ್ಸಲ್ಯದಿಂದ ಸಹಕರಿಸಿದ ಶ್ರೀ ಎ. ಮುರಿಗಪ್ಪನವರಿಗೆ, ಆದರದಿಂದ ಮುನ್ನುಡಿ ಬರೆದು ಕೊಟ್ಟ ಸಾಹಿತಿ ಶ್ರೀ ಡಿ.ಬಿ. ಶಂಕರಪ್ಪನವರಿಗೆ ಸಾಹಿತ್ಯಾಭಿಮಾನಿ, ಉತ್ತಮ ನಾಟಕ ನಿರ್ದೇಶಕರಾಗಿ ಪರಿಚಯಿಸಿದ ಶ್ರೀ ಓ.ಎಲ್ ನಾಗಭೂಷಣಸ್ವಾಮಿಯವರಿಗೆ, ಕಲ್ಪನೆಗೆ ಮೀರಿದ ಅಂದವಾದ ಚಿತ್ರ ಬರೆದು ಕೊಟ್ಟ ಎಸ್. ವೆಂಕಟೇಶ ಮತ್ತು ಮುದ್ರಕರಿಗೆ ಕೃತಜ್ಞತೆಗಳನ್ನು ಅರ್ಪಿಸುವ ಕೃತಜ್ಞ. ಉತ್ತಮ ವಿಮರ್ಶೆಯನ್ನು ತೆರೆದ ಹೃದಯದಿಂದ ಬಯಸುವ.

—**ಚ. ನಿಂ. ಹನುಮಂತರಾಜ,** ಎಂ.ಎಸ್ಸಿ.
ಮನೆ ನಂ–17, ಹೊಸಮನೆ ಬಡಾವಣೆ.
ಹೌಸಿಂಗ್ ಬೋರ್ಡ್ ಕ್ವಾರ್ಟರ್ಸ್
ಶಿವಮೊಗ್ಗ – 577 201

# ೧

ಮುಂಜಾವು ಕಳೆದು ಹೊತ್ತು ಮೂರು ದೂರ ಏರಿದ್ದರೂ ಮಂಚದ ಮೇಲೆ ಒಂದು ಬದಿಗೆ ಮುಸುಕೆಳೆದು ಮಲಗಿದ್ದ ಮಧ್ಯ ವಯಸ್ಸಿನ ವೆಂಕಟಯ್ಯನಿಗೆ ಇನ್ನೂ ಮಬ್ಬುಗತ್ತಲಿನ ಬೆಳಗು. ಅಲೆ ಅಲೆ ಯಾಗಿ ಗೊರಕೆಯ ಗುಟುಕು ಹಾಕುತ್ತ ಮಲಗಿದ್ದ ವೆಂಕಟಯ್ಯನ ಪಾಲು ಮಂಚದಲ್ಲಿ ಕಾಲು ಭಾಗ, ಉಳಿದ ಮುಕ್ಕಾಲು ಪತ್ನಿ ಮಂಜಮ್ಮಳದು. ದೇಹದ ಪ್ರಮಾಣ ಪತ್ನಿಯ ದೇಹದ ಕಾಲು ಭಾಗದಷ್ಟು ಮಾತ್ರ ಇಬ್ಬರ ಎತ್ತರವೂ ಐದು ಅಡಿ. ಆಫೀಸೊಂದರಲ್ಲಿ ದೊಡ್ಡ ಅಧಿಕಾರಿಯಾದ ವೆಂಕಟಯ್ಯನ ಧರ್ಮಪತ್ನಿಯು ಅಕ್ಷರ ಜ್ಞಾನ ಶೂನ್ಯ.

ಬೆಳಗ್ಗೆ ಎಂಟರ ಕನಸಿನ ಕೋಟೆಯೊಂದಿಗೆ ಹೊದ್ದ ಮುಸುಕನ್ನು ಭೇದಿಸಿ ತಲೆ ಎತ್ತಿ "ಲೇ ಮಂಜಿ ಕಾಫಿ ಆಯ್ತೇನೇ!?" ರಾಗವಾಗಿ ಕೂಗಿ ಕೇಳಿದ ಕೂತರೆ ನಿಂತರೆ ಉಸಿರು ಬಿಡುವ ಮಂಜಮ್ಮನ ಉಬ್ಬಸದ ಉಸಿರಿನೊಂದಿಗೆ "ಸುಂಯ್" ಗುಟ್ಟುವ ಸ್ಟೌವ್‌ನ ಸದ್ದು ಅಡುಗೆ ಮನೆ ತುಂಬಿತ್ತು. ಪತಿಯ ಸ್ವರ ಕೇಳುತ್ತಿದ್ದಂತೆ "ಆಯ್ತು ಸ್ವಲ್ಪ ಇರ್ರೀ, ಯಾಕಂಗೆ ಒಂದೇ ಸಮನೆ ಕೂಗಾಡ್ತೀರಾ? ಇನ್ನೂ ಸ್ವಲ್ಪ ನಿದ್ದೆ ಮಾಡಿ ತರ್ತೀನಿ" ಪ್ರತ್ಯುತ್ತರವಿತ್ತಳು.

"ಪ್ರತಿ ದಿನವೂ ನಿಂದು ಇದೇ ರಾಗ ಆಯ್ತಲ್ಲೇ, ಒಂದಿನಾದ್ರೂ ಕೇಳಿದ ಟೈಮಿಗೆ, ಕೇಳೋಕ್ಮುಂಚೆ ತನ್ನಿಲ್ಲಲೇ.. ನೀನೇ ಕುಡಿ" ಎಂದು ರೇಗಿ ಹಾಗೆ ಕಣ್ಮುಚ್ಚಿದ. ಸಂಶಯವಿಲ್ಲದಂತೆ ಮತ್ತೆ ಸ್ವಲ್ಪ ಹೊತ್ತು ಕಾಫಿ ಬರುವುದರೊಳಗೆ ಸಣ್ಣ ನಿದ್ದೆ ತೆಗೆಯಬಹುದೆಂದು ತಿಳಿದಿದ್ದ ವೆಂಕಟಯ್ಯ ಮರಳಿ ಮುಸುಕೆಳೆದ.

ಇವರಿಬ್ಬರ ಪ್ರೀತಿಯ ಮುದ್ದಿನ ಏಕೈಕ ಪುತ್ರ ರಾಜು ಆಗಲೇ ಬಚ್ಚಲಲ್ಲಿ ಸ್ನಾನ ಮಾಡುತ್ತಿದ್ದ. ಗಂಟೆಗಟ್ಟಲೆ ಇರುವ ನೀರೆಲ್ಲವನ್ನು ಎರಚಿಕೊಂಡು ನೀರೆಲ್ಲ ಖಾಲಿ ಮಾಡುವನು ತಾಯಿ ಮಂಜಮ್ಮ ಬಚ್ಚಲು ಮನೆಯಬಾಗಿಲಿಗೆ ಬಂದಾಗ " ರಪ್, ರಪ್ "ದಢಂ ದುಢಂ " ಸದ್ದು ಕೇಳಿಸುತಿತ್ತು. ಮುದ್ದಿನಿಂದಲೇ "ಪಾಪು ನೀರೆಲ್ಲ ಖಾಲಿ ಮಾಡ್ಬೇಡ ಪಾಪು ನಾನು ಸ್ನಾನ ಮಾಡಿಸ್ಲೇನು?" ಕೇಳಿದರು.

ಮಗನಿಂದ ಮೌನವೇ ಉತ್ತರ ಮಗ ಮುನಿದರೆ ಮತ್ತಷ್ಟು ಮುದ್ದು ಮಾಡುವ ಮನೋಭಾವದ ಮಂಜಮ್ಮ ತಾವೆಯೆ "ಬೇಡ್ವಾ? ಸರಿ ಸ್ನಾನ ಮಾಡ್ಬಿಟ್ಟು ಬಾ ಕಾಫಿ ಕೊಡ್ತೀನಿ" ಎಂದವರೇ ಅಡುಗೆ ಮನೆಗೆ ಹೋಗಿ ಕಾಯ್ದ ನೀರಿಗೆ ಸಕ್ಕರೆ, ಕಾಫಿಪುಡಿ, ಹಾಲು ಬೆರಸಿ, ಸೋಸಿ ಗಂಡನಿಗೆ ಕೊಡಲು ಹೊರಟಳು.

ವೆಂಕಟಯ್ಯ ಹೋಲು ಮಗ್ಗುಲಾಗಿ ನಿಜವಾದ ನಿದ್ರೆಯನ್ನೇ ಮಾಡುತ್ತಿದ್ದ ಬಳಿಯ ಟೀಪಾಯ್ ಮೇಲೆ ಲೋಟವನ್ನಿಟ್ಟು ಗಂಡನನ್ನು ಮುಟ್ಟಿ ಅಲ್ಲಾಡಿಸುತ್ತ " ರೀ ಕಾಫಿ ಆಯ್ತು ಏಳ್ರೀ "ಎನ್ನುತ್ತ. ಸದೃಢ ದೇಹದ ಮಂಜಮ್ಮ ಗಂಡನನ್ನು. ಒಂದೇ ಕೈಯಿಂದ ಅಲ್ಲಾಡಿಸಿದಾಗಲಂತೂ ವೆಂಕಟಯ್ಯನ ಇಡೀ ದೇಹ ಅಲ್ಲಾಡಿತು ಇನ್ನೂ ಅಲ್ಲಾಡಿಸುತ್ತಲೇ ಇದ್ದ ಕೈಯನ್ನು ನೂಕುತ್ತ "ಸಾಕು ಬಿಡೆ ಪುಣ್ಯಾತ್ಮಗಿತ್ತಿ ಏಳ್ತೀನಿ" ಎನ್ನುತ್ತ ಎದ್ದು ಕುಳಿತ ಪೀಚಲ ದೇಹದ ವೆಂಕಟಯ್ಯ, ಎರಡೂ ಕೈಗಳಿಂದ ಮುಖ ಒರೆಸಿಕೊಂಡವನೇ ನೇರವಾಗಿ ಕಾಫಿ ಲೋಟಕ್ಕೆ ಕೈ ಹಾಕಿದ.

"ಪಾಪು ನೀರೆಲ್ಲ ಖಾಲಿಮಾಡಿರ್ತಾನೋ ಏನೋ ಬೇಗ ಬಂದು ಉಳಿದ ನೀರ್ನಲ್ಲೆ ಸ್ನಾನ ಮಾಡ್ರಿ. ಇಲ್ಲಾಂದ್ರೆ ಬೇರೆ ನೀರು ಕಾಯಿಸ್ತೀನಿ" ಎಂದು ಹಿಂತಿರುಗಿದ ಮಂಜಮ್ಮಳಿಗೆ "ಹಾಂ ಮಂಜೀ ರೇಡಿಯೋ ಇಡೆ, ಸಂಗೀತ ಬರುತ್ತೆ" ಎಂದು ಕಾಫಿ ಹೀರತೊಡಗಿದ.

ಆದಿತಾಳ, ಭೈರವಿರಾಗ, ಕೀರ್ತನೆಗಳೆಂದರೆ ವೆಂಕಟಯ್ಯನಿಗೆ ಪಂಚಪ್ರಾಣವಲ್ಲ ದಿದ್ದರೂ ಮೆಚ್ಚುಗೆ. ಕಾಫಿ ಮುಗಿದ ನಂತರ ಚಿಮ್ಮಟ್ಟಿ ಕುಳಿತು ತೊಡೆ ತಟ್ಟುತ್ತ ತಲೆ

ತೂಗುತ್ತ ಕೂರುವುದು ಅವರ ಬೆಳಗಿನ ದಿನಚರಿಯೊಳಗೊಂದು ಮುಖ್ಯ ಅಂಶ. ಅವರು ಬಯಸಿದ ಸಂಗೀತವೇ ಬರುತ್ತಿತ್ತು. ರೇಡಿಯೊ ಟ್ಯೂನ್ ಮಾಡಿದ ಮಂಜಮ್ಮ ಮರೆಯಾದ ನಂತರ ' ಹ ಹ ಹ. ಹಾ ' ಎಂದು ಆರಂಭವಾಗುವ ಸಂಗೀತಕ್ಕೆ ತಮ್ಮ ಒಳ ಧ್ವನಿಯನ್ನು ಒರೆ ಹಚ್ಚಿ ತಲೆತೂಗುತ್ತ ಕುಳಿತ.

ವೆಂಕಟಯ್ಯ ಈ ಸಂತೋಷವನ್ನು ಅನುಭವಿಸಿದ್ದು ಕೆಲವು ಕ್ಷಣ ಮಾತ್ರ ಮಿಂಚಿನಂತೆ ಬಂದ ರಾಜು ಸಂಗೀತ ತುಂಡರಿಸಿದ. ವೆಂಕಟಯ್ಯನ ತೊಡೆ ತಟ್ಟುತ್ತಿದ್ದ ಕೈ ಸ್ತಬ್ಧವಾಯಿತು ತಪಸ್ಸು ಭಗ್ನದಿಂದ ಎಚ್ಚೆತ್ತುವ ಋಷಿಯಂತೆ ನಿಧಾನವಾಗಿ ಕಣ್ಣು ತೆರೆದು ಮಗನನ್ನು ನೋಡಿ "ಯಾಕೋ ಪಾಪು ರೇಡಿಯೋ ಆಫ್ ಮಾಡಿದೆ? ಎಷ್ಟು ಒಳ್ಳೆ ಸಂಗೀತ " ಇನ್ನೂ ಮಾತು ಮುಗಿದಿರಲಿಲ್ಲ, ಅಷ್ಟರಲ್ಲಿಯೇ "ನನಗೆ ಇದನ್ನ ಕೇಳೋಕ್ಕಾಗಲ್ಲ ಮತ್ತೆ ಇಡ್ಬೇಡಿ ಅಂದ್ರೆ ಯಾಕೆ ಇಡೋದು?"ಎಂದು ಒಮ್ಮೆಲೆ ಬಾಯ್ಮುಚ್ಚಿಸಿದ.

ಆರಡಿ ಸಮೀಪ ಎತ್ತರದ ನಿಲುವು ಚಿಗುರು ಮೀಸೆಯ ಸೊಂಪಾಗಿ ಬೆಳೆ ಗೋಧಿ ಬಣ್ಣದ ದೇಹದ ತರುಣ. ಬುದ್ಧಿವಂತನಲ್ಲದ ಅವನು ಮೂರು ವರ್ಷ ಫೇಲಾಗಿ ಹೇಗೊ ಕಡೆಯ ವರ್ಷದ ಬಿ ಎ ಗೆ ಆಗ ತಾನೆ ಕಾಲಿರಿಸಿದ್ದ ಕೆಂಪು ಹಳದಿ ಮಿಶ್ರಿತ ಬಣ್ಣದ ಪಂಜೆ ತೊಟ್ಟು,ಹೆಗಲ ಮೇಲಿದ್ದ ಟರ್ಕಿ ಟವೆಲ್‌ನಿಂದ ತಲೆ ಒರೆಸಿಕೊಳ್ಳುತ್ತ ನಿಂತಿದ್ದ ಮಗನನ್ನೇ ದಿಟ್ಟಿಸಿ-"ಅಲ್ಲೋ ಪಾಪು, ಇದು ಶಾಸ್ತ್ರೀಯ ಸಂಗೀತ ಎಲ್ಲರಿಗೂ ಹಾಡ್ಲಿಕ್ಕೆ ಬರಲ್ಲ. ನಮಗೆ ಹಾಡಲಿಕ್ಕೆ ಬರ್‍ದಿದ್ರೂ, ಕೇಳೊಕ್ಕೇನಂತೆ? ಫಾರಿನ್ನರ್ಸ್‌ರೆಲ್ಲ ಇತ್ತೀಚಿಗೆ ಇವನ್ನೆಲ್ಲ ಎಷ್ಟು ಆಸಕ್ತಿಯಿಂದ ಕಲಿಯುತ್ತಿದ್ದಾರೆ ಗೊತ್ತ ಮತ್ತೆ ಅಷ್ಟೆ ಸೊಗಸಾಗಿ ಹಾಡ್ತಾರೆ" ಎಂದು ಒಂದಿಷ್ಟು ಬುದ್ಧಿವಾದ ಹೇಳಿದರು.

"ಪ್ರಪಂಚನೇ ಹೀಗೆ ಬಿಡು ಅವರ ಸಂಗೀತ, ಇಂಗ್ಲೀಷ್ ಹಾಡು, ಡಿಸ್ಕೋ ನಾವು ಕಲಿತಿಲ್ವಾ?"ಎಂದು ತನಗೆ ಸರಿ ಎನಿಸಿದ್ದನ್ನು ತನಗನುಕೂಲವಾಗುವಂತೆ ನುಡಿದ.

"ಕಲೀ ಬೇಡಾ ಅನ್ನೊಲ್ಲ. ಆದರೆ ನಾವು ಸ್ವಾಭಿಮಾನಿಗಳಾಗಬೇಕು ಪಾಪು.

ನಮ್ಮ ಸಂಗೀತದ ಶಿರಶನವನ್ನ, ಸಂಸ್ಕೃತಿಯನ್ನ ನಾವೇ ಉಳಿಸ್ಬೇಕು. ಅದೇನೆ ಇರಲಿ ನನಗೆ ಈ ಸಂಗೀತ ಕೇಳೋಕೆ ಬಿಟ್ರೆ ಸಾಕು '' ಎಂದು ಮಗನ ಮುಂದೆ ಗೋಗರೆದರು.

" ಕೇಳು ನಾನು ಮನೆಯಲ್ಲಿ ಇಲ್ಲದಾಗ ಮಾತ್ರ ಅಷ್ಟೆ". ಎಂದು ಕಡ್ಡಿ ತುಂಡಾಗುವಂತೆ ಕಡೆಯ ನಿರ್ಧಾರ ತಿಳಿಸಿದ.

"ಸರಿ ಬಿಡು ಪಾಪು. ನಿನ್ನಿಷ್ಟ. ನಾನ್ಯಾಕೆ ಬೇಡಾ ಅನ್ಲಿ. ಹಾಂ ಪಾಪು ಒಂದು ವಿಷ್ಯ ಇದೆ. ನಿನಗೆ ಹೇಳ್ಬೇಕಾದುದು, ಸ್ನಾನ ಮಾಡ್ಕೊಂಡು ಬಂದು ತಿಂಡಿ ತಿನ್ಬೇಕಾದ್ರೆ ಹೇಳ್ತೀನಿ " ಎಂದು ಎದ್ದು ಸ್ನಾನಕ್ಕೆ ಹೊರಟರು.

ಅವರತ್ತ ಹೊಗುತ್ತಿದ್ದಂತೆ ತಲೆ ಒರೆಸಿಕೊಳ್ಳುತ್ತ ನಿಂತ. ಕಾಫಿ ತಂದ ಮಂಜಮ್ಮ " ಪಾಪು ಕಾಫಿ ತಗೋಳೋ '' ಎಂದರು. ಬೆನ್ನು ತಿರುಗಿಸಿ ಕಾಫಿ ಕೈಗೆ ತೆಗೆದುಕೊಂಡು ಬಾಯಿಗೆ ಹಾಕಿಸುತ್ತಿದ್ದಂತೆ " ಹಾಂ ಪಾಪು ತಗೋ ಈ ಮಾತ್ರೆನೂ ನುಂಗಿ ಬಿಡು ಸರಿಯಾಗುತ್ತೆ" ಎಂದಳು.

ಹಸಿದು ಬಣ್ಣದ ಕಲಕಲಯೊದ ದುಂಡನೆ ಮಾತ್ರೆಯನ್ನು ನೋಡುತ್ತಿದ್ದಂತೆ ಮುಖ ಕಿವುಚಿದ. ಉಬ್ಬು ಗಂಟಿಕ್ಕಿದವು. "ದಿನವೂ ಎನು ಮಾತ್ರೆ ನುಂಗಿಸ್ತೀಯಮ್ಮ, ನನಗ್ಯಾವ ಖಾಯಿಲೆ ಇದೆ ಹೇಳು? ನನಗಾಗಲೇ ಸಾಕಾಗಿ ಹೋಗಿದೆ.ಹೋಗು ನುಂಗಲ್ಲ" ಅಚಲನಾಗಿ ನುಡಿದ

ತಮ್ಮ ಕೈಗಳೆರಡನ್ನು ನೇರವಾಗಿ ಮುಖದೆತ್ತರಕ್ಕೆ ಚಾಚಿ ಕೆನ್ನೆ ಸವರುತ್ತ "ಅಯ್ಯೋ ಪಾಪು ಹಾಗೆಲ್ಲ ಮಾಡ್ಬಾರ್ದು. ಇದು ನುಂಗುತಿದ್ದೋದ್ರಿಂದ್ಲೇ ನಿನಗ್ಯಾವ ಕಾಯಿಲೇನೂ ಇಲ್ಲ. ಮುಂದೆನೂ ಬರಲ್ಲ. ತಗಳಪ್ಪಾ ನನ್ನ ಚಿನ್ನಾ" ಎಂದು ಮುತ್ತಿನಂತ ಮಾತುಗಳನ್ನು ಪೋಣಿಸಿ ಮಗನನ್ನು ಮಣಿಸಿದರು.

"ಇದೇ ಲಾಸ್ಟ್ ಮತ್ತೆ ನಾನು ನುಂಗೋದಿಲ್ಲ ತಿಳಿತಾ? '' ಎನ್ನುತ್ತ ಮಾತ್ರೆ ಕೈಗೆ ತೆಗೆದುಕೊಂಡು ಗಂಟಲಿಗೆ ಹಾಕಿ ಕಾಫಿಯೊಂದಿಗೆ ನುಂಗಿದ.

"ಇದು ಎಂಥಾ ಮಾತ್ರೆ ಗೊತ್ತಾ? ಸ್ವಾಮೀಜಿಯವರು ನಮಗೋಸ್ಕರನೇಮಾಡಿ ಕಳಿಸ್ತಿದ್ದಾರೆ. ಇದನ್ನ ತಿನ್ನೋದ್ರಿಂದ್ಲೇ ನೀನು ಚನ್ನಾಗಿದ್ದೀ ಪಾಪು. ಬೇಡಾಂದ್ರೆ ಕೆಟ್ಟ ಕಾಯ್ಲೆ ಬರುತ್ತೆ. ಏನು ಮಹಾನಪ್ಪ ಎರಡು ದಿನಕ್ಕೊಂದು ನುಂಗೋದು?" ಎನ್ನುತ್ತ ಅವನು ಕೈಗಿತ್ತ ಲೋಟ ತೆಗೆದುಕೊಂಡು ಒಳ ನಡೆದಳು. ಅವರ ಮಾತುಗಳನ್ನು ಆಲಿಸುತ್ತ ಮುಖ ಸಿಂಡರಿಸಿಕೊಂಡೇ ನಿಂತಿದ್ದ ರಾಜು, ಕಡೆಗೆ "ನೀನೂ ನುಂಗಿ ನೋಡು ತಿಳಿಯುತ್ತೆ" ಎಂದು ಗೊಣಗಿದ.

ಕಾಲೇಜಿಗೆ ಹೊರಟುನಿಂತಿದ್ದ ರಾಜು "ಅಮ್ಮಾ ಅಮ್ಮಾ '' ಎಂದೆರಡು ಬಾರಿ ಕೂಗಿದ.

ಸೆರಗಿನ ತುದಿ ಸೊಂಟಕ್ಕೆ ಸಿಕ್ಕಿಸುತ್ತ ಓಡಿ ಬಂದ ಮಂಜಮ್ಮ "ಏನೋ ಪಾಪು? ಕರೆದೇನೋ?'' ಕೇಳಿದರು

"ಹುಂ ಕರ್ಚ್ಗೆ ಖರ್ಚಿಗೆಕೊಡು, ಕಾಲೇಜಿಗೆ ಟೈಮಾಯ್ತು" ಎಂದ.

ಮೊದಲೇ ಹಣವನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡಿದ್ದ ಅವರು ''ಇನ್ನು ತಗೋ '' ಎನ್ನುತ್ತ ಹತ್ತರ ನೋಟು ನೀಡಿದಳು.

ಪ್ರತಿದಿನವೂ ಗಂಡನ ಜೇಬಿಗೆ ಕೈ ಹಾಕಿ ಸೋಸುವ ಮಂಜಮ್ಮ ಹಣವನ್ನು ಎರಡು ಭಾಗ ಮಾಡಿಕೊಂಡಿದ್ದರು ಹತ್ತು ಅವನಿಗೆ ಉಳಿದದ್ದು ತನಗೆ, ಈ ಅನುಭವ ಚೆನ್ನಾಗಿ ಉಂಡಿದ್ದ ವೆಂಕಟಯ್ಯ ಆಫೀಸಿಗೆ ಹೊರಡುವಾಗ ಖರ್ಚಿಗೆಂದು ಹೆಂಡತಿಯು ಮುಂದೆ ಕೈ ಚಾಚುವುದು ವಾಡಿಕೆ. ಭಾರಿ ಲಂಚದ ಕೆಲಸ ಎಂದ ಮೇಲೆ ಕೇಳ್ಬೇಕೆ?

ಸಂಜೆ ಹಿಂತಿರುಗುವ ಅವರ ಜೇಬು ಸಾಕಷ್ಟು ಭರ್ತಿಯಾಗಿರುತ್ತಿತ್ತು. ಬೆಳಗಾಗುತ್ತಿದ್ದಂತೆ ತಾಯಿ ಮಗನ ಪಾಲಾಗುತ್ತಿತ್ತು.

ಹಣ ಪಡೆದು "ಥ್ಯಾಂಕ್ಸ್ ಅಮ್ಮಾ, ಹೋಗ್ಬರ್‍ತೀನಿ" ಕೈ ಅಲ್ಲಾಡಿಸುತ್ತ ಅರ್ಧ ಡ್ಯಾನ್ಸ್ ಮಾಡಿ, ಸಂತೋಷದಿಂದ ಹಾರುತ್ತ ಹೋಗುವುದನ್ನು ಸಂತೃಪ್ತಿಯಿಂದ ನೋಡುತ್ತ ನಿಂತಳು.

ಉಪ್ಪಿಟ್ಟು ಗಪಗಪನೆ ತಿನ್ನುತ್ತಿದ್ದ ವೆಂಕಟಯ್ಯನಿಗೆ ತುತ್ತು ಗಂಟಲಲ್ಲಿ ಸಿಕ್ಕಿ "ಲೇ.. ಮಂಜಿ ನೀರು ಕೊಡ್ತಾರೇ " ಅಬ್ಬರಿಸಿದರು.

"ಅಯ್ಯೋ ಯಾಕಾಂಗೆ ಒಂದೇ ಸಮ್ನೆ ಕೂಗಾಡ್ತೀರಾ? ಪಾಪುನ ಕಾಲೇಜಿಗೆ ಕಳಿಸ್ದೆ. ನೀರು ಅಲ್ಲೆ ಎದುರಿಗೆ ಇವೆಯಲ್ಲ"

"ಎಲ್ಲಿ? ಹಾಂ ಬಿಡು ನಾನು ನೋಡ್ಲಿಲ್ಲ" ಎನ್ನುತ್ತ ಲೋಟದಲ್ಲಿನ ನೀರು ಕುಡಿಯತೊಡಗಿದರು.

"ನೋಡ್ಲಿಲ್ಲ! ನೋಡೋಕೆ ಕಣ್ಣು ಸರಿಯಾಗಿ ಕಾಣ್ಬೇಕಲ್ಲ" ಎಂದು ಗಂಡನ ಅಂಧತೆಯನ್ನು ಚೇಷ್ಟೆ ಮಾಡಿದಳು

"ಲೇ ರಾಜನಾ ಕರೆಯೆ ಸ್ವಲ್ಪ"

"ಅವ್ನೆಲ್ಲಿ ಇದ್ದಾನೆ? ಹೋದ ಅಂತ ಹೇಳಿದ್ನಲ್ಲ"

"ಹೋಗೇ ಬಿಟ್ನಾ?"

"ಹೂಂ "

"ಅವ್ನಿಗೆ ಟ್ರಾನ್ಸ್‌ಫರ್ ಆಗೋದ್ನ ಹೇಳ್ಬೇಕಿತ್ತಲ್ಲೆ"

"ಈಗ ಬಾಯಿ ಬಡ್ಕೊಂಡ್ರೆ ಏನ್ಬಂತು? ಆಫೀಸಿಗೆ ಹೊಗ್ತೀರಲ್ಲ,ಬೇಗ ಹೋದ್ರೆ ಸಿಗ್ತಾನೆ ಹೋಗಿ." ಅವಸರ ಪಡಿಸಿದಳು. ತಕ್ಷಣವೇ ಕೈ ತೊಳೆದು, ಬಟ್ಟೆ ಬದಲಿಸಿ,

ಕನ್ನಡಕ ಹಾಕಿಕೊಂಡು ಹೊರಗಡೆ ನಿಲ್ಲಿಸಿದ್ದ ಸುವೇಗವನ್ನು ಏರಿ ಹೊರಟೇಬಿಟ್ಟರು. ಸ್ವಲ್ಪ ದೂರದಲ್ಲಿ ನೇರವಾಗಿ, ಗಂಭೀರವಾಗಿ ನಡೆಯುತ್ತಿದ್ದವನ ಬಳಿಗೆ ಹೋಗಿ ಸುವೇಗ ನಿಲ್ಲಿಸಿದರು.

ರಾಜು ಎಚ್ಚೆತ್ತು ಏನೆಂದು ಕೇಳುವ ಮುನ್ನವೇ "ಹಾಂ .ಪಾಪು ನಿಂಗೆ ಒಂದ್ವಿಷಯ ಹೇಳೋದು ಮರ್‍ತ್ಬಿಟ್ಟೆ. ನನಗೆ ಮಂಗ್ಳೂರಿಗೆ ಟ್ರಾನ್ಸಫರ್ ಆಗಿದೆ. ಅದಕ್ಕೆ ನಿನ್ನ ಟಿ.ಸಿ , ಕ್ಯಾರಕ್ಟರ್ ಸರ್ಟಿಫಿಕೇಟ್ ಎಲ್ಲ ತೆಗೆದುಕೊಂಡ್ಬಿಡು "

"ಅಲ್ಲ ಕಣಪ್ಪಾ, ಅದೇ ಬೇರೆ ಯೂನಿವಾರ್ಸಿಟಿ, ಇದು ಬೇರೆ ಯೂನಿವಾರ್ಸಿಟಿ ಆಗಿರೋದ್ರಿಂದ ಸ್ವಲ್ಪ ತೊಂದ್ರೆಯಾಗುತ್ತೆ"

"ಹೌದಲ್ವ? ಈಗ ಏನ್ಮಾಡೋದು? ಮತ್ತೊಂದು ವರ್ಷ ಪೂರ್ತಿ ಇಲ್ಲೇ ಇರ್ಬೇಕಾಗುತ್ತೋ ಏನೋ?" ಚಿಂತಿಸಿ ನುಡಿದರು.

"ಅಷ್ಟೇನು ತೊಂದ್ರೆ ಆಗಲ್ಲಪ್ಪ. ಯೂನಿವಾರ್ಸಿಟಿ ಛೇಂಜ್ ಮಾಡಿಸ್ಕೋಳಕ್ಕೆ ನೂರು ರೂಪಾಯಿ ಏನೋ ಕಟ್ಬೇಕಂತೆ" ಎಂದ ರಾಜು.

"ಹೌದೇನು? ಸರಿ ಕಟ್ಟಿದ್ರಾಯ್ತು. ಇವತ್ತು ಅದೇನೂಂತ ಸ್ವಲ್ಪ ಆಫೀಸ್ನಲ್ಲಿ ವಿಚಾರ್ಸು. ಇಲ್ಲಾಂದ್ರೆ ನಾನೇ ಬರಲೋ?" ಕೇಳಿದರು.

"ಬೇಡಾ, ನಾನೇ ಹೋಗ್ತೀನಿ. ನಾನು ಈ ಬಾರಿ ಎಲೆಕ್ಷನ್ನಿಗೆ ನಿಲ್ಬೇಕೂಂತ ಇದ್ದೆ. ಹಾಗಾದ್ರೆ ಈ ಆಸೆ ಕೈ ಬಿಟ್ಬಾಗೆ, ನಮ್ಮ ಕ್ಲಾಸಿನ ಹುಡುಗ್ರೆಲ್ಲ ಬಹಳ ಒತ್ತಾಯ ಮಾಡ್ತಿದ್ರು". ಎಂದ.

"ಸುಮ್ನೆ ಅದೆಲ್ಲ ಯಾಕೆ, ಧಾಂಧಲೆ ಏಳಿಸೋಕೆ? ಹಾಂ ಪಾಪು ಇನ್ನೊಂದು ವಾರದಲ್ಲಿ ಎಲ್ಲ ರೆಡಿಯಾಗ್ಬಿಡಬೇಕು ತಿಳಿತಾ?'' ಎಂದು ಹೊರಟರು.

"ಸರಿಯಪ್ಪ"

"ಹುಂ ನಾನು ಹೋಗ್ತೀನಿ. ನೀನು ಹುಷಾರಾಗಿ ಹೋಗು" ಎನ್ನುತ್ತ ಸುವೇಗ ಚಾಲು ಮಾಡಿದರು. ನಿಧಾನವಾಗಿ ಮುಂದಕ್ಕೆ ಹೊರಡುತ್ತಿದ್ದಂತ ಹಿಂದೆ ತಿರುಗಿ "ರಸ್ತೆ ಮಧ್ಯ ಹೋಗ್ಬೇಡಾ" ಎಂದೆಚ್ಚರಿಸಿದರು.

"ಹೂಂ " ಗುಟ್ಟಿದ.

"ಆ ಕಡೆ ಈ ಕಡೆ ನೋಡ್ಕೊಂಡು ಹೋಗು" ಎಂದರು ಗಟ್ಟಿಯಾಗಿ.

"ಸರಿ ನಾನು ಹೋಗ್ತೇನೆ ನೀನು ಮುಂದೆ ನೋಡು ಲಾರಿ ಬರ್‍ತಿದೆ." ಎಂದ ರಾಜು ಜೋರಾಗಿ ಕೂಗಿದ ಮೇಲೆ ಹೊರಟರು.

೨

ಮಂಗಳೂರನ್ನು ಸೇರಿ ಅಂದಿಗೆ ನಾಲ್ಕನೇ ದಿನ. ಹಿಂದಿನ ಮೂರು ದಿನಗಳಂತೆ ಈ ದಿನವೂ ಗೆಜ್ಜೆಯ ನಾದ ಹಿತವಾಗಿ ಬೆಳಗಿನ ತಂಗಾಳಿಯೊಂದಿಗೆ ಕೇಳಿಸುತ್ತಿತ್ತು. ರಾಜನಿಗೆ ನಿದ್ರೆ ಭಂಗ ತಂದದ್ದು "ಧ ಧ್ವನಿ" ಸಂಗೀತ ನೋಡುವ ತವಕದಿಂದ ಎದ್ದು ಆವಸರಕ್ಕೆ ಬರೀ ದೇಹಕ್ಕೆ ಹೆಗಲ ಮೇಲೆ ಟವೆಲ್ ಹಾಕಿಕೊಂಡು ಹೊರಟ.

ಹೊಸ ಊರು, ಹೊಸ ಮನೆ ಪರಿಸರವಾದ್ದರಿಂದ ಅವಸರವಿಲ್ಲದೆ ಕೆಳಗಿಳಿದು ಹಿಂಬಾಗಿಲ ಕಡೆ ನಡೆದ. ನಾದದ ಸದ್ದು ಅಲೆ ಅಲೆಯಾಗಿ ಏರುತ್ತಿತ್ತು. ನಿಧಾನವಾಗಿ ಬಾಗಿಲು ತೆರೆದ. ಹಿಂಭಾಗದಲ್ಲಿ ವಿಶಾಲವಾದ ಕಾಂಪೌಂಡ್, ಸುಮಾರು ಐದುಅಡಿ ಗಳಷ್ಟು ಎತ್ತರ ಇದ್ದು, ಮನೆಗಳ ಅಂತರ ಮುವ್ವತ್ತು ಅಡಿಗಳಷ್ಟು ದೂರವಿತ್ತು.

ನಿಧಾನವಾಗಿ ಹೊರನಡೆದು ಎರಡೆಜ್ಜೆ ಮುಂದೆ ಹೋದವನು ಹಾವನ್ನು ಕಂಡು ಹಿಮ್ಮೆಟ್ಟುವಂತೆ ಗಕ್ಕನೆ ನಿಂತು ನೋಟ ತೀಕ್ಷ್ಣಗೊಳಿಸಿದ. ತರುಣಿಯೊಬ್ಬಳು ತಾನು ಕಲಿತ ಭರತನಾಟ್ಯವನ್ನು ಯಾರ ಮಾರ್ಗದರ್ಶನವಿಲ್ಲದೆ ಒಳ್ಳೆಯ ಹದಕ್ಕೆ ತರುವ ಪ್ರವೀಣೆಯಂತೆ ನರ್ತಿಸುತ್ತಿದ್ದಳು. ನೃತ್ಯದ ಉಡುಪು ಧರಿಸಿ, ತುರುಬಿನಂತೆ ಜಡೆ ಗಂಟು ಹಾಕಿದ್ದಳು. ಸುಶ್ರಾವ್ಯದಿಂದ ಸಂಗೀತ ಹಾಡುವವರು ಮಾತ್ರ ನೋಟಕ್ಕೆ ಎಟುಕಲಿಲ್ಲ. ದೃಷ್ಟಿ ಕೆಳಗಿಳಿಸಿದಾಗ ಚಿಕ್ಕ ಟೇಬಲ್ ಮೇಲೆ ಟೇಪ್ ರೆಕಾರ್ಡ್ ಕಾಣಿಸಿತು ಹಾಡುತ್ತಿದ್ದದ್ದು ಅದೇ ಎಂದು ಗುರ್ತಿಸಿದ. ಚೆನ್ನು ಕೋರಿ ನರ್ತಿಸುವ ಚಲುವೆಯ

ಮೊಗ ನೋಡುವ ಆಸೆಯಾಯಿತು. ಆದರೆ ಅರ್ಧದಷ್ಟು ಓರೆಯಾಗಿ ಮುಖ ತೋರುತ್ತಿದ್ದ ಆ ಯುವತಿ ಅವನಲ್ಲಿ ನೋಡುವ ತವಕವನ್ನು ಹೆಚ್ಚಿಸಿದಳು. ಮುಖ ತೋರದಿದ್ದರೂ ಚಿಂತೆಯಿಲ್ಲ, ಪುಕ್ಕಟೆ ನೃತ್ಯ ನೋಡಲು ಅವಕಾಶ ಮಾಡಿಕೊಟ್ಟಿದ್ದರಿಂದ ಅದನ್ನೆ ಮನ ತುಂಬಿ, ಕೈ ಕಟ್ಟಿ ಬಳಿಯ ಕಂಬಕ್ಕೆ ಒರಗಿ ನೋಡುತ್ತ ನಿಂತ.

ಮನ ಮೋಹಕ ಭಾವ ಭಂಗಿಗಳೆಲ್ಲವನ್ನು ನೀಡಿದ ನರ್ತಕಿ ಒಂದು ಪೂರ್ತಿ ಹಾಡಿನ ನೃತ್ಯವನ್ನು ಪೂರೈಸಿದಳು. ಅಷ್ಟರಲ್ಲಿ "ಲಕ್ಷ್ಮೀ ಲಕ್ಷ್ಮೀ . ಆಯ್ತೇನೆ" ಎಂದು ಒಳಗಿನಿಂದ ಹೆಣ್ಣಿನ ದನಿಯೊಂದು ಕೇಳಿಸಿತು.

"ಆಯ್ತು ಮಮ್ಮೀ ಬಂದೇ" ಎನ್ನುತ್ತ ಸಂಪೂರ್ಣ ತನಗೆದುರಾದ ಹುಡುಗಿಯನ್ನು ಸೂಕ್ಷ್ಮದರ್ಶಕ ಯಂತ್ರದಿಂದ ವೀಕ್ಷಿಸುವಂತೆ ದಿಟ್ಟಿಸಿದ. ಕ್ಷಣ ಹೊತ್ತಷ್ಟೆ ಮತ್ತೆ ಓರೆಯಾದ ಹುಡುಗಿ ಹಾಡುತ್ತಿದ್ದ ಟೇಪ್ ರೆಕಾರ್ಡ್‌ನ್ನು ನಿಲ್ಲಿಸಿದಳು. ಒಳಗಿನಿಂದ ಅಲ್ಲಿಗೆ ಬಂದ ಆಕೆಯ ತಾಯಿ ಸಾವಿತ್ರಿ ನೀಳವಾದ ರಾತ್ರಿಯ ಉಡುಪನ್ನೆ ತೊಟ್ಟಿದ್ದಳು. ಅವಳ ನೋಟ ಮೈ ಮಾಟವೆಲ್ಲ ವಯಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳಲು ಅವಣಿಸುವಂತೆ ಕಂಡಳು.

"ಬಾರೆ ಅಂದ್ರೆ ಬರ್‍ಬೇಕು. ಅದೇನು ಭರತನಾಟ್ಯದ ಹುಚ್ಚು ಹಿಡಿದಿದೆಯೊ ನಿನಗೆ" ಅಸಹನೆಯಿಂದ ನುಡಿದಳು.

"ನಿಮ್ದೆಂತ ಹಟದ ಸ್ವಭಾವ ಮಮ್ಮಿ, ನಾನು ಬೇಡ ಎಂದಾಗ ಸೇರಿಸಿದ್ರಿ. ಈಗ ಬೇಕು ಅಂದ್ರೆ ಬಿಟ್ಬಿಡು ಅಂತೀರಿ ಅವತ್ತು ನಮ್ಮ ಮಾಸ್ಟರ್ ಊರು ಬಿಟ್ಟು ಹೊಗ್ಬೇಕಾದ್ರೆ ಏನೇಳಿದ್ರು ಗೊತ್ತಾ? ಕಲೆಗೆ ಸಾವಿಲ್ಲ. ಸರಿಯಾಗಿ ಕಲಿತವರಿಗೆಲ್ಲ ಸಂತೃಪ್ತಿಯೊಂದಿಗೆ ಅಮರರೂ ಆಗ್ತಾರಂತೆ ಅದೇನೆ ಇರಲಿ, ನನಗಂತೂ ಇದ್ರಿಂದ ಬಹಳ ತೃಪ್ತಿ ಸಿಗುತ್ತೆ" ಪ್ರತಿಯಾಗಿ ಮಾರುತ್ತರಿಸಿದಳು.

"ಸರಿ ಸರಿ ಇವತ್ತಿಂದು ಮುಗಿಯಿತು ತಾನೆ?" ಮಗಳ ಬುದ್ಧಿವಂತ ನುಡಿಗೆ ತಾಳ್ಮೆಗೆಟ್ಟವಳಂತೆ ನುಡಿದಳು

"ಹುಂ ತಗೋ ಮಮ್ಮಿ ಕ್ಯಾಸೆಟ್" ಎನ್ನುತ್ತ ಟೇಪ್‌ರೆಕಾರ್ಡನ್ನು ತಾನು ತೆಗೆದುಕೊಂಡು ತಾಯಿಯನ್ನು ಹಿಂಬಾಲಿಸಿದಳು.

ಎಲ್ಲವನ್ನು ಅಲ್ಲೇ ನಿಂತು ವೀಕ್ಷಿಸಿ, ಆಲಿಸಿದ ರಾಜುವಿನ ತಲೆಯಲ್ಲಿ ಅನೇಕ ಯೋಚನೆಗಳನ್ನು ತಂದಳು ಫೇಲಾದಾಗ ಕುಗ್ಗದ, ಪಾಸಾದಾಗ ಹಿಗ್ಗದ ರಾಜನ ತಲೆಯಲ್ಲಿ ಹೊಸ ಅಲೆಯ ಯೋಚನೆಯನ್ನು ಪ್ರಥಮವಾಗಿ ತಂದದ್ದು ಲಕ್ಷ್ಮಿಯ ಸ್ಮರಣೀಯ ಮೋಹಕ ಚೆಲುವು "ಆಕೆಗೆ ತಾಯಿಯ ಬಣ್ಣವೆ ಇದ್ದರೂ, ಸೌಂದರ್ಯದಲ್ಲಿ ಮಾತ್ರ ಇದುವರೆಗೆ ತಾನು ಕಂಡ ಚೆಲುವೆಯರೆಲ್ಲರ ಅತ್ಯಂತ ಬಲಕ್ಕೆ. ಹೆಸರು? ಹಾಂ ಈಗ ಜ್ಞಾಪಕ ಬಂತು ಲಕ್ಷ್ಮಿ! ಒಳ್ಳೆ ಲಕ್ಷಣವಾಗೇ ಇದ್ದಾಳೆ ಅಷ್ಟೇನು ಎತ್ತರವಲ್ಲದ ತೆಳುದೇಹ, ಉದರ, ವಕ್ಷಾದಿಯಾಗಿ ಬೇರ್ಪಡಿಸುವ ಉಬ್ಬು ತಗ್ಗಿನ ರೇಖೆಗಳು ನೀಳನಾಸಿಕ, ವಿಶಾಲನಯನ, ಬಿಲ್ಲಿನಂತೆ ಬಾಗಿದ ಭ್ರೂಲತೆಗಳು, ರಸಭರಿತ ಚೆಂದುಟಿ. ಇದುವರೆಗೆ ಪ್ರೇಮದಲ್ಲಿ, ಹೆಣ್ಣಿನ ಸೌಂದರ್ಯದಲ್ಲಿ ನಾಸ್ತಿಕ, ಇನ್ನು ಮುಂದೆ ಆಸ್ತಿಕ. ಆಮೇಲೆ? ಭಕ್ತ!" ಹಿಂದು ಯೋಚನೆ ತುಂಡಾಯಿತು.

ನಾವು ಇಲ್ಲೇಕೆ ನಿಂತೆ?' ಹಿಂದಿನಿಂದ ತಾಯಿಯ ನುಡಿ ಕೇಳಿಸಿತು "

"ಅಮ್ಮಾ ಬಾತ್‌ರೂಮಿಗೆ ಬಂದೆ ದಾರಿ ತಪ್ಪೋಯ್ತು ಅದಕ್ಕೆ ಯೋಚ್ನೆ ಮಾಡ್ತಾ ನಿಂತೆ" ಎಂದ.

'ಮನೆ ಬದ್ಲಾಗಿದೆಯಲ್ಲ ಅದಕ್ಕೆ ಹಿಂಗಾಗುತ್ತೆ ಹೋಗು" ಮಗನ ಸುಳ್ಳನ್ನು ತಾನೆ ಗಟ್ಟಿ ಮಾಡಿದಳು. ರಾಜನಿಗೂ ಅಷ್ಟೆ ಬೇಕಾಗಿತ್ತು.

  

ಕಾಲೇಜಿಗೆ ಸೇರಿದ ರಾಜು ತೃತೀಯ ಬಿ. ಎ.ಯ 'ಸಿ' ವಿಭಾಗವನ್ನು ಹುಡುಕಿಕೊಂಡು ಹೊರಟಿದ್ದ. ಇಬ್ಬರು ಮೂವ್ವರು ಎದುರಾದ ಹುಡುಗರನ್ನು ವಿಚಾರಿಸಿದಾಗ ಗೊತ್ತಿಲ್ಲ ಎಂಬ ಸುಲಭ ಉತ್ತರ ಧಾರಾಳವಾಗಿ ಸಿಕ್ಕಿತು.

"ಥ್ಯಾಂಕ್ಸ್. ನಾನು ಹುಡುಕಿಕೊಳ್ತೀನಿ ಬಿಡಿಸಾರ್" ಎಂದು ರಸೀದಿಯನ್ನು ಅವರಿಂದ ವಾಪಾಸು ಪಡೆದು ಮುಂದೆ ಹೊರಟ, ಇಬ್ಬರು ವಿದ್ಯಾರ್ಥಿಗಳು ಸ್ವಲ್ಪ ನಗೆ ಗಲಾಟೆಯೊಂದಿಗೆ ಮಾತನಾಡಿಕೊಳ್ಳುತ್ತ ಎದುರಾದವರನ್ನು ತಡೆದು "ರೀ ಫೈನಲ್ ಬಿ ಎ 'ಬಿ' ಸೆಕ್ಷನ್ ಕ್ಲಾಸ್ ಎಲ್ಲಿ ತಗೋತ್ತಾರೆ?" ಕೇಳಿದ.

ಅವರಿಬ್ಬರು ಮುಖ ದಿಟ್ಟಿಸಿದರು "ಯಾವ್ದು ಫೈನಲ್ ಬಿ ಎ. 'ಬಿ' ಸೆಕ್ಷನ್ನಾ" ಧೃಡ ಪಡಿಸಿಕೊಳ್ಳುವಂತೆ ಕೇಳಿದನೊಬ್ಬ.

"ಹೌದು."

"ಅದು ನಮ್ ಕ್ಲಾಸೇ. ಕಂಗ್ರಾ. ಅಲ್ಲಿ ಕಾಣಿಸುತ್ತಲ್ಲ 24ನೇ ನಂಬರ್ ರೂಮ್ ಅದೇ, ಕ್ಲಾಸ್ ತಗೊಂಡಿದ್ದಾರೆ, ಹೋಗೋದಾದ್ರೆ ಹೋಗಿ, ಬಿಡೋದಾದ್ರೆ ಬಿಡಿ" ಎಂದವರೇ ಮುಂದೆ ನಡೆದರು.

ಮೊದಲಿನ ದಿನವೇ ಚಕ್ಕರ್ ಹೊಡೆಯುವುದು ಶುಭಕರವಲ್ಲ. ತರಗತಿಗೆ ಹೋಗಿ ಬಿಡುವುದೇ ಸರಿಯೆಂದು ನಿರ್ಧರಿಸಿದ ಈ ಕಡೆಯಿಂದ ಒಮ್ಮೆ ನೋಡಿಕೊಂಡು ಹೋಗಿ, ಆ ಕಡೆಯಿಂದ ಒಳಗೆ ಪ್ರವೇಶಿಸುವುದೆಂದು ತೀರ್ಮಾನಿಸಿದ. 24ನೆ ನಂಬರ್ ರೂಂ ಎದುರಿನಿಂದಲೇ ನೋಡುತ್ತ ನಡೆದ. ಆಶ್ಚರ್ಯವಾಯಿತು. ಮೊದಲಿನ ಬೆಂಚಿನಲ್ಲಿ ಬೆಳಗ್ಗೆ ಕಂಡಿದ್ದ ಬೆಡಗಿ! ಹಾಗೆ ಲಕ್ಚರನ್ನು ನೋಡಿದ. ಅವರು ತಮ್ಮ ಕರ್ತವ್ಯ ಪೂರೈಸುವವರಂತೆ ಪಾಠ ಹೇಳುತ್ತಿದ್ದರು ನಾಲ್ಕೆಜ್ಜೆ ಮುಂದುವರಿದು ಮತ್ತೆ ಹಿಂತಿರುಗಿ ಬಂದು ಕ್ಲಾಸ್ ರೂಮಿನ ಬಾಗಿಲಲ್ಲಿ ನಿಂತು "ಮೇ ಐ ಗೆಟಿನ್ ಸಾರ್?" ಎಂದ ವಿದ್ಯಾರ್ಥಿಗಳ ದೃಷ್ಟಿಯೆಲ್ಲ ಅತ್ತ ಹೊರಳಿತು

ಅಧ್ಯಾಪಕರು 'ಎಸ್' ಎಂದು ಅನುಮತಿ ನೀಡುತ್ತಿದ್ದಂತೆ ಒಳ ನಡೆದು ಮಧ್ಯದ ಬೆಂಚೊಂದರಲ್ಲಿ ಖಾಲಿಯಿದ್ದ ಜಾಗದಲ್ಲಿ ಕುಳಿತ. ಅನುಭವಿ ಅಧ್ಯಾಪಕರಾದ ಅವರು ಪಾಠ ನಿಲ್ಲಿಸಿ "ಏನು ಹೊಸ ಹುಡುಗನಂತೆ ಕಾಣ್ತೀಯ?" ಎಂದರು

ರಾಜು ಎದ್ದು ನಿಂತು "ಹೌದು ಸಾರ್" ತಲೆ ಹಾಕಿ ನುಡಿದ.

"ಏನು ನಿನ್ನ ಹೆಸರು? ಎಲ್ಲಿಂದ ಬಂದದ್ದು? ಏಕೆ? "ಒಮ್ಮೆಲೇ ಪ್ರಶ್ನಿಸಿದರು.

"ನನ್ನ ಹೆಸರು ರಾಜು. ಬೆಂಗಳೂರಿಂದ ಬಂದಿದ್ದು ನಮ್ಮ ತಂದೆಗೆ ಟ್ರಾನ್ಸ್‌ಫರ್ ಆಯ್ತು ಸಾರ್."

ರಾಜನ ನೀಳದೇಹ, ಎತ್ತರ, ಸ್ಫುರದ್ರೂಪಿತನಕ್ಕೆ ಸರಿಯಾಗಿ ಬುದ್ಧಿವಂತನೆಂದು ಭಾವಿಸಿ ವಿಶೇಷ ಕುತೂಹಲದಿಂದ ಫಸ್ಟ್ ಇಯರ್, ಸೆಕೆಂಡ್ ಇಯರ್, ರಿಸಲ್ಟ್ ಏನಾಗಿದೆ? ಕೇಳಿದರು. ವಿದ್ಯಾರ್ಥಿಗಳೆಲ್ಲರಿಗೂ ಬೇರೆ ಪ್ರಶ್ನೆಗಳಿಗಿಂತ ಈ ಪ್ರಶ್ನೆಯಲ್ಲಿ ಆಸಕ್ತಿ ಇದ್ದುದರಿಂದ ತಕ್ಷಣ ನಿಶ್ಶಬ್ದ ವಾತಾವರಣ ಮೂಡಿಸಿಕೊಟ್ಟರು.

ರಾಜು ಮುಚ್ಚುಮರೆಯಿಲ್ಲದೆ "ಫಸ್ಟ್ ಇಯರ್‌ನಲ್ಲಿ ಕನ್ನಡ ಒಂದು ಪಾಸಾಗಿದೆ" ಎಂದು ನಿಲ್ಲಿಸಿದ. ಎಷ್ಟೋ ವಿದ್ಯಾರ್ಥಿಗಳ ಕಣ್ಣು ಸಂತೋಷದಿಂದ ಹೊಳೆದವು. ಕೆಲವರ ಮುಖಗಳು ನಗುವಿನಿಂದ ಬೀಗಿದವು ಒಂದು ವರ್ಷದ ಫಲಿತಾಂಶ ಕೇಳಿ ಮುಗಿದಿತ್ತು. ಎಲ್ಲರಲ್ಲೂ ಎರಡನೇ ವರ್ಷದ ಫಲಿತಾಂಶ ಕೇಳುವ ತವಕ ಹೆಚ್ಚಿತು. ತಾನೇ ಮುಂದುವರಿಸಿದ "ಸೆಕೆಂಡ್ ಇಯರ್‌ನಲ್ಲಿ ಕನ್ನಡ ಒಂದು ಬಿಟ್ಟು ಉಳಿದವೆಲ್ಲ ಫೇಲಾಗಿವೆ ಸಾರ್" ಎಂದು ನಿಲ್ಲಿಸಿದ.

ಹುಡುಗರೆಲ್ಲ ' ಓ... ' ಎಂದು ಉದ್ಗರಿಸಿ ಅವನ ದುರದೃಷ್ಟಕ್ಕೆ ನಕ್ಕು ಸಂತೋಷ ವ್ಯಕ್ತಪಡಿಸಿದರು. ಈ ಸಂದರ್ಭದಲ್ಲಿ ರಾಜು ಹಿಂಭಾಗದಿಂದ ಎಲ್ಲರೂ ನಗುವಾಗ ಲಕ್ಷ್ಮಿಯನ್ನೂ ಗಮನಿಸಿದ. ಇತರರಂತೆ ಆಕೆ ಹೆಚ್ಚು ನಗದೆ ಒಮ್ಮೆ ನಕ್ಕು ಗಂಭೀರವಾದುದನ್ನು ಗಮನಿಸಿದ. ಲಕ್ಷ್ಮಿ ಸಂಪೂರ್ಣವಾಗಿ ಸೆಳೆಯತೊಡಗಿದಳು. ಗಲಾಟೆಯ ನಡುವೆ ಅಧ್ಯಾಪಕ "ಕೂತ್ಕೋ, ಸಪ್ಲಿಮೆಂಟರಿಯಲ್ಲಿ ಎಲ್ಲ ಕಟ್ಟಿ ಪಾಸು ಮಾಡ್ಕೋ" ಎಂದು ಪಾಠದ ಕಡೆ ಗಮನಹರಿಸಿದರು.

  

ರಾಜನಿಗೆ ಬೆಳಗಿನ ಜಾವಕ್ಕೆ ಸರಿಯಾಗಿ ಎಚ್ಚರವಾಯಿತು. ನಿದ್ರೆಗೆ ಪ್ರಯತ್ನ ಪಟ್ಟಂತೆಲ್ಲ ಲಕ್ಷ್ಮಿಯ ನೃತ್ಯ ನಿದ್ದೆಯನ್ನು ದೂರ ಮಾಡಿತು. ಹೊರಗಡೆ ಸ್ವಲ್ಪ ಬೆಳಕು ಮೂಡುತ್ತಿದ್ದಂತೆ ನಿಧಾನವಾಗಿ ಟೇಪ್ ರೆಕಾರ್ಡ್‌ನಿಂದ ಸಂಗೀತ ಹರಿದು ಬರತೊಡಗಿತು. ಜೊತೆಯಲ್ಲಿಯೆ ಗೆಜ್ಜೆಯ ಸದ್ದನ್ನು ಆಲಿಸಿ ಎದ್ದು ಹೊರಟ. ಹಿಂದಿನ ದಿನ ನಿಂತ ಜಾಗದಲ್ಲೇ ಕಂಬಕ್ಕೊರಗಿ ನಿಂತ.ಈ ದಿನವೇ ಬೇರೆ ಹಾಡು, ಹಾಡಿಗೆ ಸರಿಯಾಗಿ ಬೇರೆ ಭಂಗಿಯ ನೃತ್ಯ ಸೆಲ್ವಾರ್ ಕಮೀಜ್‌ಧಾರಿಣಿ ಆಸಕ್ತಿಭರಿತಳಾಗಿ ನರ್ತಿಸುತ್ತ ಅತ್ತ ಇತ್ತ ತಿರುಗಿದರೂ, ಅಲ್ಲೇ ನಿಂತು ನೃತ್ಯ ವೀಕ್ಷಿಸುತ್ತಿದ್ದ ರಾಜು ಮಾತ್ರ ದೃಷ್ಟಿಗೆ ಬೀಳಲಿಲ್ಲ. ನಾಟ್ಯ ವೀಕ್ಷಣೆಯಲ್ಲಿ ಭಾವಪರವಶನಾಗಿದ್ದ ರಾಜು, ಅಷ್ಟೇ ತಲ್ಲೀನಳಾದ ಲಕ್ಷ್ಮಿಯು ನೃತ್ಯದ ಮುಕ್ತಾಯದಲ್ಲಿ ವೇಗವನ್ನು ಕಡಿಮೆಗೊಳಿಸುತ್ತಿದ್ದಂತೆ ರಾಜು ಸಂತೋಷ ಉಕ್ಕಿ ಬಂದು ತಡೆಯಲಾರದೆ, ಚಪ್ಪಾಳೆ ತಟ್ಟುತ್ತ "ಓ ಫೈನ್... ಫೈನ್ ಒನ್ಸ್ ಮೋರ್" ಎಂದು ಕೂಗಿದ. ಯಾವುದೇ ಫಂಕ್ಷನ್ನಿನಲ್ಲಿ ಚನ್ನಾಗಿ ಹಾಡಿದವರಿಗೆ, ನರ್ತಿಸಿದವರಿಗೆ ಪ್ರೋತ್ಸಾಹಿಸುವಂತೆ.

ಅನಿರೀಕ್ಷಿತ ಸದ್ದಿಗೆ ಬೆದರಿ ಗಕ್ಕನೆ ತಿರುಗಿದ ಲಕ್ಷ್ಮಿ ರುದ್ರಾವತಾರವನ್ನೇ ತಾಳಿದಳು ಕೆರಳಿದ ಸರ್ಪದಂತೆ ಬುಸ್‌ಗುಡುತ್ತ, ಮೂಗರಳಿಸಿ ಕಣ್ಣು ಕಿರಿದುಗೊಳಿಸಿ ನೋಡಿದಳು. ಅವಳ ದೃಷ್ಟಿಯಲ್ಲಿ ರಾಜುವಿನ ವೀಕ್ಷಣೆ ಅಕ್ಷಮ್ಯ ಅಪರಾಧವಾಗಿತ್ತು. ಪ್ರತಿಯಾಗಿ ಕೊಬ್ಬಿದ ದೇಹದವನು ಮುಗುಳ್ನಗೆಯೇ ಸಮರ್ಪಕ ಉತ್ತರ ನೀಡುವಂತೆ ನಿಂತಿದ್ದ. ತಲೆ ಓರೆ ಮಾಡಿ ಮೋಹಕ ಭಂಗಿಯಲ್ಲಿ ನಿಂತ ರಾಜನನ್ನು ದೃಷ್ಟಿ ಯುದ್ಧದಲ್ಲಿ ಎದುರಿಸಲಾರದೆ ಕೆರಳಿ, ಟೇಪ್‌ರೆಕಾರ್ಡ್ ಎತ್ತಿಕೊಂಡು ರಭಸದಿಂದ ಒಳ ನಡೆದಳು.

  

ರಾಜನ ತಲೆಯಲ್ಲಿ ಯೋಚನೆ ಆರಂಭವಾಯಿತು 'ಎಲಾ–ಇವಳಾ! ಒನ್ಸ

ಮೌರಂತ್,' ಹೊಗಳಿದ್ರೂ ಒಳ್ಳೇ ಸುಂಟರ ಗಾಳಿ ಹೋದಾಗೆ ಹೋದ್ಳಲ್ಲ. ಕ್ಲಾಸಿನಲ್ಲಿನ ಮುಖ ಪರಿಚಯದಿಂದಲಾದ್ರೂ, ಆ ಚಲುವೆ ಮುಖ ಅರಳಿಸಿದಿದ್ರೆ ಏನಾಗ್ತಿತ್ತು? ನಾನು ಹಿಂದೆ ಹೆಣ್ಣುಗಳನ್ನು ದ್ವೇಷಿಸುವಂತೆ ಇವಳೂ ಗಂಡ್ಸರನ್ನೇನಾದ್ರು ದ್ವೇಷಿಸುತಿದ್ರೆ? ತಾನು ಪ್ರಶ್ನಿಸಿಕೊಂಡ. ನಂತರ ತಾನೆ- 'ದ್ವೇಷಿಸಿದರಾಯ್ತೆ? ವಯುಸ್ಸು, ಯೌವನ ದೇಹ ಬಿಟ್ಟು ಎಲ್ಲಿ ಹೋಗುತ್ತೆ? ನಾನಂತೂ ಇದೂವರೆಗೆ ಯಾವ ಹೆಣ್ಣಿನ ತಂಟೆಗೂ ಹೋಗಿಲ್ಲ. ಇನ್ನು ಹೋದ್ರೆ ಇವ್ಳ ತಂಟೆ ಮಾತ್ರ ಆಕೆ ಒಲಿದಿದ್ರೆ ನಾನು ಬಿಡ್ಬೇಕಲ್ಲ'- ಏಕೈಕ ಮಗನಾಗಿ ಹುಟ್ಟಿ, ಮಾತಿನಲ್ಲಿ, ಹಣದಲ್ಲಿ ಬಯಸಿದುದೆಲ್ಲವನ್ನು ಪಡೆದು ಮೆರೆಯುವಂತೆ, ತನ್ನ ಇಚ್ಛೆಯಂತೆ ಮನಸ್ಸಿಗೆ ಬಂದ ಹೆಣ್ಣಿನ ವಿಷಯದಲ್ಲೂ ಮೆರೆಯುವ ಬಯಕೆ ಹೊತ್ತ ರಾಜುವಿನ ಕುಡಿ ಮೀಸೆ ಹಿಗ್ಗಿ ಕಣ್ಣುಗಳು ಹೊಳೆದವು.

  

ಲಕ್ಷ್ಮಿಯ ಉಡುಪುಗಳು ಒಂದು ವಿಧದವಲ್ಲ ಸಾಮಾನ್ಯ ಲಂಗ ಜಾಕೇಟ್‌ನಿಂದ ಮ್ಯಾಕ್ಸಿ, ಪಂಜಾಬಿ, ಜರ್ಸಿ ಪ್ಯಾಂಟ್. ಪ್ರತಿದಿನವೂ ಒಂದೊಂದು ವಿಧದ ಬಟ್ಟೆ ಧರಿಸಿ ಮೆರೆಯುವ ಲಕ್ಷ್ಮಿ ಕಾಲೇಜಿನ 'ಬ್ಯೂಟಿಕ್ವೀನ್' ಎಂಬ ಬಿರುದು ಹೊತ್ತ ಮಹಾ ಸಿಡುಕಿ ತೀರ ಮರ್ಯಾದೆ ಬಿಟ್ಟ ಕೆಲವರನ್ನು ಬಿಟ್ಟರೆ ಉಳಿದವರಾರೂ ಅವಳ ಗೋಜಿಗೆ ಹೋಗದೆ ದೂರದಿಂದಲೇ ನೋಡಿ ತೃಪ್ತಿ ಹೊಂದಿ ಮರ್ಯಾದೆ ಕಾಪಾಡಿಕೊಳ್ಳುವರು ಇದಕ್ಕೆ ಕಾರಣವೂ ಇತ್ತು. ಯಾರೋ ಇಬ್ಬರು ಚುಡಾಯಿಸಿದ ತಪ್ಪಿಗೆ ಅವರಿಂದ ಕ್ಷಮಾಪಣೆ ಪತ್ರ ಬರೆಸಿಕೊಂಡ ದಿಟ್ಟೆ. ಗಂಡು ಹುಡುಗರೇನು ಸ್ನೇಹಿತೆಯರ ಹತ್ತಿರವೂ ಅವಳ ಬಾಯಿ ಬಿಗಿ ಬಹುಶಃ ಅವಳ ಗಾಂಭೀರ್ಯತೆಯೇ ಆಕೆಯ ಸೌಂದರ್ಯ ಸಾಧನಗಳಲ್ಲೊಂದು ಎಂದು ಹೇಳಬಹುದಿತ್ತು. ಈ ಆಕರ್ಷಣೆಗೆ ರಾಜನೂ ಒಳಗಾಗಿಯಾಗಿತ್ತು.

ಅತ್ಯಾಕರ್ಷಕ ರಕ್ತವರ್ಣದ ಲಂಗ, ಬಿಳೀಬ್ಲೌಸ್ ತೊಟ್ಟು ಬರುತ್ತಿದ್ದ ಅವಳನ್ನು ಇವತ್ತು ಮಾತನಾಡಿಸಲೇಬೇಕೆಂದು ನಿರ್ಧರಿಸಿ ಬಂದಿದ್ದ ರಾಜುವಿನ ದೃಷ್ಟಿಗೆ

ಬಿದ್ದಳು ತಡಮಾಡದೆ ಎರಡೆಜ್ಜೆ ಹಿಂಬಾಲಿಸಿದ ರಾಜು "ಹಲೋ ಮಿಸ್, ಎಕ್ಸ್‌ಕ್ಯೂಸ್ ಮೀ " ಎಂದ. ತನ್ನನ್ನೇ ಕರೆದಿರುವುದೆಂದು ಅರಿತ ಲಕ್ಷ್ಮಿಯ ಮುಖ ಸಿಡುಕಿನ ರೂಪ ತಾಳಿತು. ಹುಬ್ಬುಗಳು ವಕ್ರವಾದವು ನಿಧಾನವಾಗಿ ಧ್ವನಿ ಬಂದತ್ತ ತಿರುಗಿ ಒಲಿದ ಬಾಯಿ ಬಿಡಿಸಿ 'ಏನು?' ಸ್ಪಷ್ಟವಾಗಿ ಖಾರವಾಗಿ ಬೆಳಗಿನ ಅವನ ವೀಕ್ಷಣೆಯನ್ನು ಮನದಲ್ಲಿಟ್ಟುಕೊಂಡು ಕೇಳಿದಳು

ಕೂಡಲೆ ರಾಜು-"ನೋಡಿ ನಿಮಗೆ ತಿಳಿದಿರುವಂತೆ ನಾನು ಇಲ್ಲಿಗೆ ಹೊಸಬನಾಗಿ ಬಂದೆ. ಹೆಚ್ಚು ಕಡಿಮೆ ಒಂದು ತಿಂಗಳು ಕ್ಲಾಸ್ ನಡೆದಿವೆ" ಎನ್ನುತ್ತಿದ್ದಂತೆ ಮಧ್ಯದಲ್ಲಿಯೇ ತಡೆದು "ಈಗೇನಾಗ್ಬೇಕು ಅನ್ನೋದು ಮೊದ್ಲೇಳಿ?" ಪುರಾಣ ಸಹಿಸಲಾರದವಳಂತೆ ಕೇಳಿದಳು.

"ನೋಟ್ಸ್ ಬೇಕಿತ್ತು ಕೆಲವ್ರನ್ನ ಕೇಳಿದೆ, ಎಲ್ಲರೂ ಪೆಂಡಲಂ ತರಹ ತಲೆ ಅಲ್ಲಾಡಿಸಿಬಿಟ್ರು" ಎಂದು ತಲೆ ಅಲ್ಲಾಡಿಸಿ ತೋರಿಸಿದ.

"ಅಂದ್ರೆ ನಾನೀಗ ನೋಟ್ಸ್ ಕೊಡ್ಬೇಕಂತನಾ?"

"ಹೌದು, ಪ್ಲೀಸ್ ಕೊಡಿ. ನನ್ನ ಪಾಸು ಮಾಡ್ಸಿದ ಪುಣ್ಯ ನಿಮಗೆ ಬರುತ್ತೆ. ಇಲ್ಲೆಲ್ಲ ಹೊಸ ಹುಡುಗರೇ, ನಾನು ವಿದ್ಯಾರ್ಥಿನೇ ಅಲ್ಲ ಅನ್ನೋ ದೃಷ್ಟಿಲೀ ನೋಡ್ತಾರೇ" ಎಂದ.

"ನನಗೆಲ್ಲ ಗೊತ್ತು "

"ಏನು?" ಪ್ರಶ್ನಿಸಿದ.

"ನಿಮ್ಮಂತವರಿಗೆ ನೋಟ್ಸ್ ಕೊಟ್ರೆ ಏನಾಗುತ್ತೆಅನ್ನೋದು".''

"ಪ್ಲೀಸ್ ಒಮ್ಮೆ ಕೊಟ್ಟು ನೋಡಿ" ಬಿಡದೆ ಬೇಡಿದ.

"ಹೌದು ಒಮ್ಮೆ ಕೊಟ್ಟು ನೋಡಿ, ಆಮೇಲೆ ನಾವೂನೂ ಎಳ್ಕೊಂಡು ಮುಖ ನೋಡ್ಕಳ್ಳಿ ಅನ್ನೋ ಜನ ನೀವು" ಹೀಯಾಳಿಸತೊಡಗಿದಳು.

"ಏನು? ನಾನು ಹಾಗೆಲ್ಲ ಮಾಡುವವನೇ ಅಲ್ಲ. ನನ್ನ ವಿಷಯ ನಿಮಗೆ ಸರಿಯಾಗಿ ಗೊತ್ತಿಲ್ಲ". ಭರವಸೆ ಮೂಡಿಸುವವನಂತೆ ನುಡಿದ.

"ನಿಮ್ಮ ವಿಷಯ ಕಟ್ಕೊಂಡು ನನಗೇನಾಗ್ಬೇಕು? ನನಗೆ ಯಾರಿಗೂ ನೋಟ್ಸ್ ಕೊಟ್ಟು ಅಭ್ಯಾಸವಿಲ್ಲ. ಬೇರೆ ಕಡೆ ನೋಡಿ. ನನಗೆ ಕೊಡ್ಲಿಕ್ಕೆ ಆಗಲ್ಲ" ಎಂದು ಕತ್ತು ಕೊಂಕಿಸಿ ನುಡಿದು ರಭಸದಿಂದ ಅಲ್ಲಿ ನಿಲ್ಲದೆ ಬೆನ್ನು ತಿರುಗಿಸಿ ನಡೆದಳು. ಅವನಿಗೆ ಸ್ವಲ್ಪವಾದ್ರೂ ಅಪಮಾನಗೊಳಿಸುವ ಯತ್ನ ಸಫಲವಾಗಿತ್ತು.

ಅವಳು ಅತ್ತ ಹೋಗುತ್ತಿದ್ದಂತೆ, ಅವಳ ವರ್ತನೆಗೆ ರಾಜು ತನ್ನೊಳಗೆ ಗೊಣಗಿಕೊಂಡ "ಏನ್ ಮಹಾ ನೋಟ್ಸ್ ಕೊಟ್ಬಿಡ್ತಾಳೆನೋ ಅನ್ನೋ ಹಾಗೇ ಮಾತ್ನಾಡಿ, ಕೊನೆಗೆ ನನಗೆ ಯಾರಿಗೂ ನೋಟ್ಸ್ ಕೊಟ್ಟು ಅಭ್ಯಾಸವಿಲ್ಲಾಂತ ಎಷ್ಟು ನಯವಾಗಿ ಹೇಳೋದ್ಲು. ಅಷ್ಟಕ್ಕೂ ಇಷ್ಟೆಲ್ಲ ಏಕೆ ಮಾತ್ನಾಡಬೇಕಿತ್ತು? ಹೋಗ್ಲಿ ಬಿಡು ನಾನಾದ್ರೂ ಸಂತೋಷಕ್ಕೆ ತಾನೆ ಮಾತ್ನಾಡಿಸಿದ್ದು. ಹಾಳಾದ ನೋಟ್ಸ್ ಯಾವನಿಗೆ ಬೇಕು?" ಎಂದು ತೃಪ್ತಿ ಹೊಂದಿದರೂ, "ಅವಳ ಸ್ನೇಹ ಸಂಪಾದಿಸ್ಲಿಕ್ಕೆ ಆಗ್ಲಿಲ್ಲವಲ್ಲ" ಎಂದು ಬೇಸರಿಸಿ ಅಲ್ಲಿಂದ ಹೊರಡುತ್ತಿದ್ದಂತೆ, ಚನ್ನಾಗಿ ಮುಖ ಪರಿಚಯವಾಗಿದ್ದ ಇಬ್ಬರು ಸ್ನೇಹಿತರು ಎದುರಿಗೆ ಬಂದವರು ಕೈ ಎತ್ತಿ "ಹಲೋ ಏನ್ ಸಮಾಚಾರ?" ಎಂದು ಸ್ನೇಹದ ಮನೋಭಾವ ತೋರಿದರು.

"ಏನಿಲ್ಲ"– ಲಕ್ಷ್ಯಯಿಂದ ಮುಖ ಭಂಗಿತನಾಗಿ ಅಪಮಾನದ ಗೂಡಿನಿಂದ ಹೊರ ಬರದೆ ಚುಟುಕಾಗಿ ಉತ್ತರಿಸಿದ.

ಆ ಇಬ್ಬರು ಗೆಳೆಯರು ಇವನ ಸ್ನೇಹವನ್ನೇ ಬಯಸಿ ಬಂದವರಂತೆ ಇದ್ದರು ಒಬ್ಬ ಮೊಣಕೈನಿಂದ ಪಕ್ಕದವನಿಗೆ ತಿವಿದ. ಇನ್ನೊಬ್ಬ ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದ. ತಿವಿದವನು ತಾನೇ ಆರಂಭಿಸಿದ– "ಏನ್ರೀ,ಏನಿಲ್ಲ ಅಂತೀರಾ ಆ ಹುಡುಗಿಗೆ ಮಾತ್ನಾಡ್ಸೇ ಬಿಟ್ರಲ್ಲ!" ಹೊಗಳುವ ಧಾಟಿಯಲ್ಲಿ ನುಡಿದ.

"ಹೌದು ನಿಮಗೇನಾಯ್ತು?" ದನಿಯಲ್ಲಿ ಸಿಡುಕಿನ ಎಳೆ ಲೀನವಾಗಿತ್ತು.

"ನಮಗೆ ಸಂತೋಷ ಆಯ್ತು ಆಕೆ ಮೊದ್ಲೇ ನಾಗಿನ್. ಅಬ್ಬಾ ನಿನಗೆಷ್ಟು ಧೈರ್ಯ! ನಿಜವಾದ ಗಂಡು ಅಂದ್ರೆ ಕಾಲೇಜ್‌ನಲ್ಲಿ ನೀನೆ" ಎಂದ ಮತ್ತೊಬ್ಬ. ಹೊಗಳು ಭಟರು ಅವನ ಅಪಮಾನದ ಭಾರ ಇಳಿಸುವಂತೆ ಕಂಡರು. ಹಾಗೆ ನಿಧಾನವಾಗಿ ಸ್ನೇಹದ ಬಲೆಯನ್ನು ಒಡ್ಡ ತೊಡಗಿದರು.

ಮತ್ತೊಬ್ಬ ಮುಂದುವರೆಸಿದ "ನಿಮಗೆ ನೋಟ್ಸ್ ಬೇಕಾದ್ರೆ ಬೇರೆಯವರತ್ರ ನಾವೇ ಇಸಿದುಕೊಡ್ತೇವೆ. ಆ ನಾಗಿನ್ ಹತ್ರ ಮಾತ್ರ ಹೋಗ್ಬೇಡಿ ಅಷ್ಟೆ".

"ಯಾಕೆ?" ಸಮಸ್ಯೆಗೆ ಸಿಲುಕಿ ಕೇಳಿದ.

"ಅವ್ಳಿಗೆ ಲೆಕ್ಚರ್ಸ್ ಎಲ್ಲ ಚನ್ನಾಗಿ ಪರಿಚಯ, ಪ್ರಿನ್ಸಿಪಾಲ್ ಅವರ ಸಂಬಂಧಿಯಂತೆ" ಗೊತ್ತಿದ್ದದ್ದು ಇಲ್ಲದ್ದು ಎಲ್ಲ ಕೂಡಿಸಿ ಹೇಳಿದ.

"ಅದಕ್ಕೆ?"

"ಯಾರೂ ಅವಳ ತಂಟೆಗೆ ಹೋಗಲ್ಲ. ಸ್ವಲ್ಪ ಮೆದುಳು ಬೇರೆ ದೊಡ್ಡದು. ನೀನು ನಮ್ಮ ಸ್ನೇಹಿತ ನೋಡು, ನಿನಗೆ ಅಪಮಾನ ಆದ್ರೆ ನಮಗೂ ಆದಂತೆ. ಅಂದಾಗೆ ನೋಡಿ ನನ್ನೆಸ್ರು ಸೋಮಶೇಖರ್, ಇವ್ನೆಸ್ರು ರವಿ" ಎಂದು ಪರಿಚಯಿಸಿದ. ಇದುವರೆಗೆ ಯಾರೂ ಸ್ನೇಹವನ್ನು ಬಯಸಿ ಬರದಾಗ, ಇವರೇ ಬಂದದ್ದು ರಾಜು ಮನಸ್ಸು ಬಿಚ್ಚಲು ಸಹಾಯವಾಯಿತು.

ಮುಗುಳ್ನಗೆ ತಂದು ಕೊಂಡು"ನನ್ನೆಸರು ರಾಜು" ಎಂದ.

"ಗೊತ್ತಾಯ್ತು. ನೀನ, ನಿನ್ನ ಚರಿತ್ರೆ ಎಲ್ಲಾ ಗೊತ್ತಾಯ್ತು." ಎಂದ ಸೋಮಶೇಖರ.

"ಸರಿ ನನಗೆ ಸ್ನೇಹಿತರಿದ್ರೆ ಸಾಕು. ನೋಟ್ಸೂ ಬೇಡ, ಓದೋದು ಬೇಡಾ ನನಗೆ ಅದರ ಅವಶ್ಯಕತೆಯೂ ಇಲ್ಲ. ಬನ್ನಿ ಕಾಫಿಗೆ" ಆಹ್ವಾನಿಸಿದ ರಾಜು.

"ನೀನು ಹೋಗು ಒಂದ್ನಿಮಿಷ ಹಿಂದೇನೇ ಬರ್ತೀವಿ'' ಎಂದ ಸೋಮು.

"ಆಯ್ತು ಬರ್ರಾ ?" ಎನ್ನುತ್ತ ಎಡಗೈನಲ್ಲಿದ್ದ ನೋಟ್ ಬುಕ್ಕನ್ನು ಬಲಗೈಗೆ ಬದಲಾಯಿಸಿ ಕೈ ಬೀಸುತ್ತ ಹೋಗುವುದನ್ನು ನೋಡಿದರು ಸೋಮು ಮತ್ತು ರವಿ. ರಾಜು ಮರೆಯಾಗುತ್ತಿದ್ದಂತೆ ಎದುರು ಮುಖವಾಗಿ ಮುಗುಳ್ನಕ್ಕರು.

"ರವೀ ಹೇಗಿದ್ದಾನಮ್ಮ. ಒಳ್ಳೆ ಅಟ್ರ್ಯಾಕ್ಟ್ ಆಗಿದ್ದಾನೆ.ಗುಡ್ ಪರ್ಸನಾಲಿಟಿ ಇದೆ. ಚನ್ನಾಗಿ ಮಾತಾಡ್ತಾನೆ ಇವ್ನ ನಮ್ಮ ಕ್ಲಾಸಿನ ಪರವಾಗಿ ಎಲೆಕ್ಷನಿಗೆ ನಿಲ್ಸಿದ್ರೇ ಗಮ್ಮ?" ಹೆಮ್ಮೆಯಿಂದ ಕೇಳಿದ ಸೋಮು

"ನಿಲ್ಸಿ ಏನು ಸಾಧಿಸಬೇಕೂಂತ ಇದ್ದೀಯ?'' ಕೇಳಿದ.

ರವೀ ಆ ವನ್ಮಗ ಪುರುಷೋತ್ತಮು ಈ ಸಾರಿ ಎಲೆಕ್ಷನ್ನಿಗೆ ನಿಲ್ತಾನಂತೆ ಏನೇ ಆಗ್ಲಿ ಅವ್ನು ನಿಲ್ಲೋದು ಮಾತ್ರ ಸಹಿಸೋಕೆ ಆಗ್ತಾ ಇಲ್ಲ. ಅವ್ನೆ ದುರಿಗೆ ಒಬ್ಬನ್ನ ನಿಲ್ಸಿ ಗೆಲ್ಲಿಸ್ತೀನಿ" ಉನ್ಮಾದದಿಂದ ಅಚಲನಾಗಿ ನುಡಿದ

"ಸಹಿಸದಿದ್ರೆ ಅವತ್ತು ರೌಡಿಗಳ ಕೈಲಿ, ಬಾಯಲ್ಲಿ ರಕ್ತ ಬರಂಗೆ ಹೊಡ್ಸಿದ್ದನಲ್ಲ ಅದೇ ಕೆಲಸ ಇನ್ನೊಮ್ಮೆ ಮಾಡ್ತಾನೆ". ಅದೇ ಪ್ರಕರಣ ಮರುಕಳಿಸುವುದನ್ನು ಇಚ್ಛಿಸದೆ ಸಮಾಧಾನ ಮಾಡಲೆತ್ನಿಸಿದ ರವಿ.

"ರವೀ ನಾವೂ ಹಣವಂತರು ಆದ್ರೆ ಅವನಂತೆ ಕುತಂತ್ರಿಗಳಲ್ಲ. ಆದರೆ ಸ್ವಾಭಿಮಾನಿಗಳು. ಆ ಅಹಂಕಾರಿಯ ಕಣ್ಣೆದುರಿಗೆ ಈ ಕೆಲಸ ಮಾಡದಿದ್ರೂ, ಹಿಂದಿನಿಂದ ಮಾಡಿ ಸೇಡು ತೀರಿಸಿಕೊಳ್ತೀನಿ" ಹಲ್ಲು ಮಸೆದು ನುಡಿದ.

"ಲೋ ಸರಿಯಾಗಿ ಯೋಚ್ನೆ ಮಾಡಿದ್ದೀ ಏನೋ?" ಹಿಂದೇಟು ಹಾಕಿದ ರವಿ.

"ಸರಿಯಾಗೇ ಯೋಚ್ನೆ ಮಾಡಿದ್ದೀನಿ. ಆ ನನ್ಮಗನನ್ನ ಸೋಲ್ಸಿದ ಮೇಲೆ ನನಗೆ ಸಮಾಧಾನ, ತೃಪ್ತಿ. ಅವ್ನೆದುರಿಗೆ ಇವ್ನನ್ನ ನಿಲ್ಲಿಸ್ತಿನಿ. ಬಾರಲೋ ಈಗ್ಲೇ ಹೋಗಿ ನಮ್ಮ ಹೀರೋ ರಾಜನಿಗೆ ಹೇಳಿಬಿಡೋಣ. ಅವ್ನು ಬೇಡಾ ಅಂದ್ರೂ ಬಿಡ್ಬಾರ್ದು ನೀನೂ ಒತ್ತಾಯ ಮಾಡು. ನಡಿ ಹೋಗೋಣ" ಎಂದ ಸೋಮು. ಭುಜದ ಮೇಲೆ ಕೈ ಹಾಕಿ ರಾಜು ಹೋದ ದಿಕ್ಕಿಗೆ ನಡೆದರು.

ರಾಜು ಸಿಗುತ್ತಿದ್ದಂತೆ ಸಂತೋಷದಿಂದ "ಹಾಯ್ ರಾಜು. ನಿನಗೆ ಮಿಂಚಲಿಕ್ಕೆ ಒಳ್ಳೆ ಅವಕಾಶ" ಎಂದ ರವಿ.

ಇವರಾಗಲೇ ತನ್ನ ಹಿತೈಷಿಗಳೆಂದು ನಂಬಿದ್ದ ರಾಜು, "ಯಾವ್ದಪ್ಪ ಅದು ಅಂತಹ ಅವಕಾಶ?" ಕೇಳಿದ. ಒಟ್ಟಿನಲ್ಲಿ ಲಕ್ಷ್ಮಿಯ ಕಣ್ಣಿಗೆ ಮಿಂಚುವುದೇ ಅವನಿಗೆ ಬೇಕಾಗಿತ್ತು. ಅವನ ಅಂತರಂಗವನ್ನು ಸೂಕ್ಷ್ಮವಾಗಿ ಗಮನಿಸಿದ್ದರು ಸೋಮು, ರವಿ.

"ನಾನೇಳ್ದಾಗೆ ಕೇಳ್ತೀಯಾ ಅನ್ನೋದಾದ್ರೆ?" ಪೀಠಿಕೆ ಹಾಕಿ ಮುಖ ನೋಡಿದ ಸೋಮು.

"ನೋಡೋ ಸೋಮು ನನ್ನ ಚರಿತ್ರೆ ಎಲ್ಲ ತಿಳ್ದೋನು ಎಂದೆ, ನಿನಗಿಷ್ಟೇ ಏನು ತಿಳ್ದಿರೋದು? ನನಗೆ ಯಾವುದೇ ವಿಷ್ಯ ಮೊದ್ಲೇಳ್ಬೇಕು. ಆಮೇಲೆ ತೀರ್ಮಾನ. ಹ್ಞಾ..... ಓದುವುದು ಒಂದನ್ನು ಬಿಟ್ಟು"ಎಂದು ನಕ್ಕ ರಾಜು. ಜೊತೆಯಲ್ಲಿ ಉಳಿದಿಬ್ಬರೂ ನಕ್ಕರು. ಸೋಮು ಮತ್ತು ರವಿಗೆ ಅರ್ಧ ಆಸೆ ಪೂರೈಸಿದಂತಾಗಿತ್ತು.

"ಓ ಗುಡ್. ಹಾಗಾದ್ರೆ ಕೇಳು. ಮೂರು ವರ್ಷದಿಂದಲೂ ನಮ್ಮ ಕ್ಲಾಸಿಂದ ಒಬ್ಬ ಹುಡುಗನ್ನ ಎಲೆಕ್ಷನ್ನಿಗೆ ನಿಲ್ಲಿಸ್ಬೇಕೂಂತ ಇದ್ವಿ. ಈ ಆಸೆ ನಂದು ಮಾತ್ರ ಅಲ್ಲ

ಇಡೀ ತರಗತಿಯದು. ಆದ್ರೆ ಇದು ಕಡೇ ವರ್ಷ. ಇದೂ ಮುಗಿತೆಂದ್ರೆ ಆಯ್ತು. ಅದಕ್ಕೆ ತಕ್ಕ ಹಾಗೆ ಎಲೆಕ್ಷನ್ನಿಗೆ ನಿಂತು ಎದುರಿಸುವಂತ ಗಂಡ್ಸು ಬೇಕಿತ್ತು. ಆ ಗಂಡು ನೀನೆ ಅಂತ ತಿಳೀತೀವಿ. ಆಮೇಲೆ ಗೆಲ್ಲೋದ್ರಲ್ಲಿ ಮಾತ್ರ ಅನ್ಮಾನ ಇಟ್ಕೋ ಬೇಡ" ಸೋಮು ಹೇಳುತ್ತ ಹೋದಂತೆಲ್ಲ ರಾಜುವಿನ ಮುಖ ಅರಳತೊಡಗಿತು. ಮುಖ ನೋಡಿ ಕೊನೆಗೆ "ಹ್ನಾ ಈಗ ಏನು ಹೇಳ್ತೀಯಾ?" ಕೇಳಿದ ಸೋಮು.

ರಾಜನಾದರೂ ಹೇಳುವುದು ಇನ್ನೇನು ಉಳಿದಿತ್ತು? ಲಕ್ಷ್ಮಿಯ ಕಣ್ಣಿಗೆ ಎದ್ದು ಕಾಣುವಂತೆ ಮಾಡಲು ಇದಕ್ಕಿಂತ ಒಳ್ಳೆಯ ಅವಕಾಶವಿಲ್ಲವೆಂದು ತೀರ್ಮಾನಿಸಿ ಮುಗುಳ್ನಗೆಯಿಂದಲೇ "ನಾನು ಬೆಂಗ್ಳೂರಿನಲ್ಲೇ ಎಲೆಕ್ಷನ್ನಿಗೆ ನಿಲ್ಬೇಕೂಂತ ಇದ್ದೆ. ಆದ್ರೆ ಇಲ್ಲಿ ಹುಡುಗರ ಪರಿಚಯ ಕಡಿಮೆ" ಶಂಕೆ ವ್ಯಕ್ತಪಡಿಸಿದ.

'ರಾಜು ನೀನು ಯೋಚ್ಸಿ ಮಾತ್ನಾಡ ಪರಿಚಯ ಯಾರಿಗೆ ಇರುತ್ತೆ ಹೇಳು? ನಾವು ಕ್ಯಾನ್‌ವಾಸ್ ಮಾಡಿದಾಗಲೇ ತಾನೆ ಪರಿಚಯವಾಗೋದು? 'ಅನುಮಾನಂ ಪೆದ್ದ ರೋಗಂ' ಅನ್ನೋದು ಕೇಳಿಲ್ವಾ?" ಎಂದ ರವಿ

"ಸರಿಯಪ್ಪ. ನಿಲ್ತೀನಿ. ಯಾವ ಸ್ಥಾನಕ್ಕೆ ಸ್ಪರ್ಧಿಸಬೇಕೂಂತ ನಿನ್ನಾನೆ?" ಕೇಳಿದ.

"ಅವನ್ನ ನಾಳೆ ಹೇಳ್ತೀವಿ. ಸ್ಪರ್ಧಿಸೋದು ಗ್ಯಾರಂಟಿಯಾದ್ರೆ ಸಾಕು" ಸೋಮು, ರಾಜನ ನಿರ್ಧಾರ ಗಟ್ಟಿಗೊಳಿಸತೊಡಗಿದ.

"ನಿನಗೇಕೋ ಇಂತಹ ಅನುಮಾನದ ಪಿಶಾಚಿ ಹಿಡಿತು ರಾಜ ಹೇಳ್ದ ಅಂದ್ರೆ ಮುಗಿದೊಯ್ತು. ಅದು ರಾಜಾಜ್ಞೆ!" ಸ್ಪಷ್ಟಪಡಿಸಿದ ರವಿ, ಸೋಮುಗೆ ಜರಿದ.

ರಾಜು ಎಲೆಕ್ಷನ್ನಿಗೆ ನಿಲ್ಲುವುದು ನೂರರಷ್ಟು ಖಚಿತವಾಗಿತ್ತು ಎರಡು ಕೈಗಳು ಸಿದ್ಧವಾಗಿದ್ದವು, ಚಪ್ಪಾಳೆ ಹಾಕಿ ಸ್ಫೋಟಿಸುವುದು ಬಾಕಿ ಉಳಿದಿತ್ತು

ಬಡವರ ಗುಡಿಸಲು. ಗಾಳಿ ಬೆಳಕೇನು? ಮಳೆರಾಯ ಬಂದರೂ ಅಡೆ ತಡೆ ಇಲ್ಲದೆ ಧಾರಾಳವಾಗಿ ಮನೆಯೊಳಗೆ ಇಳಿದುಕೊಳ್ಳುವನು. ಸರಳಿಲ್ಲದ ಕಿಂಡಿಯೇ ಕಿಟಕಿ. ಯಾವ ಸಿರಿ ಸಂಪತ್ತು ಕಾಯ್ದುಕೊಳ್ಳಲು ಬೇಕು ಭದ್ರವಾದ ಗೋಡೆ, ಕಿಟಕಿ, ಬಾಗಿಲುಗಳು? ಮಾನ ಮುಚ್ಚಲು, ರಕ್ಷಿಸಿಕೊಳ್ಳಲು ಸಾಕಾಗಿತ್ತಷ್ಟೆ. ಕಳ್ಳಕಾಕರ ಭಯ ವಂತೂ ಅವರಿಗೆ ಮೊದಲೇ ಇಲ್ಲ ರೋಗಿಷ್ಠ ನೀಲಜ್ಜ ಮನೆಯ ಯಜಮಾನ. ದಿಣ್ಣೆ ಯನ್ನೇರುವ ಭರ್ತಿ ತುಂಬಿದ ಬಸ್ಸಿನಂತೆ ತಡೆದು, ತಡೆಯಲಾರದ ಉಬ್ಬಸ ಔಷಧಿ ಇಲ್ಲದೆ ಆರೋಗ್ಯ ಸುಧಾರಿಸಿಲ್ಲವಾದ್ದರಿಂದ ಕೆಲಸಕ್ಕೆ ಹೋಗದೆ ಮನೆಯ ಮೂಲೆಯನ್ನು ಹಿಡಿದಿದ್ದಾನೆ ಕೂಳುಗಳಿಸುವ ಕೈ ಮಾತ್ರ ಹೆಂಡತಿ ಮರಿಯಮ್ಮ ಳದು. ನಾಲ್ಕು ಮಕ್ಕಳು ಬೇರೆ. ಅವೇ ಅವರ ಸಿರಿ ಸಂಪತ್ತುಗಳು ಎಲ್ಲಾ. ಸಾಲದ್ದಕ್ಕೆ ಸುಖ, ಸೌಭಾಗ್ಯ ಉಣ್ಣುವ ಆಸೆಯಿಂದಲೇ ಹಿರಿಯ ಮಗ ಬಸವನನ್ನು ಕಾಲೇಜು ಓದಿಸುತ್ತಿದ್ದರು ಮುಂದೆ ನಾವಿಲ್ಲದಿದ್ದರೆ ನಮ್ಮ ಕರುಳ ಕುಡಿಯಾದರೂ ಸುಖವಾಗಿರಲಿ ಎಂಬ ಹೆಬ್ಬಯಕೆಯಿಂದ ಬಸವನನ್ನು ದುಡಿಮೆಯಿಂದ ದೂರ ಇರಿಸಿ ಬಂದ ಕಷ್ಟವೆಲ್ಲ ತಾವೇ ಸಹಿಸಿಕೊಂಡರು ಉಳಿದ ಮೂವರು ಇನ್ನೂ ಏಳೆಂಟು ವರ್ಷದ ಬಾಲಕರು.

ಬಸವನಂತು ಎಂದೂ ಸಾಮಾನ್ಯ ಬಟ್ಟೆ ತೊಟ್ಟವನೇ ಅಲ್ಲ. ಸಿರಿವಂತ ಸ್ನೇಹಿತ ಪುರುಷೋತ್ತಮ ಬಿಟ್ಟುಕೊಡುವ 'ಬಿಟ್ಟಿ' ವಸ್ತ್ರಗಳನ್ನೇ ಧರಿಸುತ್ತಿರುವುದು. ಪುರುಷೋತ್ತಮನೆ ಕೊಟ್ಟಿದ್ದ ಜರ್ಸಿ, ಪಂಚೆ ತೊಟ್ಟು ಬೆನ್ನತ್ತಿದ್ದ ದುರ್ದೈವವನ್ನು ಶಪಿಸುತ್ತ ಹೊರಗೆ ಕುಳಿತಿದ್ದ ಬಸವನಿಗೆ ತಮ್ಮಂದಿರು ಸುತ್ತಮುತ್ತ ಕುಣಿದು ಆಟವಾಡುವುದು ಅರಿವಿಗೆ ಬಂದಂತಿರಲಿಲ್ಲ. ನೀಲಜ್ಜನ ಗಂಟಲಿನಲ್ಲಿದ್ದ ಶ್ಲೇಷ್ಮ ಅವನಿಗೆ ಆಟವಾಡಿಸತೊಡಗಿತು. ಅದರ ಆಟ ಆರಂಭವಾಯಿತೆಂದರೆ ನೀಲಜ್ಜನ ಉಸಿರು ನಿಂತು ಹೋದಂತೆ ಆಗುತಿತ್ತು. ನಿಧಾನವಾಗಿ ಆರಂಭವಾದ ದಮ್ಮು ಕೆಮ್ಮಿ ಕೆಮ್ಮಿ ಕಂಗಾಲಾ ಗುವ ಸ್ಥಿತಿಗೆ ಬಂದಾಗಲೇ ಬಸವನಿಗೆ ಎಚ್ಚರವಾದದ್ದು.

ತನ್ನನ್ನೇ ಬಯ್ದುಕೊಳ್ಳುತ್ತ ಎದ್ದು "ಅಪ್ಪಾ ಎದ್ದು ಕೂತ್ಕೋಳಪ್ಪಾ" ಎಂದು ಎತ್ತಿ ಕೂರಿಸಲು ಕೈ ಚಾಚಿದ. ನೀಲಜ್ಜ ಉಬ್ಬಸದಿಂದ ಸಂಕಟಪಡುತ್ತ ಕಣ್ಣು ಬೆಳ್ಳಗೆ ಮಾಡಿ 'ಒಲ್ಲೆ'ನೆಂದು ಕೈ ಅಲ್ಲಾಡಿಸಿದ. ಅಲ್ಲೆ ನೆಲದ ಮೇಲೆ ಚಿಂತಿಸುತ್ತ ಕುಳಿತ ಬಸವ 'ಈ ಹಾಳು ರೋಗವನ್ನು ತಾನಾದರೂ ಅನುಭವಿಸುವಂತಿಲ್ಲವಲ್ಲ, ರೋಗ ನಿವಾರಣೆಗೆ ಬೇಕಾದ ಔಷಧಿ, ಟಾನಿಕ್, ಗುಳಿಗೆಗಳಿಗೆ ಹಣವೂ ಇಲ್ಲ. ಸುಮ್ನೆ ನೋಡಿ ಕೊಂಡಿರಲೂ ಅಸಾಧ್ಯ. ಇನ್ನು ತನ್ನ ಓದು ಸಾಕು ರೋಗಿಷ್ಟ ತಂದೆಗೆ ಸಹಾಯವಾಗದ ಈ ವಿದ್ಯೆಯಿಂದ ಆಗಬೇಕಾದುದಾದರು ಏನು?. ಇವತ್ತಿನಿಂದ ಕೂಲಿ ಕೆಲಸಕ್ಕೆ ನಾನೂ ಹೋಗ್ಬೇಕು ನಂತರ ಬೇರೆಲ್ಲಾದ್ರೂ ಕೆಲಸ ಸಿಕ್ಕರೆ ಹೋದರೆ ಆಯಿತು" ಎಂದು ಕೊಂಡು ಉತ್ತುತ್ತಿ ಹಣ್ಣಿನ ತರಹ ಸುಕ್ಕುಗಟ್ಟಿದ ತಂದೆಯಮುಖ ನೋಡುತ್ತ ಕುಳಿತ.

ಉಸಿರು ಹಿಂತಿರುಗಿಸಿಕೊಂಡು ಓರೆಯಾಗಿ ಮಲಗಿದ್ದ ನೀಲಜ್ಜನ ಕಣ್ಣಂಚಿನಲ್ಲಿ ನೀರು ಇಳಿಯುತ್ತಿರುವುದನ್ನು ನೋಡಿದ ಬಸವ "ಅವ್ವ ಅವ್ವಾ ಹೇ ಬಾರವ್ವ ಇಲ್ಲಿ'' ಎಂದೆರಡು ಬಾರಿ ಕೂಗಿದ.

"ಯಾಕ್ಲಾ ಬಸ್ವ ಅಂಗೆ ಅರ್ಚ್ಕೋತೀಯ?" ಒಳಗಿನಿಂದ ಬಂದ ಮರಿಯಕ್ಕ ಕೇಳಿದಳು.

ಪಾದದಿಂದ ದೃಷ್ಟಿ ಎತ್ತರಿಸಿದ, ಹಲವು ಕಡೆ ತೇಪೆ ಹಾಕಿದ ನೇರಳೆ ಬಣ್ಣದ ಸಾಮಾನ್ಯ ಸೀರೆ ಕಿವಿ, ಮೂಗು ಖಾಲಿಯಾಗಿ ಅರೆ ವಿಧವೆಯಂತಾದರೂ ಒಂದಿಂಚು ಅಗ ಲದ ಕುಂಕುಮ, ಬಂಗಾರವಿಲ್ಲದ ಕರಿಮಣಿ ಸರ ಸುಮಂಗಲಿಯೆಂದು ಸಾರುತ್ತಿದ್ದವು. ಬಾಯಿಯ ತುಡುಗನ್ನು ತಪ್ಪಿಸಲು ಮೆಲುಕಾಕುವ ಎಲೆ ಅಡಿಕೆಯು ತುಟಿಯ ಅಂಚಿನಲ್ಲಿ ಸಾಮ್ರಾಜ್ಯ ಸ್ಥಾಪಿಸ ಹೊರಟಿತ್ತು. ಹಲ್ಲುಗಳಾಗಲೇ ಕರಕಲಾಗಿ ಬಲಿಯಾಗಿದ್ದವು. 'ಇಂತಹ ಅವಲಕ್ಷಣದ ಹೆಣ್ಣು ನನ್ ತಾಯಿ! ಗಂಡಾಗಿ ದುಡಿದು ಇಡೀ ಸಂಸಾರಕ್ಕೆ ಅನ್ನ ಒದಗಿಸುವ ತಾಯಿಗೆ ಎಲ್ಲರೂ ತಿಂದು ಕೊನೆಯಲ್ಲಿ ಮಿಕ್ಕಿದ್ದು. ಇಂತಹ ದುಃಸ್ಥಿತಿಯನ್ನು ತಾನಾದರೂ ಇದುವರೆಗೆ ನೋಡಿ ಹೇಗೆ ಸುಮ್ಮನಿದ್ದೆ?' ತಾನೆ

ಪ್ರಶ್ನಿಸಿಕೊಂಡ. ಮನ ಜಾಗೃತವಾಗತೊಡಗಿತು.

ಏನೋ ಹೇಳಲು ಬಾಯಿ ತೆರೆದ ಮಗ ಇನ್ನೂ ಸುಮ್ಮನಿರುವುದು ಕಂಡು "ಏನ್ಮಗಾ ಕರ್ದು ಹಿಂಗೆ ಮುಖ ನೋಡಿದ್ರೆ ಏನು ತಿಳೀಬೇಕ್ಲೆ? ಬುಕ್ ಏನಾರ ಕೊಂಡ್ಕ ಬೇಕಿತ್ತೇನ್ಲೆ? ನೋಡಪ್ಪ ದುಡ್ಡ್ ಪಡ್ಡ್ ಕೇಳ್ಬೇಡ. ಇದ್ದಬದ್ದ ದುಡ್ಡೆಲ್ಲ ನಿಮ್ಮಪ್ಪನ ಹಾಳಾದ ರೋಗಕ್ಕೆ ಹಾಕಿನಿ. ಇನ್ನ ಎಲ್ಲಿಂದ ತರ್ಲೀಲು?" ಸಾಕಷ್ಟು ರೋಸಿ ನುಡಿದಳು.

ಬಸವನಿಗೆ ಕಣ್ಣು ತೇವವಾದವು. ಅಳುವುದೊಂದು ಬಾಕಿ ಇತ್ತು. ನಿಧಾನವಾಗಿ ಸಾವರಿಸಿಕೊಂಡು "ಏನೂ ಬೇಡ ಕಣವ್ವ. ಇವತ್ನಿಂದ ನಾನೂ ಕೆಲ್ಸಕ್ಕೆ ಬರ್ತೀನವ್ವ, ಮೇಸ್ತ್ರಿಗೆ ಹೇಳ್ಬಿಡವ್ವ" ಎಂದು ದುಃಖ ನುಂಗಿಕೊಂಡ.

"ಒಯ್ ಇದೊಳ್ಳೆದಾಯ್ತಲ್ಲ. ಏನ್ಲಾ ಈಸು ವರ್ಸ ಓದಿ ಈಗ ಬ್ಯಾಡಾಂತ ಬಿಟ್ರೆ ಯಂಗಲಾ? ಏನೋ ಕಷ್ಟಾಂತ ಅಂಗಂದೆ ಅಷ್ಟಕ್ಕೆ ಈ ಪಾಟಿ ಸಿಟ್ಟೇನ್ಲಾ? ಇರು ಯಾರ್ತಕಾರ ಸಾಲ ಇಸ್ಕೊಂತೀನಿ " ಮಗ ನೊಂದು ಕಾಲೇಜು ಬಿಡುವುದನ್ನು ಇಷ್ಟಪಡದೆ ಮಗನನ್ನು ಸಮಾಧಾನಗೊಳಿಸಲು ಯತ್ನಿಸಿದಳು.

ತಾಯಿಯ ಮುಖ ದಿಟ್ಟಿಸಿದ ಬಸವ "ಅವ್ವಾ .ನಾನು ಓದೋದು ಮುಗ್ಸಿದ ತಕ್ಷಣ ಕೆಲ್ಸ ಕರ್ದು ಕೊಡ್ತಾರಂತ ತಿಳ್ದಿಯೇನು? ಆ ಆಸೆ ಬಿಟ್ಬಿಡು. ನಾನು ಇವತ್ನಿಂದ ಕಾಲೇಜಿಗೆ ಹೋಗಲ್ಲ, ನಿನ್ ಜೊತೆಗೆ ಕೆಲ್ಸಕ್ಕೆ ಬರ್ತೀನಿ ಅಷ್ಟೆ" ಎಂದವನೆ ತಟ್ಟನೆ ಎದ್ದು ಮರುಮಾತಿಗೆ ಅವಕಾಶಕೊಡದೆ ರಭಸದಿಂದ ಹೊರ ನಡೆದ

"ಏನು ನೋಡ್ದಾ ಅವ್ನ ಆಡ ಆಟನಾ ಈಸು ದಿನ ಓದಿ ಈಗ ಬಿಡೋದು ಸರಿಯಲ್ಲಂದ್ರೆ ಸೆಟ್ಕೊಂಡು ಹೋಗೋದೆ?" ಇಬ್ಬರ ಮಾತಿನ ಕಲಹವನ್ನು ನೋಡುತ್ತ ಮಲಗಿದ್ದ ಗಂಡನನ್ನು ಕೇಳಿದಳು.

ಸ್ವಲ್ಪ ಹೊತ್ತು ತಡೆದು "ಹೂಂ ನೇ ಅವ್ನೇಳೋದು ಸರೀಂತಾ

ನೆಂಗನ್ನಿ ಸುತ್ತೈತೆ ಅವ್ನು ಏಟೀ ಓದಿದ್ರೂ ಮಣ್ಣು ಹೋರಾಕೇ ಬರ್ಬೇಕು. ನಮ್ ಹಣೆ ಬರ ನಂಗೆ ಗೊತ್ತಿಲ್ಲೇನೆ ?" ವ್ಯಂಗ್ಯವಾಗಿ ನುಡಿದು ಇನ್ನೂ ಏನೋ ಹೇಳಲು ಹೊರಟ ಅಷ್ಟರಲ್ಲಿ ಉಬ್ಬಸ ತೊಡರುಗಾಲಿಕ್ಕಿತು.

"ಅಂಗೇ ಆಗ್ಲಿ ಬಿಡು. ದೇವ್ರಿಚ್ಚೆ ನಾವೇನು ಮಾಡಕಾಯ್ತದೆ? ಹಣೆ ಮ್ಯಾಗೆ ದೇವ್ರು ಬರ್ದಿರೋದ್ನ ಅಳ್ಸಿ ನಾವು ಬರೆಯೊಕಾಯ್ತದಾ?" ಎಂದು ತನ್ನ ಕೆಲಸಕ್ಕೆ ಹೋದಳು. ನೀಲಜ್ಜ ಹೊಟ್ಟೆ ಗಂಟಲು ಬಿಗಿ ಹಿಡಿದು ಉಸಿರಾಡತೊಡಗಿದ.



ಸಂಜೆಯಾಗತೊಡಗಿತು.' ದಿನವಲ್ಲಿ ಹಗಲು ಪೂರ ತನ್ನೊಂದಿಗೆ ಹರಟೆಹೊಡೆದು ಕಣ್ಣಿಗೆ ಬಿದ್ದ ಕ್ಯಾಂಟೀನ್‌ನಲ್ಲಿ ತಿಂಡು ಕುಡಿಯುವ ಭಿಕಾರಿ ನನ್ಮಗ ಇವತ್ತೇಕೆ ಕಾಲೇಜಿಗೆ ಬರ್ಲಿಲ್ಲ? ಬಂದಿದ್ರೆ ನಾಯಿ ಸುತ್ತರಿದಾಗೆ ನನ್ನ ಹಿಂದೆಂದೆ ತಿರುಗುತ್ತಿದ್ದ. ಇವತ್ತೇನು ಬಂತೋ? ನನಗಿಂತ ದೊಡ್ಡ ಆಸಾಮಿ ಏನಾದ್ರೂ ಸಿಕ್ಕಿದ್ನೇನೋ? ಇರಲಿ ನೋಡೋಣ'ಎಂದುಕೊಳ್ಳುತ್ತಲೇ ಬೈಕ್ ಮೇಲೆ ಆಗಮಿಸಿದ ಆಗರ್ಭ ಶ್ರೀಮಂತ ಶಾಸಕರೊಬ್ಬರ ಪುತ್ರ ಪುರುಷೋತ್ತಮ, ಸ್ನೇಹಿತ ಬಸವನ ಗುಡಿಸಲ ಎದುರಿಗೆ ಬೈಕನ್ನು ನಿಲ್ಲಿಸಿದ.

ಮೈ ಬಿಗಿಯುವ ಉಡುಪು, ತಂಪನ್ನೀಯುವ ಕನ್ನಡಕ ಧರಿಸಿದ್ದ ಕಪ್ಪು ಬಣ್ಣದ ತೆಳು ದೇಹದ ಎತ್ತರದ ಯುವಕ. ಮೆಟ್ಟಿಲು ಮೆಟ್ಟಿಲಾದ ಕೂದಲಿನ ಕ್ರಾಪು. ಚಿಕ್ಕ ಕಣ್ಣಿನಿಂದಲೇ ತೀಕ್ಷ್ಣವಾಗಿ ಗುಡಿಸಲ ಕಡೆ ನೋಡುತ್ತ "ಬಸವಾ " ಗಟ್ಟಿಯಾಗಿ ಕೂಗಿದ.

ಬಾಗಿಲಲ್ಲಿ ಆಟವಾಡಿಕೊಳ್ಳುತ್ತಿದ್ದ ಚಿಂದಿ, ಕೊಳಕಾದ ಬಟ್ಟೆಯ ಹುಡುಗರು ಅವನನ್ನು ಗುರ್ತಿಸಿ ಅರ್ಥವಾಗದೆ ಬೆಚ್ಚಿ, ಪ್ರಶ್ನಾರ್ಥಕ ನೋಟದಿಂದ ನೋಡಿದರು

"ಹೊಯ್ ಬಸವ ಇದಾನೇನಲೆ?" ಗಡುಸಾಗಿ ಮೂವಾರು ಹುಡುಗರನ್ನು

ಕುರಿತು ಕೇಳಿದ.

"ಇಲ್ಲ. ಮತ್ತೀ ಕೆಲ್ಸಕ್ಕೆ ಹೋಗಿದ್ದಾನೆ. ಸಾಯಂಕಾಲ ಬರ್ತಾನೆ"ಎಂದ ಒಬ್ಬ ಕಷ್ಟಪಟ್ಟು

ಕನ್ನಡಕ ತೆಗೆದು ಕೈಯಲ್ಲಿ ಹಿಡಿದು "ಬಾರಲೇ ಇಲ್ಲಿ" ತಲೆಹಾಕಿ ಕರೆದ. ಬೆದರುತ್ತಲೇ ಬಂದ ದೊಡ್ಡವನು ಅಂಜುತ್ತ "ಹ್ಲು ?" ಎಂದ.

"ಯಾವ ಕೆಲ್ಸಕ್ಕೆ ಹೋಗಿದ್ದಾನೊ?" ಬಿಡದ ಅಹಂಕಾರದಿಂದ ಕೇಳಿದ.

"ನಮ್ಮವ್ವ ಬ್ಯಾಡ ಅಂತು, ಅಂಗಾದ್ರೂ ಅಣ್ಣ ಕೆಲ್ಸಕ್ಕೋದ".

"ಅದೇ ಯಾವ ಕೆಲ್ಸನೋ?" ಮರಳಿ ಪ್ರಶ್ನೆ ಹಾಕಿದ.

"ಗಾರೆ ಕೆಲ್ಸಕ್ಕೆ" ಎಂದುತ್ತರಿಸಿದ.

"ಸರಿ ನಾನು ಬಂದಿದ್ದೆ ಅಂತೇಳು. ಹೇಳ್ತೀಯೇನೊ?" ಕೇಳುತ್ತಲೆ ಕನ್ನಡಕ ಏರಿಸಿ, ಬೂಟ್ ಕಾಲಿನಿಂದ ಕ್ಲಚ್ ಮೀಟಿ ತುಳಿದು ಬೈಕ್ ಸ್ಟಾರ್ಟ್ ಮಾಡಿದ "ಹ್ಲು ಹೇಳ್ತೀನಿ" ಎಂದು ಹಿಂದೆ ಸರಿದ ಬಾಲಕ. 'ಡುರ್ರ್ರೀ ' ಎಂದು ಕರ್ಕಶ ಶಬ್ದದೊಂದಿಗೆ ಪೆಟ್ರೋಲ್ ಹೊಗೆ ಕಾರುತ್ತ ಬೈಕ್ ಮುಂದೆ ಓಡಿತು.

ಕಡೆಯ ತಿರುವಿಗೆ ಹೋಗುತ್ತಿದ್ದಂತೆ ಎದುರಿನಿಂದ ಜೋಲು ಹೊಡೆಯುತ್ತ ಬರುತ್ತಿದ್ದ ಬಸವ ಪುರುಷೋತ್ತಮನ ತೀಕ್ಷ್ಣ ನೋಟಕ್ಕೆ ಸಿಲುಕಿದ ಪ್ರಥಮ ದಿನದಲ್ಲಿ ಬಿಸಿಲಲ್ಲಿ ಪೂರ್ತಿ ದುಡಿದ ಬಸವನ ತೋಳಿನಲ್ಲಿ,ಕಾಲಿನಲ್ಲಿ ಶಕ್ತಿಯೆ ಉಡುಗಿ ಹೋಯಿತು ಸಾಕಷ್ಟು ದಣಿದಿದ್ದ ಅವನಿಗೆ ಎಚ್ಚರವಾದದ್ದು ಪೈ ಮೇಲೆ ನುಗ್ಗುವಂತೆ ಪುರುಷೋತ್ತಮನ ಬೈಕು ಪಕ್ಕಕ್ಕೆ ಬಂದಾಗಲೇ, ಎಳೆಯುವ ಎವೆಗಳು ಹಿಡಿತಕ್ಕೆ ಬಂದದ್ದು. ದೃಷ್ಟಿ ಎತ್ತಿ ನೋಡಿ, ಗುರುತಿಸಿ "ಓ ಏನ್ ಗುರು?" ಪ್ರಶ್ನಿಸಿದ.

ದರ್ಪದಿಂದ ಎದೆ ಸೆಟೆಸಿ ಕೂತಿದ್ದ ಪುರುಷೋತ್ತಮ ಪ್ರತಿಯಾಗಿ ದ್ವೇಷ ಸಾಧಿಸುವವನಂತೆ ಗಾಜಿನ ಮೂಲಕ ದಿಟ್ಟಿಸಿದ. ಪುರುಷೋತ್ತಮನ ಮುಖಚರ್ಯೆಯಿಂದಲೇ ಅವನ ಮನದ ಆಳವನ್ನು ಅರಿತು "ಏನ್ ಗುರು, ಸಿಟ್ಟು ಮಾಡ್ಕೊಂಡಿದ್ದೀಯಾ? ನಮ್ಮ ಮನೆಯ ಪರಿಸ್ಥಿತಿ ನಿನಗೆ ಗೊತ್ತಾಗಲ್ಲ ಕಣೋ "

ಎಂದು ಸಮಾಧಾನಗೊಳಿಸಲು ಅವಣಿಸುವಷ್ಟರಲ್ಲಿ —"ಹೇ ಬಾಯಿ ಮುಚ್ಚಲೇ ಸಾಕು ನಿನ್ನ ಮನೆಯ ಪರಿಸ್ಥಿತಿ ನಿನಗಿಂತ ಚನ್ನಾಗಿ ನನಗೆ ಗೊತ್ತು" ಗಟ್ಟಿಯಾಗಿ ಅಬ್ಬರಿಸಿದ ಪುರುಷೋತ್ತಮ.

ಸುಸ್ತಾದರೂ ವ್ಯಂಗ್ಯವಾಗಿ ನಗುತ್ತ "ಹೌದು ನಿನಗೆ ಎಲ್ಲಾ ಗೊತ್ತು. ಇವತ್ತಿನಿಂದ ನಾನು ಕೆಲಸಕ್ಕೆ ಹೋದ್ರೆ ಏನಾಗುತ್ತೆ ಗೊತ್ತೇನ್ ಗುರು? ನಮ್ಮಪ್ಪನ್ನ ಇನ್ನೂ ನಾಲಕ್ಕು ದಿನ ಬದುಕಿಸಿಕೊಳ್ಬಹುದು. ನನಗೆ ನಮ್ಮವ್ವ ಮುಂಡೆ ಆಗೋದು ಇಷ್ಟವಿಲ್ಲಕಣೋ, ಯಾವತ್ತಿಗೂ ನಾವು ದುಡಿದದ್ದೇ ದುಡಿಮೆ ನನಗೇನು ಸರ್ಕಾರಿ ಕೆಲಸ ಸಿಗೋವ್ರಲ್ಲಿ ನಂಬಿಕೆ ಇಲ್ಲ. ದಯವಿಟ್ಟು ನನಗೆ ಕಾಲೇಜಿಗೆ ಬಾ ಅಂತ ಒತ್ತಾಯ ಮಾಡ್ಬೇಡ ಕಣೊ, ಬರೋಕ್ಯಾಗಲ್ಲ" ತಡೆಯಲಾರದೆ ಕಣ್ಣೀರು ತಂದು ಹೃದಯದ ವೇದನೆಯನ್ನೆಲ್ಲ ಸ್ನೇಹಿತನ ಮುಂದೆ ಹರವಿದ.

ಪುರುಷೋತ್ತಮ ನೊಂದ ಸ್ನೇಹಿತನ ಭುಜದ ಮೇಲೆ ಕೈ ಹಾಕಿ ಮೆಲು ದನಿಯಿಂದ "ನಾನು ನಿನ್ನ ಮನಸ್ಸು ನೋಯಿಸ್ಬೇಕಂತ ಅನ್ಲಿಲ್ಲವೋ, ಏನೋ ಎರಡು ವರ್ಷ ಫ್ರೆಂಡ್ಸ್ ಆಗಿದ್ವಿ. ಇದೊಂದು ವರ್ಷನೂ ಹಾಗೆ ಕಳೆಯೋಣಾಂತ ಅಷ್ಟೆ. ನಿನಗೆ ನಮ್ಮ ಸ್ನೇಹ ಇಷ್ಟವಿಲ್ಲದಿದ್ರೆ ಚಿಂತೆಯಿಲ್ಲ ಬಿಡು"- ಪುರುಷೋತ್ತಮನ ಧೂಷಿಸುವಂತ ನುಡಿಗೆ ಖಾರ ಏರುತ್ತಾ ಹೋಯಿತು. ಕೊನೆಗೆ ತಾನೇ "ಅಲ್ವೋ ಬಸ್ವ ಇಲ್ಲಿ ಕೂಲಿ ಎಷ್ಟು ಕೊಡ್ತಾರೋ?" ತಿಳಿಯುವ ಹಂಬಲದಿಂದಲೇ ಕೇಳಿದ.

ಹೇಳಲು ಹಿಂಜರಿಯುತ್ತಲೇ "ದಿನಕ್ಕೆ ಹತ್ತು ರೂಪಾಯಿ ಕೊಡ್ತಾರೆ ನಾನು ನಮ್ಮವ್ವ ಹೋದ್ರೆ ದಿನಕ್ಕೆ ಹದಿನೆಂಟು ರೂಪಾಯಿ ಸಿಗುತ್ತೆ" ಎಂದು ತಾಯಿಯ ದಿನಗೂಲಿಯನ್ನು ಪರೋಕ್ಷವಾಗಿ ಹೇಳಿದ.

"ಹಾಗಾದ್ರೆ ನಿಂದು ತಿಂಗಳ ಕೂಲಿ ಎಷ್ಟು?" ಗಂಟಲಿನಿಂದಲೇ ಕೇಳಿದ. ಪ್ರಶ್ನಾರ್ಥಕ ನೋಟದಿಂದ ದಿಟ್ಟಿಸಿ 'ಏಕೆ?' ಪ್ರಶ್ನಿಸಿದ.

ಲೆಕ್ಕ ಹಾಕಿ ಬೇಗ ಹೇಳಲೇ "ಅಧಿಕಾರ ಚಲಾಯಿಸುವಂತೆ ನುಡಿದ.

ಕ್ಷಣ ಹೊತ್ತಿನ ನಂತರ ಲೆಕ್ಕ ಹಾಕಿ "ಒಂದು ದಿನವೂ ತಪ್ಪಿಸದೆ ಹೋದ್ರೆ ಮುನ್ನೂರು ಆಗುತ್ತೆ ಸಮ್ಮರ್ನೂ ಸೇರಿದ್ರೆ ಐನೂರು ದಾಟುತ್ತೆ" ಎಂದು ಸ್ವಲ್ಪ ಹೆಮ್ಮೆಯಿಂದ ಮೊತ್ತವನ್ನು ಮತ್ತೆ ಮತ್ತೆ ನೆನೆದ

"ನಿನ್ನದು ಮಾತ್ರ ಹೇಳಲೆ" ಮತ್ತೆ ಅಧಿಕಾರ ಪ್ರಯೋಗಿಸಿದ.

"ಮುನ್ನೂರು ಅಂದ್ನಲ್ಲ".

"ಮುನ್ನೂರ?"

"ಹೌದು"

ತಡಮಾಡದೆ ತಟ್ಟನೆ ಜೇಬಿನಿಂದ ಪಾಕೆಟ್ ತೆಗೆದು ನೋಟುಗಳನ್ನು ಎಳೆದ. ಬಸವ ಆಶ್ಚರ್ಯದಿಂದ ನೋಡುತ್ತಿರುವಂತೆಯೆ ಮೂರು ನೂರರ ನೋಟುಗಳನ್ನು ಬಸವನ ಎದುರಿಗೆ ಹಿಡಿದು "ಇಷ್ಟು ತಗೋ, ನನಗೋಸ್ಕರ ನಾಳೆಯಿಂದ ಕಾಲೇಜಿಗೆ ಬಾ" ಗಟ್ಟಿಯಾಗಿ ನುಡಿದ.

ಬಸವನಿಗೆ ಮುಂಕು ಕವಿಯಿತು "ಏಯ್ ಏನೋ ಇದು. ಫ್ರೆಂಡ್‌ಷಿಪ್‌ನ್ನ ವ್ಯಾಪಾರ ಮಾಡ್ತಿದ್ದಿ ಏನೋ? ಪುರುಷೋತ್ತಮ ನೀನು ಸಿರಿ ಸಂಪತ್ತಿನ ತುತ್ತ ತುದಿಯಲ್ಲೇ ಇರು, ನಾನು ಕೆಳಗೆ ದರಿದ್ರನಾಗೇ ಇದ್ರೂ ನಾವಿಬ್ರು ಸ್ನೇಹಿತ್ರೇ. ದಯವಿಟ್ಟು ಬೇಡ ತೆಗೋ, ನಿನ್ನ ಸಹಾನುಭೂತಿ ಇನ್ನೂ ಮುಂದುವರಿದ್ರೆ ಸ್ನೇಹವನ್ನೇ ಬಲಿಕೊಡಬೇಕಾಗಬಹುದು" ಹಿಂದೆ ಸರಿಯುತ್ತ ನುಡಿದ.

"ತಗೋ ಮರಿ, ನಾನು ನೀನೆಳ್ದಾಗೆ ಸ್ನೇಹ ಕರೂದಿ ಮಾಡೋ ಮೂರ್ಖ ಅಲ್ಲ. ಫ್ರೆಂಡ್‌ಷಿಪ್‌ನ್ನ ಕೊಂಡ್ಕತ್ತಿಲ್ಲ. ನೀನು ಕೂಲಿ ಕೆಲ್ಸಕ್ಕೆ ಹೋಗೋದನ್ನ ತಪ್ಪಿಸ್ತೀನಿ ಅಷ್ಟೆ. ಹೂಂ ತಗೋ ನಾನು ನಿನಗೆ ದುಡ್ಡು ಕೊಡುವವರೆಗೂ ನಮ್ಮ ಸ್ನೇಹ, ಆಮೇಲೆ ಅಲ್ಲಾಂತ ತಿಳೀಬೇಡ" ಎಂದವನೆ ಅವನ ಕೈ ಹಿಡಿದು, ಹಸ್ತದಲ್ಲಿ ಮೂರು ನೋಟು ತುರುಕಿ "ಇದು ಈ ತಿಂಗ್ಳಿಂದು. ಕಾಲೇಜಿಗೆ ನಾಳೆಯಿಂದ ಬಾ,

ಕಾಲೇಜು ಮುಗಿಯುವವರೆಗೂ ತಿಂಗ್ಳಾ ತಿಂಗ್ಳ ಮುನ್ನೂರು ರೂಪಾಯಿ ಕೊಡ್ತೀನಿ» ಎಂದು ಸಂತೈಸತೊಡಗಿದ.

ತಲೆ ತಗ್ಗಿಸಿದ ಬಸವ "ಪುರುಷೋತ್ತಮ ನನಗ್ಯಾಕೋ: ಇದೆಲ್ಲ ಸರಿ ಕಾಣ್ತಿಲ್ಲ ಕಣೋ" ಶಂಕೆಯಿಂದ ಅರೆಮನಸ್ಸಿನಿಂದ ಕಳವಳ ಬೆರೆತ ದನಿಯಲ್ಲಿ ನುಡಿದ.

"ಸಾಕು ಸುಮ್ನಿರಲೇ ಮುದಿಯಾ ನಾಳೆ ಬರ್ಬೇಕು. ಮರೀಬೇಡ ಬರ್ತೀನಿ" ಎಂದವನೆ ಹ್ಯಾಂಡ್ಲ್ ಮೇಲೆ ಕೈ ಹಾಕಿ ಸ್ನೇಹದ ನಗೆ ನಕ್ಕ. ಗರಗಸದಂತ ಹಲ್ಲು ಮುತ್ತಿನಂತೆ ಹೊಳೆದವು! ಬೈಕ್ ಸ್ಟಾರ್ಟ್ ಮಾಡಿ ಕೈ ಬೀಸಿ ರೊಯ್ಯನೆ ಹೊರಟ.

ಮನೆಯ ದಾರಿ ಹಿಡಿದ ಬಸವನು ಸಂತೋಷದಿಂದ ಕೈಯೊಳಗಿದ್ದ ಮುನ್ನೂರು ರೂಪಾಯಿಯನ್ನು ಮೃದುವಾಗಿ ಅದುಮುತ್ತ ತನ್ನ ಜೀವನದಲ್ಲೇ ಅತೀ ಹೆಚ್ಚಿನ ಮೊತ್ತ ತನ್ನ ಕೈಯೊಳಗಿರುವುದನ್ನು ನೆನೆದು 'ಸ್ನೇಹಿತ ಅಂದ್ರೆ ಹೀಗಿರ್ಬೇಕು ಪರವಾಯಿಲ್ಲ ನನ್ನ ಕಷ್ಟ ಚನ್ನಾಗಿ ಅರ್ಥಮಾಡಿಕೊಂಡಿದ್ದಾನೆ ಆದರೆ ನಾನು ಸ್ನೇಹವನ್ನು ದುರುಪಯೋಗ ಪಡಿಸಿಕೊಂಡು ಅವನ ಋಣದಲ್ಲಿ ಸಿಲುಕಿದ್ದೇನೆ. ಇದನ್ನ ಹೇಗೆ ತೀರಿಸುವುದು? ಛೆ ಇದೇಗೆ ಋಣವಾದೀತು? ನನ್ನ ಸ್ನೇಹವೆ ಋಣಪರಿಹಾರವಾದ ಮೇಲೆ ಋಣ ತೀರಿಸುವುದು ಇನ್ನೆಲ್ಲಿ ಉಳಿಯಿತು' ಎಂದು ತಾನೇ ತೃಪ್ತಿ ತಂದುಕೊಂಡು ಗುಡಿಸಲು ಸೇರಿದ್ದು ತಿಳಿಯಲಿಲ್ಲ ದಿನದ ದಣಿವೆಲ್ಲ ಪರಿಹಾರವಾಗಿ ಅಧಿಕ ಶಕ್ತಿ ದೇಹವನ್ನು ಪ್ರವೇಶಿಸಿತ್ತು.

  

ಕಾಲೇಜಿನಲ್ಲಿ ಯಾವ ಸಮಯದಲ್ಲೂ ಸೇರಲಾರದಷ್ಟು ವಿದ್ಯಾರ್ಥಿಗಳು ಸೇರುವುದು ಎಲೆಕ್ಷನ್ನಿನ ಸಮಯದಲ್ಲೆ. ಇನ್ನೂ ಎಂಟೆತ್ತು ದಿನಗಳಿರುವಂತೆಯೆ ಯೂನಿಯನ್ ಚುನಾವಣೆಯ ವಾತಾವರಣದ ಬಿಸಿಏರತೊಡಗಿತು ಅಲ್ಲಲ್ಲಿ ಚಿಕ್ಕಚಿಕ್ಕ ಗುಂಪುಗಳು ಏರ್ಪಡುತ್ತಿದ್ದವು ನಾಲ್ಕೈದು ವಿದ್ಯಾರ್ಥಿಗಳ ಗುಂಪೊಂದು ಪುರುಷೋತ್ತಮ

ನನ್ನು ತಮ್ಮ ನಾಯಕನನ್ನಾಗಿಸಿ ಅವನ ಸುತ್ತಲೂ ನಿಂತಿದ್ದರು. ಅವರಲ್ಲಿ ಇಬ್ಬರು ಕಾಂತರಾಜು ಮತ್ತು ಶಿವರುದ್ರ. ಇವರೊಂದಿಗೆ ಪುರುಷೋತ್ತಮ, ಬಸವ ಸೇರಿದರೆ, ಶ್ರೀರಾಮ—ಸೋದರರೆ ಆಗುತ್ತಿದ್ದರು. ಶಾಸಕರ ಮಗನೆಂದ ಮೇಲೆ ಪುರುಷೋತ್ತಮನಿಗೆ ತಲೆಬಾಗುವ ಚಮಚಗಳು ಬಹಳಷ್ಟು ಮಂದಿ ಇದ್ದರು.

ಸ್ವಾಭಾವಿಕವಾಗಿ ಅಹಂಕಾರ, ಅಧಿಕಾರದ ಜೊತೆಯಲ್ಲಿ ಉದಯಿಸಿದ ಪುರುಷೋತ್ತಮ ಸ್ವಪ್ರತಿಷ್ಠೆಯಿಂದ "ಇನ್ನೆರಡು ದಿನ ಅಷ್ಟೇ ಅಪ್ಲಿಕೇಶನ್ ಹಾಕ್ಲಿಕ್ಕೆ. ಅಧ್ಯಕ್ಷರ ಸ್ಥಾನಕ್ಕೆ ಮೂವರು, ಉಪಾಧ್ಯಕ್ಷರ ಸ್ಥಾನಕ್ಕೆ ನಾನೊಬ್ಬನೆ ಗಂಡು! ಇನ್ನು ಕಾರ್ಯದರ್ಶಿ, ಸಹ ಕಾರ್ಯದರ್ಶಿ ಸ್ಥಾನಕ್ಕೆ ಹೇಳಿಂಗೇ ಇಲ್ಲ ಅಷ್ಟು ಜನ ಸ್ಪರ್ಧಿಸಿದ್ದಾರೆ, ನನ್ನೆದುರಿಗೆ ಯಾಕೆ ನಿಂತಿಲ್ಲ ಗೊತ್ತೇನ್ರಪ್ಪ?'' ಸುತ್ತ ಆವರಿಸಿದ್ದ ತನ್ನ ಸ್ನೇಹಿತರಿಗೆ ಕೇಳುವುದರೊಂದಿಗೆ ಹೊಗಳಿಕೆಗೆ ಬಾಯ್ಬಿಟ್ಟು ಪ್ರಚೋದಿಸಿದ.

"ಇನ್ನ್ಯಾಕೆ? ಈ ಗಂಡು ಪುರುಷೋತ್ತಮನ ಎದುರಿಗೆ ನಿಂತ್ರೆ ಮಣ್ಣು ಮುಕ್ಕೋದೆ ಗತಿ. ಗೆಲ್ಲೋದಿರ್‍ಲಿ ನಿಲ್ಲಿಕ್ಕೆ ಧೈರ್ಯನೂ ಬೇಕಲ್ಲ!" ಗುಂಪಿನಲ್ಲಿ ನಗೆಯನ್ನು ಮೂಡಿಸಲು ಪ್ರಯತ್ನಿಸಿದ.

"ಮತ್ತಿನ್ನೇನು? ನಾನು ಅವಿರೋಧ ಆಯ್ಕೆ ಕಣ್ರೋ" ಮತ್ತಷ್ಟು ತಾನೇ ಕೊಚ್ಚಿಕೊಂಡು ಸಂತೋಷಿಸಿದ.

''ಹೌದು. ಆದ್ರೆ ಯಾರೋ ನಿನ್ನೆ ಅಪ್ಲಿಕೇಶನ್ ಕೊಟ್ರು ಅಂತ ಕೇಳ್ದೆ" ಎಂದು ಅನುಮಾನಿಸುತ್ತ ಶಿವರುದ್ರ ನುಡಿದ. ತಕ್ಷಣವೇ ಪುರುಷೋತ್ತಮನ ಉಬ್ಬು ಸುರ ಳಿಯಾದವು. "ಯಾರು?'' ಗಂಟಲಿನಿಂದ ಕೇಳಿದ.

''ಯಾವನೋ ಒಬ್ಬ ಹೆಸರು ರಾಜು ಅಂತೆ. 'ಬಿ' ಸೆಕ್ಷನ್‌ನೋನು ಹೊಸ್ದಾಗೆ ಬಂದಿದ್ದಾನೆ ಅಂದ್ರು"–ಎಂದು ತನಗೆ ತಿಳಿದಿದ್ದ ಮಾಹಿತಿಯನ್ನು ಬಿತ್ತರಿಸಿದ

"ಅಯ್ಯೋ! ಹೊಸಬನಾ? ಇಂಥ ಹುಡುಗರ ಪರಿಚಯ ಅವ್ನಿಗ್ಬೇಕಲ್ಲ!" ಎಂದು ತೃಣವಾಗಿ ಪರಿಗಣಿಸಿ ಸ್ನೇಹಿತರ ಮುಖ ದಿಟ್ಟಿಸಿದ ಅವರು ಸ್ಪ್ರಿಂಗ್ ಗೊಂಬೆಗಳಂತೆ ತಲೆ ಹಾಕಿದರು.

ಕ್ಷಣ ಹೊತ್ತಿನ ಮೌನ ಮುರಿದು "ಏನ್ ಗುರು, ಬಸವನಿಗೆ ಏನೋ ಅಂದ್ಬಿಟ್ಟು ಕೂಲಿ ಕೊಟ್ಟು ಕಾಲೇಜಿಗೆ ಬಾ ಅಂದಿದ್ದೀನಿ ಅಂದ್ಯಲ್ಲ. ಅವ್ನಿಸ್ನೂ ನಾಪತ್ತೆ" ಅವನು ಬರುವುದರಲ್ಲಿ ಶಂಕೆ ವ್ಯಕ್ತಪಡಿಸಿದ ಕಾಂತರಾಜು.

"ಲೋ ಅದು ಬಡವರ ಕೂಸು ಕಣೋ, ಸ್ವಲ್ಪ ನಿಯತ್ತು ಇಟ್ಕೊಂಡಿರುತ್ತೆ. ಅದೊಂದು ನಾಯಿ, ಕಾಲ್ಕೆಳಗಿದ್ರೆಹೊಲಸು ನೆಕ್ತಿರುತ್ತೆ. ಆಗ ನಮ್ಮ ಕಾಲು ಕ್ಲೀನ್ ಆಗ್ತಿರುತ್ತೆ. ಆ ಕುನ್ನಿ ಬರದೆ ಎಲ್ಹೋಗುತ್ತೆ? ಅವ್ನು ಒಂತರಾ ಹೆಂಗ್ಸು ಇದ್ದಾಗೆ ಕಣ್ರೋ ಅದೇನು ಬಸ್ವ ಬಂದ್ನಲ್ಲ" ಎಂದು ಪುರುಷೋತ್ತಮ ದೂರಕ್ಕೆ ಬಸವ ಬರುವತ್ತ ಕೈ ತೋರಿಸಿದ.

ತಾನು ಬರುವುದರ ಸೂಚನೆಯನ್ನು ಕೈ ಬೀಸಿ ತೋರಿದ ಬಸವನಿಗೆ ಎಲ್ಲರೂ ತನ್ನನ್ನು ಅಪರೂಪದ ಪ್ರಾಣಿಯಂತೆ ನೋಡುತ್ತಿದ್ದಾರೆ ಎನಿಸಿತು. ಬಸವನೂ ಆ ಗುಂಪಿನಲ್ಲಿ ಸೇರಿದ.

"ನೋಡು ಗುರು, ಅವ್ನೆ ರಾಜು ಅಂದ್ರೆ. ನಿನ್ನ ಎದುರು ಪಾರ್ಟಿ" ಎಂದ ಶಿವರುದ್ರ. ದೂರದಲ್ಲಿ ಸೋಮ ಮತ್ತು ರವಿ ವಿದ್ಯಾರ್ಥಿನಿಯರಿಗೆ ರಾಜನನ್ನು ಪರಿಚಯಿಸುತ್ತಿದ್ದರು. ತಿಳಿ ಗುಲಾಬಿ ವರ್ಣದ ಪೂರ್ಣ ತೋಳಿನ ಅಂಗಿ, ಕಪ್ಪು ಬಣ್ಣದ ಪ್ಯಾಂಟ್‌ಗೆ ಇನ್‌ಷರ್ಟ್ ಮಾಡಿದ್ದ ರಾಜು, ಬಲು ಆಕರ್ಷಕವಾಗಿ ಕಾಣುತ್ತಿದ್ದ. ಮೋಹಕ ನಗುವನ್ನು ಹೊಮ್ಮಿಸುತ್ತಿದ್ದ ರಾಜು ಬರೀ ನಗೆಯಿಂದಲೇ ಓಟು ಗಳಿಸುವವನಂತೆ ತೋರುತ್ತಿದ್ದ.

ಕೂಲಿಂಗ್ ಗ್ಲಾಸ್ ಚಕ್ಕನೆ ತೆಗೆದು "ಓ ಅವನೋ? ಗೆಲ್ಬೇಕಲ್ಲ! ಅದೇಗೆ

ಗೆಲ್ಲಿಕ್ಕೆ ಸಾಧ್ಯ?" ಅವನೆಡೆಗೆ ನೋಟ ಬೀರಿ ಜಂಭದಿಂದ ನುಡಿದ. ಅವರೆಲ್ಲ ನೋಡುತ್ತಿದ್ದಂತೆ ರಾಜು, ಸೋಮು ಮತ್ತು ರವಿ ಅಲ್ಲಿಂದ ತೆರಳಿದರು.

ಕಾಲೇಜಿನಲ್ಲಿಯೂನಿಯನ್ ಚುನಾವಣೆಗೆ ಸ್ಪರ್ಧಿಸಿದಕ್ಷಣದಲ್ಲೇ ಅವಿರೋಧವಾಗಿ ಆಯ್ಕೆಯಾಗುವ ಕನಸು ಕಾಣುತ್ತಿದ್ದ ಪುರುಷೋತ್ತಮನ ಕನಸು ನುಚ್ಚುನೂರಾಯಿತು ಹಲವು ಕಡೆಯಿಂದ ರಾಜುನೇ ಸರಿಯಾದ ಸ್ಪರ್ಧಿ ಎನಿಸಿದರೆ, ಮತ್ತೊಮ್ಮೆ ರಾಜುಗೆ ಸೋಲು ಕಟ್ಟಿಟ್ಟ ಬುತ್ತಿ ಎನಿಸುತ್ತಿತ್ತು ಹಣದ ಪ್ರಭಾವದಿಂದ ಬ್ಯಾನರ್ಸ್, ಕಾಫಿ ತಿಂಡಿಯೊಂದಿಗೆ ಕ್ಯಾನ್‌ವಾಸ್ ಆರಂಭಿಸಿದ ಅವನಿಗೆ, ಆತ್ಮಸ್ತುತಿ ಮಾಡುವವರಿದ್ದುದರಿಂದಲೂ ಗೆಲುವು ತನ್ನದೇ ಎಂದು ಬೀಗುತ್ತಿದ್ದ. ಒಟ್ಟಿನಲ್ಲಿ ಕಾಲೇಜಿನಲ್ಲಿ ಸ್ಪರ್ಧಿಗಳ ದೃಷ್ಟಿಯಿಂದ ಆಕರ್ಷಕವಾಗಿದದ್ದು ಉಪಾಧ್ಯಕ್ಷ ಸ್ಥಾನ. ಕಾಲೇಜು ಗೋಡೆಯ ಮೇಲೆ ಭಿತ್ತಿ ಪತ್ರಗಳು. ಕಾಂಪೌಂಡಿನ ಮೇಲೆಲ್ಲ ಸ್ವಲ್ಪವೂ ಜಾಗ ಬಿಡದಂತೆ ಬರೆದು ಭರ್ತಿ ಮಾಡಿದ್ದರು 'ನಿಮ್ಮ ಮೆಚ್ಚಿನ ನಾಯಕ, ಅಭ್ಯ ಇವನಿಗೆ ನಿಮ್ಮ ಮತ. ನಿಮ್ಮ ಮತ ಇವನಿಗೆ ಮೀಸಲು ಇತ್ಯಾದಿ ಪದಗಳಿಂದ ತುಂಬಿತ್ತು.

ಬಣ್ಣ ಬಣ್ಣದ ಬ್ಯಾನರ್ಸ್‌ಗಳು ಬಿದಿರಿನ ಕೋಲುಗಳ ನಡುವೆ ತಮ್ಮ ತಮ್ಮ ಅಭ್ಯರ್ಥಿಗಳಿಗೆ ಪ್ರಚಾರದ ಮೂಲಕ ಸಹಕರಿಸುವಂತೆ ತೂರಾಡುತ್ತಿದ್ದವು ಅತಿ ಹೆಚ್ಚು ಹಣ ಚೆಲ್ಲಿದ ಪುರುಷೋತ್ತಮನ ಪಾಲು ಶೇಕಡ ಎಪ್ಪತ್ತರಷ್ಟು ಎಲ್ಲೆಲ್ಲೂ ಅವನ ಹೆಸರಿನ ಬ್ಯಾನರ್ಸ್.

ಕ್ಲಾಸ್‌ನಲ್ಲಿ ವಿದ್ಯಾರ್ಥಿಗಳು ಇರುವಂತೆಯೆ ಪ್ರಥಮ ಭಾಷಣವನ್ನು ರಾಜುವಿನ ಪರವಾಗಿ ಸೋಮು ಆರಂಭಿಸಿದ್ದ– "ನನ್ನ ಮೆಚ್ಚಿನ ವಿದ್ಯಾರ್ಥಿ ಮಿತ್ರರೇ, ಈ ವರ್ಷದ ವಿದ್ಯಾರ್ಥಿಗಳ ಚುನಾವಣೆಯಲ್ಲಿ ನಮ್ಮ ಕ್ಲಾಸಿನ ರಾಜು ಉಪಾಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಿರುವುದು ಎಲ್ಲರಿಗೂ ತಿಳಿದ ವಿಷಯವೆ. ಸ್ವಯಂ ಇಚ್ಛೆಯಿಂದ ನಾವು ನೀವೆಲ್ಲರೂ

ಅವನ ಗೆಲುವಿಗೆ ಪರಿಶ್ರಮ ಪಡೋಣವೆಂದು ಇವತ್ತಿನಿಂದ ಕ್ಯಾನ್‌ವಾಸ್ ಆರಂಭಿಸಿದ್ದೇವೆ. ನೀವೆಲ್ಲರೂ ನಮ್ಮೊಂದಿಗೆ ಬಂದು ಸಹಕರಿಸಬೇಕಾಗಿ ಕೇಳಿಕೊಳ್ಳುತ್ತೇನೆ." ಎಂದು ಪಕ್ಕದಲ್ಲಿ ನಿಂತಿದ್ದ ಅಭ್ಯರ್ಥಿ ರಾಜುವನ್ನು ಪರಿಚಯಿಸಿದಾಗ ಲಕ್ಷ್ಮಿಯ ತಲೆ ಸಿಡಿದು ಹೋಗುವಂತೆ ಕರತಾಡನ ಮಾಡಿದರು. ಅವಳ ನೃತ್ಯವನ್ನು ಕದ್ದು ನೋಡಿದ್ದು, ಅವನನ್ನು ದ್ವೇಷಿಸಲು ಮುಖ್ಯ ಕಾರಣವಾಗಿತ್ತು. ಜೊತೆಯಲ್ಲಿ ಎರಡು ಬಾರಿ ಬಿಡದೆ ಹಠದಿಂದ ಅವಳನ್ನು ಮಾತನಾಡಿಸಿದ್ದು ಅವಳ ನೇಡಿನ ಭಾವ ಹೆಚ್ಚುವಂತೆ ಮಾಡಿತು.

ನಯವಿನಯದಿಂದ, ತನ್ನ ಅಸ್ತ್ರ ಮೋಹಕ ನಗುವಿನಿಂದ ಕೈ ಜೋಡಿಸಿದಾಗ ರೋಷದಿಂದಲೇ ನೋಡಿದಳು. ಅಲ್ಲಿಂದ ಎದ್ದು ಹೋಗುವಂತಿರಲಿಲ್ಲವಾದ್ದರಿಂದ ಸುಮ್ಮಗೆ ಕುಳಿತು ತನ್ನ ಸ್ನೇಹಿತೆಯರ ಮುಖ ವೀಕ್ಷಿಸಿದಳು. ಅವರೂ ಸಹ ನಗುತ್ತಿರುವಂತೆ ಕಂಡದ್ದು ಎಲ್ಲರೂ ಅವಳಿಗೆ ವಿರೋಧವಾಗಿ ಭುಗಿಲೆದ್ದ ರೋಷಕ್ಕೆ ಆಜ್ಯ ಹೊಯ್ದಂತಾಯಿತು.

ಎದುರಿಗೆ ಬಂದು ತಲೆ ತಗ್ಗಿಸಿ ನಿಂತ ನೀಳಕಾಯದ ರಾಜು, ಸುತ್ತಲೂ ಒಮ್ಮೆ ಪರೀಕ್ಷಾ ನೋಟದಿಂದ ನೋಡಿ ಗಂಟಲು ಕೆನೆದು, ಮೆಲುದನಿಯಿಂದ ಆರಂಭಿಸಿದ. ಇಡೀ ತರಗತಿ ನಿಶ್ಶಬ್ದದಿಂದ ಭಾಷಣಕ್ಕೆ ಉತ್ತೇಜಿಸುವಂತಿತ್ತು. ಗಟ್ಟಿಯಾಗಿ ಉಸಿರಾಡಿದರೂ ಕೇಳುವಂತ ಮೌನ– "ನನ್ನ ಆತ್ಮೀಯ ಗೆಳೆಯರೇ–ನಾನು ಈ ಊರಿಗೆ ಬಂದೇ ಒಂದು ತಿಂಗಳಾಯಿತಷ್ಟೆ. ನನಗೆ ಇಲ್ಲಿ ಅಷ್ಟೇನು ಹೆಚ್ಚಿನ ಜನ ಪರಿಚಯವಿಲ್ಲ. ನೀವೇ ನನ್ನ ಗೆಲ್ಲಿಸಬೇಕಾದ ಶಕ್ತಿ. ನಿಮ್ಮ ನಂಬಿಕೆನೇ ನನ್ನ ಗೆಲುವಿನ ಸುಗಮ ದಾರಿ ಎಂದು ನಂಬಿ ಉಪಾಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಿದ್ದೇನೆ. ವಿದ್ಯಾರ್ಥಿಗಳ ಅತ್ಯವಶ್ಯಕವಾದ ಕೆಲಸಗಳನ್ನು ಪೂರೈಸಿಕೊಡುತ್ತೇನೆ ಎಂದು ಭರವಸೆಕೊಡುತ್ತೇನೆ ದಯವಿಟ್ಟು ನೀವೆಲ್ಲರೂ ಓಟುಕೊಟ್ಟು ಸಹಕರಿಸಬೇಕಾಗಿ ಸವಿನಯ ಪ್ರಾರ್ಥನೆ" ಎಂದು ಮತ್ತೊಮ್ಮೆ ಕೈ ಜೋಡಿಸಿದ. ಲಕ್ಷ್ಮಿಯ ಕಡೆಗೆ ನೋಡುವುದನ್ನು ಮರೆಯಲಿಲ್ಲ ಲಕ್ಷ್ಮಿ ಮತ್ತೊಮ್ಮೆ ಹಲ್ಲು ಮಸೆದಳು " ಓ ಹೋ " ಎಂದರಚಿ, ಡೆಸ್ಕ್, ಪುಸ್ತಕಗಳನ್ನು ಬಡಿದು ವಿದ್ಯಾರ್ಥಿಗಳು ಪ್ರೋತ್ಸಾಹಿಸಿದರು.

ಸ್ಪೇಜ್‌ಫಿಯರ್ ಇಲ್ಲದಂತೆ ಪುಟ್ಟ ಭಾಷಣ ಮುಗಿಸಿದ ರಾಜುವಿನ ಕಣ್ಣುಗಳು ಹೊಳೆಯುತಿದ್ದವು. ಎಲ್ಲರನ್ನೂ ಸೆಳೆಯುವ ಅವನ ರೂಪ ವಿಶೇಷವಾಗಿ ವಿದ್ಯಾರ್ಥಿನಿಯರನ್ನು ಆಕರ್ಷಿಸಿತು.

ಸೋಮು ಚಪ್ಪಾಳೆ ಹಾಕಿ ಕೈ ಎತ್ತಿ ಗಲಾಟೆಯನ್ನು ನಿಲ್ಲಿಸುವಂತೆ ಸೂಚಿಸಿ "ನೋಡಿ ಅಭ್ಯರ್ಥಿ ಪರವಾಗಿ ಕ್ಯಾನ್‌ವಾಸ್ ಮಾಡಲು ಇಷ್ಟ ಇರುವವರು ಹೊರಗಡೆ ಬಂದ್ರೆ ಪಾಂಪ್ಲೆಟ್ಸ್ ಕೊಡ್ತೀವಿ ದಯವಿಟ್ಟು ಮುಂದೆ ಬನ್ನಿ" ಎಂದು ಸಾರಿದ. ಸಲ್ಪತ್ತು ಐವತ್ತು ವಿದ್ಯಾರ್ಥಿ ಸಮೂಹದ ಮುಂದೆ ರಾಜು ಹೊರಟ, ಸ್ನೇಹಿತರ ಜಯಕಾರ ಲಕ್ಷ್ಮಿಯ ತಲೆಯಲ್ಲಿ ಜ್ವಾಲಾಮುಖಿ ಭುಗಿಲೇಳುವಂತೆ ಮಾಡಿತು. ಲಕ್ಷ್ಮಿಯ ಮಥಿಸುವ ಮನ ಏನೋ ಚಿಂತಿಸಿತು. ಹಿಂದಿನಿಂದ ಆ ಗುಂಪನ್ನು ರೋಷಪಾವಕದಿಂದ ನೋಡಿದಳು

ಇನ್ನೊಂದೆಡೆ ಪುರುಷೋತ್ತಮನ ಸಂಗಡದವರು ನಡೆಯುತ್ತಿದ್ದ ಕ್ಲಾಸನು ಪ್ರವೇಶಿಸಿದರು. ಅಧ್ಯಾಪಕರು ಚುನಾವಣೆಯ ಗಲಾಟೆಯಲ್ಲಿ ಪಾಠ ಮುಂದುವರಿಸಲಾರದೆ ಹೊರಗೆ ನಡೆದರು. ಪುರುಷೋತ್ತಮ ನಾಲ್ಕೈದು ಜನ ಸ್ನೇಹಿತರು, ಹಿಂಬಾಲಕರೊಂದಿಗೆ ದರ್ಪದಿಂದ ಸ್ಟೇಜ್ ಹತ್ತಿದ. ಮೊದಲಿನಂತೆ ಒಬ್ಬ ಪುರುಷೋತ್ತಮನ ಗುಣಗಾನ ಮಾಡತೊಡಗಿದ. "ಇವರು ನಮ್ಮ ನಾಡಿಗಾಗಿ ದುಡಿಯುತ್ತಿರುವ ಶಾಸಕ ಭೀಮಪ್ಪನವರ ಪುತ್ರ. ತಂದೆಯಂತೆಯೆ ಜನರ ಏಳ್ಗೆಗಾಗಿ ದುಡಿಯುವ ಪುರುಷೋತ್ತಮ, ಸ್ವಶಕ್ತಿಯಿಂದ ಗೆಲುವು ಪಡೆದು ಆರಿಸಿ ಬರುವುದೇ ಅವರ ಮಹತ್ವಾಕಾಂಕ್ಷೆಯಾಗಿದೆ, ನಿಮ್ಮೆಲ್ಲರ ಕಷ್ಟ ನಷ್ಟದಲ್ಲಿ ಭಾಗಿಯಾಗುವುದು ಧ್ಯೇಯವಾಗಿದೆ. ಕೆಲವರು ಇವರ ಹೆಸರಿನಲ್ಲಿ ಅಪಪ್ರಚಾರ ಮಾಡುತ್ತಿದ್ದಾರೆ ಅವರಿಗೆ ನೀವೆ ಬುದ್ಧಿ ಕಲಿಸಬೇಕೆಂದು ಕಳಕಳಿಯಿಂದ ಕೇಳಿಕೊಳ್ಳುತ್ತೇನೆ ಹಾಗೆ ತಪ್ಪದೆ ಇವರಿಗೆ ನಿಮ್ಮೆಲ್ಲರ ಅಭಿಮಾನದ ಮತ ಹಾಕಬೇಕೆಂದು ಬೇಡಿಕೊಂಡು, ಶ್ರೀಮಾನ್ ಪುರುಷೋತ್ತಮರು ಕೆಲವು ಮಾತನಾಡಬೇಕೆಂದು ವಿದ್ಯಾರ್ಥಿಗಳ ಪರವಾಗಿ ಕೇಳುತ್ತೇನೆ" ಎಂದು ಅಭ್ಯರ್ಥಿಯ ಕಡೆ ತಿರುಗಿ ನುಡಿದ.

ಪುರುಷೋತ್ತಮ ಮುಂದೆ ಬಂದು ಮೋಹಕವಾಗಿ ನಗಲು ಪ್ರಯತ್ನಿಸಿ ತಲೆ ಹಾಕುತ್ತ ಜೇಬಿನಲ್ಲಿದ್ದ ಕೈಯನ್ನು ಹೊರ ತೆಗೆದು ಕೂಲಿಂಗ್ ಗ್ಲಾಸ್ ಸರಿಪಡಿಸಿಕೊಂಡು ತಲೆಹಾಕಿ, ಓರೆಯಾಗಿ ನಿಂತು ಗಂಟಲು ಸರಿಪಡಿಸಿಕೊಂಡು ಪುನಃ ಎರಡೂ ಕೈಗಳನ್ನು ಜೇಬಿಗೆ ಸೇರಿಸಿದ. ತನ್ನತ್ತ ಗಮನ ಸೆಳೆಯಬೇಕಾದ ಎಲ್ಲಾ ತಂತ್ರಗಳನ್ನು ಮುಗಿಸಿ, "ಮೈ ಡಿಯರ್ ಫ್ರೆಂಡ್ಸ್ ನನ್ನನ್ನು ಹೆಚ್ಚು ಪರಿಚಯಮಾಡಿಕೊಡುವ ಅಗತ್ಯವಿಲ್ಲವೆಂದು ಅನ್ನಿಸುತ್ತಿದೆ. ಏಕೆಂದ್ರೆ ಮೂರು ವರ್ಷಗಳ ಮುಖ ಪರಿಚಯ ಆ ಮಟ್ಟವನ್ನು ಮುಟ್ಟಿದೆ ನಾವು ಬಂದಿರುವ ಕಾರ್ಯ ನಿಮಗೆ ಗೊತ್ತಿರುವಂತದ್ದೆ, ಪುನಃ ಅದನ್ನು ಬಿಡಿಸಿ ಹೇಳ್ಬೇಕಾಗಿಲ್ಲ. ನೀವೆಲ್ಲರೂ ದಯವಿಟ್ಟು ನನ್ನ ಎಬಿಲಿಟಿ ನೋಡಿ ಓಟು ಕೊಡ್ಬೇಕು ಇದರ ಬಗ್ಗೆ ನಿಮ್ಮೆಲ್ಲರಿಗೂ ಹೇಳೋದು ಒಂದು ವಿಷಯವಿದೆ ಅದೇನೆಂದ್ರೆ ನನಗೆ ನಿಜವಾಗಿಯಾ ಬಸ್ಸಿಗೆ ಬರುವಂತಹ ಹುಡುಗರನ್ನ ನೋಡಿದ್ರೆ ಅಯ್ಯೋ ಅನ್ಸುತ್ತೆ. ಏಕೆಂದ್ರೆ?- ಸರ್ಕಾರದವರು ವಿದ್ಯಾರ್ಥಿಗಳಿಗೆ ಫ್ರೀ ಬಸ್ ಬಿಡಿಸ್ಬೇಕು ಕೆ ಎಸ್ ಆರ್. ಟಿ ಸಿ. ಯಲ್ಲಿ ಆಗ್ತಿರುವ ನಷ್ಟ ಬಹಳಷ್ಟು. ಆದ್ರೆ ನಮ್ಮ ರಾಜಕಾರಣಿಗಳು ಈ ಕೆಲಸ ಮಾಡ್ಲಿಕ್ಕೆ ಹಿಂದೆ ಮುಂದೆ ನೋಡ್ತಾರೆ. ನಾನು ಗೆದ್ದರೆ ಈ ಕಾರ್ಯಕ್ಕೆ ಖಂಡಿತನಾಗಿ ಪ್ರಯತ್ನಪಡ್ತೇನಂತ ಭರವಸೆ ಕೊಡ್ತೀನಿ" ಎನ್ನುತ್ತಿದ್ದಂತೆ ಬೆಂಚುಗಳನ್ನು ದಪ ದಪ ಬಡಿದು ತಮ್ಮ ಅಭಿಮಾನ, ಅಭಿಲಾಷೆ ತೋರಿದರು ಇದರಿಂದ ಪ್ರಚೋದಿತನಾದ ಪುರುಷೋತ್ತಮ ಅತ್ತ ಇತ್ತ ಸ್ಟೈಲ್‌ನಿಂದ ಓಡಾಡುತ್ತ ಮುಂದುವರಿಸಿದ.

"ಆ ಲೈಬ್ರರಿಯಲ್ಲಿ ನೋಡಿದ್ರೆ ಸರಿಯಾದ ಪುಸ್ತಕ, ಬೆಂಚು ಕುರ್ಚಿಗಳಿಲ್ಲ ಬೇಸಿಗೆ ಕಾಲಕ್ಕೆ ಫ್ಯಾನ್ ಬೇಕೆ ಬೇಕು. ಮಧ್ಯಾಹ್ನ ಊಟಕ್ಕೆ ಸರಿಯಾದ ನೀರಿನ ವ್ಯವಸ್ಥೆಯಿಲ್ಲ. ನಾನು ಉಪಾಧ್ಯಕ್ಷ ಸ್ಥಾನದಿಂದ ಹಾರಿಸಿ ಬಂದರೆ ಈ ಕೆಲಸಗಳನ್ನು ಯಶಸ್ವಿಯಾಗಿ ಮಾಡುತ್ತೇನೆ. ಇದಕ್ಕೆ ನಿಮ್ಮೆಲ್ಲರ ಸಹಕಾರ ಅತ್ಯಗತ್ಯ. ಮರ್‍ಯಾದೆ ಬಿಟ್ಟು ಮೂರು ಬಾರಿ ಓಟು ಕೇಳಿದ್ದೇನೆ ದಯವಿಟ್ಟು ತಪ್ಪದೆ ಕೊಟ್ಟು ಜಯಶಾಲಿಯಾಗಿ ಮಾಡ್ತೀರೆಂದು ನಂಬಿ ನನ್ನ ಪುಟ್ಟ ಭಾಷಣ ಮುಗಿಸ್ತಿದ್ದೀನಿ" ಎಂದು ಕೈ ಜೋಡಿಸಿ ತನ್ನ ಗರಗಸದಂತ ಹಲ್ಲುಗಳನ್ನು ಪ್ರದರ್ಶಿಸಿದ. ಕೂಗಾಟ ಆಕಾಶ ಮುಟ್ಟ ತೊಡಗಿತು. ಹಿಂಬಾಲಕರಿಂದ "ಪುರುಷೋತ್ತಮನಿಗೆ ಜಯವಾಗಲಿ" ಎಂಬ ಘೋಷಣೆ ಮುಗಿಲೇರು

ಶಿತ್ತು.

O O O

ರಾಜು ತನ್ನ ಮನೆಗೆ ಬಂದಿದ್ದ ಮಿತ್ರರಿಗೆಲ್ಲ ಕಾಫಿ, ತಿಂಡಿ ನೀಡಿದ. ತಾಯಿ ಮಂಜಮ್ಮಳಿಗೇನೋ ಹಿಡಿಯಲಾರದಷ್ಟು ಸಂತೋಷ. ವೆಂಕಟಯ್ಯನವರಿಗೆ ಮಾತ್ರ ಸ್ವಲ್ಪವೂ ಇಷ್ಟವಿರಲಿಲ್ಲ. ಅಷ್ಟು ಹುಡುಗರ ಮುಂದೆ ಬಂದ ವೆಂಕಟಯ್ಯ "ನೋಡ್ರಪ್ಪ, ಜಗಳಕ್ಕೆ ಮಾತ್ರ ಹೋಗ್ಬೇಡಿ, ಬೇಡಾ ಅಂದ್ರೂ ನಿಂತ್ಬಿಟ್ಟ ಬಡ್ಡಿಮಗ" ಸಮೀಪದಲ್ಲಿ ನಿಂತಿದ್ದ ಮಗನನ್ನು ಧೂಷಿಸಿದರು. ಅವರ ಮುಖದಲ್ಲಿ ಅಸಮಾಧಾನ ತುಂಬಿ ತುಳುಕು ತ್ತಿತ್ತು ರಾಜು ಅಪರಾಧಿಯಂತೆ ತಲೆ ತಗ್ಗಿಸಿ ನಿಂತ. ಸೋಮು ಸುಮ್ಮನಿರ ವವನಲ್ಲ "ನೀವೇನು ಭಯ ಪಡ್ಬೇಡಿ. ಸಾರ್ ಅವನಿಗೆ ಯಾವ ತೊಂದ್ರೆನೂ ಆಗದಂತೆ ನಾವು ನೋಡ್ಕೋತೀವಿ" ಎಂದು ಭರವಸೆಯ ನುಡಿಯಾಡಿದ. ಆದರೂ ಅವರಿಗೆ ಸಮಾಧಾನವಿರ ಲಿಲ್ಲ. ಹೆತ್ತ ಕರುಳು, ಒಬ್ಬ ಮಗನೆಂದು ಅಂಗೈಲ್ಲಿ ಇಟ್ಟು ಸಾಕಿದವರು. ಹೆಚ್ಚು ಕಡಿಮೆ ಯಾಗುವುದೆಂದರೆ ಸಹಿಸುವಂತ ಚೇತನಗಳಾಗಿರಲಿಲ್ಲ.

ವೆಂಕಟಯ್ಯ ಸ್ವಲ್ಪ ಹೊತ್ತು ತಡೆದು "ನಾನು ಯಾಕೆ ಹೇಳ್ದೆ ಅಂದ್ರೆ ನೀವಿನ್ನೂ ಹುಡುಗ್ರು, ಎಳೇರಕ್ತ ಯಾರೂ ಅಪಮಾನ ಸಹಿಸೊಲ್ಲ. ಅದ್ಕೆ ಜಗ್ಳ ಮಾಡ್ಕೋತೀರಂತ ಅಂದೆ. ಹುಷಾರಾಗಿದ್ರೆ ಆಯ್ತು" ಎಂದು ಕನ್ನಡಕ ತೆಗೆದು ಒರೆಸಿ ಕೊಳ್ಳುತ್ತ ಒಳ ನಡೆದರು.

"ಏನಪ್ಪ. ಈಗ ಏನ್ಮಾಡೋಣ ? ಹೋಗೋಣ್ವಾ ?" ಮೆಲುದನಿಯಲ್ಲಿ ಕೇಳಿದ ಸೋಮು.

"ಹ್ಞ ಹೊರಡೋಣ. ಫಸ್ಟ್ ಲಕ್ಷ್ಮಿ ಮನೆಗೆ ಹೋಗೋಣ. ಪಕ್ಕದ ಮನೇನೆ ಅವರದು. ಅಲ್ಲಿಂದ ಹೊರಟು ನಮ್ಮ ಕಾಲೇಜು ಹುಡುಗರಿರುವ ಮನೆಗೆಲ್ಲ ಹೋಗಿ ಬರೋಣ. ನೋಡಿ ನಿಮಗ್ಯಾರಿಗೆ ನಮ್ಮ ಕಾಲೇಜಿನ ವಿದ್ಯಾರ್ಥಿಗಳು ಗೊತ್ತಿದ್ದಾರೋ ಅವರ ಮನೆಗೆ ಕರೆದೊಯ್ದು ಪರಿಚಯ ಮಾಡಿಸಿ" ಎಂದು ದನಿ ಏರಿಸಿ ನುಡಿದ ರಾಜು. ಎಲ್ಲರೂ ಗೋಣು ಹಾಕಿದರು.

ನಿಂತಲ್ಲಿಂದಲೇ "ಅಮ್ಮಾ, ಅಪ್ಪ ಹೋಗ್ಬರ್ತೀನಿ" ಎಂದ.

" ಸರಿ ಹುಷಾರಾಗಿ ಹೋಗ್ಬ್ಯಾ " ಎಂದರು ಪತಿಪತ್ನಿಯರಿಬ್ಬರು. ಎಲ್ಲರೂ ಹೊರಟು ಲಕ್ಷ್ಮಿಯ ಮನೆಯ ಬಾಗಿಲಿಗೆ ಬಂದರು. ಬೆಲ್ ಬಾರಿಸುತ್ತಿದ್ದಂತೆ ಲಕ್ಷ್ಮಿಯ ತಂದೆ ರಮೇಶ್ ಬಂದು ಬಾಗಿಲು ತೆರೆದ ಭವ್ಯದೇಹದ ಯಜಮಾನರಿಗೆ " ನಮಸ್ಕಾರ ಸಾರ್ " ಎಂದ ರಾಜು.

" ಓ ನೀವಾ ? ಏನ್ ಸಮಾಚಾರ ಸೈನ್ಯವೇ ಬಂದಿರುವಂತಿದೆ. ಬನ್ನಿ, ಬನ್ನಿ " ಎಂದು ಸ್ವಾಗತಿಸಿದರು

ಒಳಗೆ ಅರ್ಧಜನ ಕೂರುವಷ್ಟು ಜಾಗ ಮಾತ್ರವಿತ್ತು. ಆದ ಕಾರಣ "ಪರವಾಯಿಲ್ಲ ಬಿಡಿ ಸಾರ್. ನಾನು ಎಲ್ಲರಿಗೆ ನಿಂತಿದ್ದೀನಿ ಸಾರ್. ನಿಮ್ಮ ಮಗಳಿಗೆ ಸ್ವಲ್ಪ ಕರೆಯಿರಿ ಸಾರ್. ಅವ್ರಿಗೆ ಹೇಳ್ಬೇಕು" ಎಂದ.

"ಓ ಹೌದಾ ? ಬಂದೆ ಒಂದ್ನಿಮಿಷ" ಎಂದು ಹೇಳಿ ಅವಳ ರೂಮ್ ಬಾಗಿಲಿಗೆ ಬಂದು "ಲಕ್ಷ್ಮಿ ಲಕ್ಕ್ಮೀ ಬೇಗ ಬಾ ಇಲ್ಲಿ ನಿನ್ನ ಕ್ಲಾಸ್‌ಮೇಟ್ಸ್ ಬಂದಿದ್ದಾರೆ" ಎಂದು ಕರೆದರು. ಬಂದಿದ್ದವರಿಗೆ ಅವರು ಎಷ್ಟು ಸೋಷಿಯಲ್ ಎಂದು ವಿಧಿತವಾಗುತಿತ್ತು. ಜೊತೆಯಲ್ಲಿ ರಾಜುವಿನೊಂದಿಗೆ ಸ್ನೇಹದ ಮನೋಭಾವ ತೋರಿದರು.

ಮನೆಯಲ್ಲಿ ಆಕೆ ಸಾಮಾನ್ಯವಾಗಿ ತೊಡುವುದು ನಿಲುವಂಗಿ ತರಹದು ಬೂದು ಬಣ್ಣದ ಬಟ್ಟೆ, ಧರಿಸಿದವಳು ಒಳಗಿನಿಂದ ಬರುತ್ತಲೇ 'ಯಾರಿರಬಹುದೆಂದು?' ಚಿಂತಿಸುತ್ತ ಬಂದಳು ತಂದೆಯ ಎದುರಿಗೆ ನಿಂತು ತನ್ನತ್ತಲೇ ನೋಡುತಿದ್ದ ರಾಜು ಮುಗುಳ್ನಗುತಿದ್ದ. ಅವರು ಬಂದಿರುವುದು ಏಕೆಂದು ಹೇಳುವ ಅವಶ್ಯಕತೆ ಇರಲಿಲ್ಲ "ಎಲ್ಲೆ ದುರಹಂಕಾರಿ ." ಎಂದುಲಿಯಿತು ಅವಳ ಮನ. ತೀಕ್ಷಣ ನೋಟದಿಂದಲೇ ಅವನನ್ನು ತಿವಿದು ಎದುರಿಸಲು ಹವಣಿಸಿದಳು. ಪೂಗಿನ ಹೊಳ್ಳೆ ಸೇಡು ತೀರಿಸಿಕೊಳ್ಳುವ ನಾಗರ ಹಾವಿನಂತೆ ಹಿಗ್ಗಿದವು.

"ನಮಸ್ಕಾರ. ನಿಮ್ಹಿಂದ ದೊಡ್ಡ ಸಹಾಯ ಆಗ್ಬೇಕು ನೀವು ಸಾಧ್ಯವಾದಷ್ಟು

ಮಟ್ಟಿಗೆ ನನ್ನ ಪರವಾಗಿ ಕ್ಯಾನ್‌ವಾಸ್ ಮಾಡ್ಬೇಕು. ನಿಮ್ಮ ಫ್ರೆಂಡ್ಸ್‌ಗೆಲ್ಲ ದಯವಿಟ್ಟು ಹೇಳಿ....." ಪ್ರತಿಯಾಗಿ ಅವನ ಮಾತುಗಳೆಲ್ಲವನ್ನು ನಿರ್ಲಿಪ್ತತೆಯಿಂದ ಆಲಿಸಿದಳು.

"ಹ್ಞಾ ತಗೊಳ್ಳಿ" ಎಂದು ಪಾಂಪ್ಲೆಟ್ ತೆಗೆದು ಕೊಡಲು ಮುಂದೆ ಚಾಚಿದ ಅವಳಿನ್ನೂ ತೆಗೆದುಕೊಳ್ಳದ್ದನ್ನು ಕಂಡು "ತಗೋ ಲಕ್ಷ್ಮಿ" ಎಂದರು ರಮೇಶಪ್ಪ

ಉಸಿರಿನಲ್ಲೂ ಸಹ "ಹೂಂ " ಎನ್ನದೆ ತಂದೆಯನ್ನೂ ಅದೇ ತೀಕ್ಷ್ಣ ನೋಟದಲ್ಲಿ ನೋಡಿ ಕೈಗೆ ತೆಗೆದುಕೊಂಡಳು.

"ಥ್ಯಾಂಕ್ಸ್ ಸಾರ್. ನಾನು ಬರ್ತೀನಿ" ಎಂದು ಹಿಂದೆ ಸರಿಯುತ್ತಲೇ ನೋಡುತ್ತಿದ್ದ 'ನಾಗಿನ್'ಗೆ "ಬರ್ತೀನಿ" ಎಂದು ಹಿಂತಿರು ಗಿನಗೆದ ಬೆಂಕಿಯ ಉಂಡೆಯಂತೆ ಕಂಡ ಲಕ್ಷ್ಮಿಗೆ 'ನಿನ್ನ ಮೇಲೆ ನೀರು ಸುರಿದು ತಣ್ಣಗೆ ಮಾಡೋದು ನನಗೆ ಚನ್ನಾಗಿ ಗೊತ್ತು. ನಾನೂ ಮೊದ್ಲು ಹುಡುಗಿಯರ ಕಂಡಾಗ ಹಿಂಗೇ ಮಾಡ್ತಿದ್ದೆ ಹುಡುಗೀ ' ಮುದ್ದಿನಿಂದ ಎಂದುಕೊಳ್ಳುತ್ತಲೇ ಸ್ನೇಹಿತರೊಡನೆ ಮುಂದಿನ ವಿದ್ಯಾರ್ಥಿಯ ಮನೆಗೆ ಹೋಗಬೇಕಾದ ಕಡೆ ನಡೆದರು.

ಇಷ್ಟೊತ್ತಿನ ಮೇಲೆ ಬಂದ ತಾಯಿ ಸಾವಿತ್ರಿ "ಏನು? ಏನಂತೆ ಲಕ್ಷ್ಮಿ?" ಕೇಳಿದಳು.

ಉತ್ತರಿಸದೆ ಉರಿಗಣ್ಣಿಂದ ನೋಡುತ್ತ ಕೈಯಲ್ಲಿದ್ದ ಪಾಂಪ್ಲೆಟ್ಸ್‌ನ್ನೆಲ್ಲ ಹರಿದು ಹಾಕಿದಳು.

"ಅರೆ ಅರೇ ಲಕ್ಷ್ಮಿ ಇದೇನೆ ಹೀಗೆ ಎಲ್ಲ ಹರಿದಾಕ್ಬಿಟ್ಟೆ?" ಎಂದು ತಡೆಯಲು ಬಂದ ತಂದೆಗೆ "ನಾನು ಇರೋದು ಇವ್ನ ಆಪೋಸಿಟ್ ಪಾರ್ಟಿ. ಅದಕ್ಕೆ ನಾನು ಇವ್ನ ವಿರೋಧಿಸುತ್ತೇನೆ" ಎಂದು ಆಕ್ರೋಶದಿಂದ ಉಲಿದು ಕೈಯಲ್ಲಿ ಉಳಿದಿದ್ದ ಹರಿದ ತುಂಡುಗಳನ್ನು ನೆಲಕ್ಕೆ ಬೀಸಿ ಎಸೆದಳು

"ವಿರೋಧ ಪಾರ್ಟಿ ಆಗ್ಬಿಟ್ಟ ಮಾತ್ರಕ್ಕೆ ಇಷ್ಟೊಂದು ಕ್ರೋಧ ವ್ಯಕ್ತಪಡಿಸೋದು ಅರ್ಥವಿಲ್ಲದ್ದು ಲಕ್ಷ್ಮಿ. ವೈರಿ, ವಿರೋಧಿಗಳನ್ನು ಮೆಚ್ಚುವುದೇ ಮಾನವೀಯತೆಯ ಗುಣ" ಎಂದು ತರ್ಕಬದ್ಧವಾಗಿ ನುಡಿದರು ತಂದೆ.

"ಡ್ಯಾಡಿ ನನಗೆ ಇದ್ರಿಂದ ತೃಪ್ತಿ ಸಿಗುತ್ತೆ ಅಷ್ಟೆ ಸಾಕು" ಎಂದು ಒತ್ತಿ ನುಡಿದು, ಮೂತಿ ತಿರುವಿ ಬಿರುಗಾಳಿಯಂತೆ ತನ್ನ ರೂಮಿಗೆ ನಡೆದಳು.

ಮಗಳು ಅತ್ತ ಹೋದ ನಂತರ ಹೆಂಡತಿಗೆ "ನೋಡ್ದೇನೆ ಸಾವಿತ್ರಿ. ಇವ್ಳು ಮಾಡೋದು ನೋಡಿದ್ರೆ, ನೀನು ಮದುವೆಯಾದ ಹೊಸದ್ರಲ್ಲಿ ಮಾಡ್ತಿದ್ದೆಯಲ್ಲ ಹಾಗೇ ಮಾಡ್ತಾಳೆ. ಎಷ್ಟೇ ಆಗ್ಲಿ ತಾಯಿಯಂತೆ ಮಗಳು ನೂಲಿನಂತೆ ಸೀರೆಯಂತ ಗಾದೆನೆ ಇದೆಯಲ್ಲ" ಮದುವೆ ಯಾದಗಿನ ಹೊಸದಿನಗಳನ್ನು ನೆನೆದು ನುಡಿದ ರಮೇಶ್.

ಇನ್ನೂ ನವದಂಪತಿಗಳ ಮನೋಭಾವನೆಯಲ್ಲೆ ಇದ್ದು, ನಡೆಯುವ ಇಬ್ಬರಿಗೂ ಮಧುಚಂದ್ರವಿನ್ನೂ ಮುಗಿದಂತೆ ತೋರುತ್ತಿರಲಿಲ್ಲ.

"ಹೌದು ನಾನು ಮದುವೆಯಾದ್ಮೇಲೆ ಹೀಗೆ ಮಾಡ್ತಿದ್ದೆ. ಇವ್ಳು ಈಗಲೆ ಹೀಗೆ ಮಾಡ್ತ ಇದ್ದಾಳಲ್ಲ ಯಾಕೆಯಂತ ಯೋಚ್ನೆಮಾಡಿದ್ದೀರಾ? " ಕೇಳಿದಳು.

"ಯಾಕೆ ? " ಮರು ಪ್ರಶ್ನೆ ಹಾಕಿದ.

" ಇದು ತನಗೆ ಮದುವೆಯಾಗುವ ವಯಸ್ಸು ಬಂದಿದೆ ನೋಡಿ ಅನ್ನೋದ್ರ ಸೂಚನೆಯ ಕುತ್ತ ತುದಿ. ಮೊದ್ಲು ಹೀಗೆ ಮಾಡ್ತಿರಲಿಲ್ಲ . ಇವಳಿಗೇನು ಬಂತೋ.. . ಪನ್ನಿಸ್ಸೂ ಹೀಗೆ ಸಿಡಿ, ಸಿಡಿ ಅಂತಾಳೆ"

"ಹೌದಾ. ?" ಅನುಮಾನ ವ್ಯಕ್ತಪಡಿಸಿದ.

"ಇಲ್ವ ಮತ್ತೆ ? ಇದ್ದಾನಲ್ಲ ನನ್ನ ತಮ್ಮ ರಘು. ಇವ್ನ ಪರೀಕ್ಷೆಮುಗಿಲೀ ಮದುವೆ ಮಾಡಿದ್ರೆ ಜಂಭ ಇಳಿಸ್ತಾನೆ" ಎಂದು ತಮ್ಮನ ಬಗ್ಗೆ ಎದೆ ಬಡಿದು ಜಂಭ ಕೊಚ್ಚಿಕೊಳ್ಳುವುದರೊಂದಿಗೆ ತನ್ನ ಮಗಳನ್ನು ತಮ್ಮನಿಗೆ ಕೊಡುವುದರಲ್ಲಿ ಆಸಕ್ತಿ, ಸಂತೋಷ ತೋರಿದಳು.

  

ನಾಳೆ ಎಲೆಕ್ಷನ್ ಇದ್ದುದರಿಂದ ಪಾಠನಡೆಯಲು ಅವಕಾಶ ಎಲ್ಲಿ ಕೊಡಬೇಕು? ಗಲಾಟೆ ದೊಂಬಿಗೆ ಅವಕಾಶವಿಲ್ಲವೆಂಬ ನಿಬಂಧನೆ ವಿಧಿಸಿದ್ದರೂ, ಇದನ್ನು ಯಾವ ಅಭ್ಯರ್ಥಿಯೂ ಉಳಿಸಿಕೊಳ್ಳುವತ್ತ ಗಮನ ಕೊಡಲಿಲ್ಲ. ಕಾಲೇಜಿನ ಮೈದಾನ ಆವರಣದಲೆಲ್ಲ ಗುಲ್ಲೋಗುಲ್ಲು. ಎಲ್ಲಾ ಕಡೆಯಿಂದಲೂ ಒಂದೊಂದು ಪಾರ್ಟಿಯವರ ಒಕ್ಕೊರಲಿನ ಕೂಗು ಮಾರ್ದನಿಸುತಿತ್ತು. ವಿದ್ಯಾರ್ಥಿನಿಯರನ್ನು ತಂದು ಓಟು ಕೇಳುವುದಕ್ಕಿಂತ ಅವರನ್ನು ಕಾಡಿಸುವುದರಲ್ಲಿ ಹೆಚ್ಚಿನ ಆಸಕ್ತಿ.

ರಾಜನನ್ನು ದ್ವೇಷಿಸುತಿದ್ದ ಲಕ್ಷ್ಮಿ ಸೇಡನ್ನು ತೀರಿಸಿಕೊಳ್ಳುವ ಹೆಬ್ಬಯಕೆಯಿಂದ ತನ್ನ ಸ್ನೇಹಿತೆಯರ ಗುಂಪು ತೊರೆದು ಹೊರಬಂದಳು. ಯಾರನ್ನೋ ತವಕದಿಂದ, ತೀಕ್ಷ್ಣವಾಗಿ ಅರಸುತಿದ್ದವು ಅವಳ ವಿಶಾಲ ನೇತ್ರದ್ವಯಗಳು. ಅವನು ಕಪ್ಪು ಬಣ್ಣದ, ತೆಳುದೇಹದ ಎತ್ತರದ, ಬಿಗಿ ಉಡುಪಿನ ವಿಚಿತ್ರ ರೂಪಿ ಪುರುಷೋತ್ತಮ. ಅಲ್ಲೇ ನಿಂತು ಸುತ್ತಲೂ ಒಮ್ಮೆ ನೋಡಿದಳು, ರಾಜನೇ ಪ್ರಧಾನವಾಗಿ ಕೈ ಮುಗಿಯುತ್ತಿರುವುದು ಕಾಣಿಸಿ ಅವಳ ನಿರ್ಧಾರವನ್ನು ಮತ್ತಷ್ಟು ಗಟ್ಟಿಗೊಳಿಸಿತು.

ವಿರುದ್ಧ ದಿಕ್ಕಿಗೆ ತಿರುಗಿ ದೂರಕ್ಕೆ ನೋಡಿದಳು. ಪ್ರತೀಕಾರದಿಂದ ಕಣ್ಣುಗಳು ಮಿನುಗಿದವು. ಅಲ್ಲಿಂದ "ವೈಸ್ ಪ್ರೆಸಿಡೆಂಟ್ ಪುರುಷೋತ್ತಮನಿಗೆ ನಿಮ್ಮ ಮತ" ಧ್ವನಿ ಕೇಳಿ ಬರುತ್ತಿತ್ತು. ಕಿರುನಗೆ ತುಟಿಯ ಅಂಚಿನಲ್ಲಿ ತೇಲಿತು. ಕಣ್ಣು ಗೋಟರು ಬಿದ್ದ ಅಂಧರಂತೆ ಯಾವಾಗಲೂ ಕಪ್ಪು ಕನ್ನಡಕ ಧರಿಸುವ ಪುರುಷೋತ್ತಮ ಕಣ್ಣಿಗೆ ಬಿದ್ದ ತಕ್ಷಣ ಜಿಂಕೆಯ ನಡಿಗೆಯಲ್ಲಿ ಆ ಕಡೆ ಲಗುಬಗೆಯಿಂದ ನಡೆದಳು.

ತಮ್ಮತ್ತಲೇ ಬರುತ್ತಿದ್ದ ತರುಣಿಯನ್ನು ಕಂಡ ಪುರುಷೋತ್ತಮ ಎದಿರುಗೊಂಡು "ರೀ......ರೀ ದಯವಿಟ್ಟು ನನಗೆ ಓಟು ಹಾಕ್ಬೇಕು "ವಿನಯದಿಂದ ಕೈ ಮುಗಿದು ಕೇಳಿ ಕೊಂಡ.

"ಹೌದು.ನಾನು ಓಟಾಕೋದೆ ನಿಮಗೆ ನಾನು ನಿಮ್ಮ ಪರವಾಗಿ ಕ್ಯಾನ್‌ವಾಸ್ ಮಾಡೋಣಾಂತ ಇದ್ದೀನಿ. ಪಾಂಪ್ಲೆಟ್ಸ್ ಕೊಡ್ತೀರಾ ? " ಕೇಳಿದಳು.

"ಓ . ತುಂಬಾ ಥ್ಯಾಂಕ್ಸ್. ಬಸವಾ ಇವರಿಗೆ ಸ್ವಲ್ಪ ಜಾಸ್ತಿ ಪಾಂಪ್ಲೆಟ್ಸ್ ಕೊಡಲೇ " ಎಂದು ಪಕ್ಕದಲ್ಲಿದ್ದ ಹಿಂಬಾಲಕ ಬಸವನಿಗೆ ಹೇಳಿದ ಮತ್ತೆ ಲಕ್ಷ್ಮಿಯ ಕಡೆ ತಿರುಗಿ "ಬನ್ನಿ,ಕ್ಯಾಂಟೀನ್‌ಗೆ ಹೊರಟಿದ್ದೀವಿ ನೀವೂ ಕಾಫಿ, ತಿಂಡಿಗೆ ಬನ್ನಿ" ಎಂದು ಆಹ್ವಾನಿಸಿದ.

" ನೋ ಥ್ಯಾಂಕ್ಸ್. ನೀವು ಹೋಗ್ಬನ್ನಿ "ಎನ್ನುತ್ತ, ಬಸವ ತನ್ನ ಹೆಗಲಿಗೆ ನೇತುಬಿದ್ದ ಬ್ಯಾಗ್‌ನಿಂದ ಪಾಂಪ್ಲೆಟ್ಸ್ ತೆಗೆದು ಕೊಟ್ಟ. ಅದನ್ನು ಪಡೆದ ಲಕ್ಷ್ಮಿ ತನ್ನ ವ್ಯಾನಿಟಿ ಬ್ಯಾಗೊಳಗೆ ಇಟ್ಟುಕೊಂಡು ಬರ್ತೀನ್ರಿ " ಎಂದು ಹೊರಟಳು.

"ಓ. ಕೆ. ತುಂಬಾ ಥ್ಯಾಂಕ್ಸ್ ಹೋಗ್ಬನ್ನಿ " ಎಂದ ಪುರುಷೋತ್ತಮ.

ಅವಳು ಅತ್ತ ಹೋಗುತ್ತಿದ್ದಂತೆ ಹಿಂಬಾಲಕರೆಲ್ಲ ಬೇರೆಗಾಗಿ ಹೋಗಿದ್ದರು.. ಬಸವ ಪುರುಷೋತ್ತಮನ ಪಕ್ಕೆ ತಿವಿದು "ಏನ್ ಗುರು, ಆ ನಾಗಿನ್ ನಿನ್ನೇ ಹುಡುಕಿ ಕೊಂಡು ಬಂದಿದ್ದಾಳೆ. ಏನ್ ಸಮಾಚಾರ ? ನಮಗಾರಿಗೂ ಗುಟ್ಟು ಕೊಡದೆ ಒಳಗೆ ಹಾಕ್ಕೊಂಡೇನು ? ಇರಲಿ ಮಜ ಮಾಡಮ್ಮ " ಅರ್ಥಗರ್ಭಿತವಾಗಿ ನುಡಿದು ಬೆನ್ನು ತಟ್ಟಿದ.

" ಏನೋ ಬಂದ್ಬಿಟ್ಟಿದ್ದಾಳೆ. ಹಾಗೇನಾದ್ರೂ ತಿನ್ನೋ ಅವಕಾಶ ಸಿಕ್ರೆ ಎಲ್ಲ

ಹಂಚ್ಕೊಂಡೆ ತಿನ್ನೋಣ ಸುಮ್ನಿರು" ಎಂದು ಮೆಲುದನಿಯಲ್ಲ ನುಡಿದು, ಕಣ್ಣು ಮಿಟುಕಿಸಿ ಅರೆ ಹಲ್ಲು ಪ್ರದರ್ಶಿಸಿದ.

ಅಷ್ಟರಲ್ಲಿ ಅಲ್ಲಿಗೆ ಬಂದ ರಾಜು ತನ್ನ ಎದುರಾಳಿ ಗುಂಪನ್ನು ಕಂಡು "ಹಲ್ಲೋ ಪುರುಷೋತ್ತಮ್" ಎಂದು ಹತ್ತಿರ ಬಂದ

ರಾಜು ತಾನೇ ಬಂದು ಮಾತನಾಡಿಸಿದ್ದು ಅವನಲ್ಲಿದ್ದ ಅಹಂಕಾರ ದ್ವಿಗುಣಿಸಿತ್ತು. ರಾಜು ತನಗೆ ತೃಣ ಸಮಾನ ಎಂದುಕೊಂಡು, ಎಲ್ಲ ಹುಡುಗರ ಎದುರಿಗೆ ಮಹಾಪುರುಷನೆಂದು ಹೇಳಿಸಿಕೊಳ್ಳುವ ಆಕಾಂಕ್ಷೆಯಿಂದ "ಹಲ್ಲೋ ಹೇಗೆ ಕ್ಯಾನ್ ವಾಸ್ ?" ಎನ್ನುತ್ತ ಕೈ ಕುಲುಕಿದ ಪುರುಷೋತ್ತಮ.

"ಕ್ಯಾನ್‌ವಾಸ್ ಸಾಧಾರಣ ನಡೆಯುತ್ತಿದೆ. ನಿಮಗೆ ಒಂದ್ಮಾತು ಹೇಳ್ಬೇಕಿತ್ತು" ಮೆಲುದನಿಯಲ್ಲಿ ನುಡಿದ ರಾಜು

"ಓ ಎಸ್. ಹೇಳಿ" ಎಂದು ಧಾರಾಳತನ ತೋರಿದ.

"ನಿಮಗೆ ಬೇಜಾರಿಲ್ಲಂದ್ರೆ ಸ್ವಲ್ಪ ಈ ಕಡೆ ಬನ್ನಿ" ಎಂದು ಸ್ವಲ್ಪ ದೂರ ಕರೆದೊಯ್ದ. ಎರಡೂ ತಂಡದ ಹುಡುಗರ ಮುಖದಲ್ಲೂ ಪ್ರಶ್ನಾರ್ಥಕ, ಆಶ್ಚರ್ಯದ ಭಾವನೆಗಳು ಮೇಳಯಿಸಿದ್ದವು.

ಸ್ವಲ್ಪ ದೂರದಲ್ಲಿ ನಿಂತು "ಏನೇಳಿ?" ಕೇಳಿದ ಪುರುಷೋತ್ತಮ. ರಾಜು ಈಗಲಾದರೂ ಸೋಲೊಪ್ಪಿ ವರಿ ಉಪಾಧ್ಯಕ್ಷ ಸ್ಥಾನದ ಚುನಾವಣೆಯನ್ನೇ ಕ್ಯಾನ್ಸಲ್ ಮಾಡಿಸಬಹುದೆಂಬ ಭಾವನೆ ಇನ್ನು ಅವನಲ್ಲಿರುವಂತಿತ್ತು.

ರಾಜು ಮುಂದುವರಿಸಿದ— "ಒಂದು ಸಣ್ಣ ವಿಷಯ ನೀವು ನಿಮ್ಮ ಫ್ರೆಂಡ್ ಬಸವರಾಜ ಅಂತ ಇದ್ದಾರಲ್ಲ ಅವರಿಗೆ ಏನಾದ್ರೂ ಹೇಳಿದ್ರಾ ?" ಕೇಳಿದ ತೀಕ್ಷ್ಣ ವಾಗಿ ಮುಖ ವೀಕ್ಷಿಸುತ್ತ.

ಈ ಒಂದು ನುಡಿ ಪುರುಷೋತ್ತಮನಿಗೆ ತಲೆ ಮೇಲೆ ಹೊಡೆದದ್ದಕ್ಕಿಂತ ಹೆಚ್ಚಾಯಿತು. ಕಣ್ಣು ಕಿಡಿಕಾರ ತೊಡಗಿದವು. ಉಬ್ಬಿ ಗಂಟಾಕಿ " ಯಾವ ವಿಷಯ ದಲ್ಲಿ?" ಗಡುಸಾಗಿ ಪ್ರಶ್ನಿಸಿದ.

" ನಿನ್ನೆ ರಾತ್ರಿ ನನ್ನ ಹೆಸರಿನ ಬ್ಯಾನರ್‌ನ್ನ ಎಲ್ಲಾ ಸುಟ್ಹಾಕುತಿದ್ದ ಅಷ್ಟುಲ್ಲಿ ನನ್ನ ಕೈಗೆ ಸಿಕ್ಕಾಕಿಕೊಂಡ. ಆದಕ್ಕೆ ಕೇಳ್ದೆ. ನೀವು ಗೆಲ್ಲಲೇ ಬೇಕು ಅನ್ನೋದಾದ್ರೆ ಒಂದ್ಮಾತು ಹೇಳಿ ಸಾಕು. ನಾನು ಈಗಲೇ ಸೋತೆಯಂತೆ ಪ್ರಿನ್ಸಿಪಾಲ್ ಹತ್ತಿರ ಹೇಳ್ಬಿಡ್ತೀನಿ. ಆದ್ರೆ ಹಾಗೆ ಮಾಡೋದು ಸರಿಯಲ್ಲ, ನೀವೇ ಗೆಲ್ತೀರಿ ಅನ್ನೋದು ನನಗೂ ಗೊತ್ತು. ಒಬ್ಬರನ್ನ ಸೋಲಿಸಿ ಗೆದ್ರೆ, ವಿದ್ಯಾರ್ಥಿಗಳ ಮನ್ನಣೆಪಡೆದು ಗೆದ್ರೆನೇ ನಿಮ್ಮ ಗೆಲುವಿಗೆ ಹೆಚ್ಚು ಬೆಲೆ. ನೀವು ಬೇಡ ಅಂದ್ಬಿಡಿ ಈಗ್ಲೆ ವಾಪ್ಸು ತಗೊಳ್ತೀನಿ " ಎಂದ.

ಹೀಗೆಂದು ನೊಗಳಿದ ಮೇಲೆ ಉಗ್ರ ನರಸಿಂಹನ ಕೋಪ ಇಳಿದಂತೆ ಪುರು ಷೋತ್ತಮನ ಕೋಪವೆಲ್ಲ ಜರ್‍ರನೆ ಇಳಿಯಿತು.

"ಛೆ ಹಾಗೆಲ್ಲ ಮಾಡೋದು ಬೇಡ. ಇದೆಲ್ಲ ನನಗೆ ಗೊತ್ತೆ ಇಲ್ವಲ್ಲ" ಎಂದು ಆಕಡೆ ತಿರುಗಿ "ಲೋ ಬಸವ. ಬಾರ್ಲೋ ಇಲ್ಲಿ " ಕೂಗಿ ಕರೆದ.

ಅಂಜುತ್ತ ಅಪಮಾನದ ಭಾರದ ಮುಖ ಹೊತ್ತು ಬಂದ ಬಸವ ರಾಜನ ಮುಖವನ್ನು ನೇರವಾಗಿ ನೋಡದವನಾಗಿದ್ದ. " ಏನೋ ರಾತ್ರಿ ಅಂತಾ ಕೆಲ್ಸನಾ ಮಾಡೋದು ? ಅವೆಲ್ಲ ಮಾಡಿದ್ರೆ, ಸರಿಯಲ್ಲ ನೋಡು " ಎಂದು ಏನೂ ಅರಿ ಯದವನಂತೆ ಎಚ್ಚರಿಸಿ, ರಾಜನ ಕಡೆ ತಿರುಗಿ " ಸರಿ ನಾನು ಹೇಳ್ತೀನೆ ಹೋಗಿ ರಾಜು" ಎಂದ ಬಸವನನ್ನು ಧೂಷಿಸಿ ತಾನು ದುರ್ವ್ಯವಹಾರದಿಂದ ನುಣುಚಿಕೊಂಡ.

O O O

ಇತ್ತ ಕೈಯಲ್ಲಿ ಪಾಂಪ್ಲೆಟ್ಸ್ ಹಿಡಿದು ಸ್ನೇಹಿತೆಯರ ಒಳಗದಲ್ಲಿ ಪ್ರವೇ ಶಿಸಿದ ಲಕ್ಷ್ಮಿ ಎಲ್ಲರ ಗಮನ ಸೆಳೆಯುವಂತೆ ಗಟ್ಟಿಯಾಗಿ "ನೋಡ್ರಮ್ಮ ನಿಮಗೆ

ಒಂದ್ಮಾತು ಹೇಳ್ತೀನಿ ನಡೆಸ್ತೀರಾ?" ಕೇಳಿದಳು.

" ಏನು? " ಎಲ್ಲರೂ ಒಟ್ಟಿಗೆ ಪ್ರಶ್ನಿಸಿದರು.

" ನೀವಾರೂ ವೈಸ್‌ಪ್ರೆಸಿಡೆಂಟ್ ರಾಜುಗೆ ಓಟು ಹಾಕ್ಬೇಡಿ, ಎಲ್ರೂ ಪುರುಷೋತ್ತಮನಿಗೆ ಓಟು ಹಾಕ್ಬೇಕು. ದಯವಿಟ್ಟು ಮರೆಯಬೇಡಿ '' ಎಂದು ಕೇಳಿಕೊಂಡಳು.

ಎಲ್ಲ ಹುಡುಗಿಯರ ತಲೆ ಒಮ್ಮೆಲೆ ತಿರುಗಿತು. ' ಇದೇನು ? ನಾವು ರಾಜುಗೆ ಓಟು ಮಾಡುವುದು. ಇವಳೇನೋ ಹೇಳ್ತಾ ಇದ್ದಾಳಲ್ಲ?' ಎಂದು ಚಿಂತಿಸಿದರು.

ಒಬ್ಬಳು ತಡೆಯಲಾರದೆ " ಏಕೆ ? ಪುರುಷೋತ್ತಮ ನಿನ್ನ ಲವ್ವರಾ ?" ನಗೆಯುಕ್ಕಿ ಕೇಳಿದಳು.

ಎಲ್ಲರೂ ನಗುವಿನಲ್ಲಿ ಮುಳುಗಿರುವಾಗ ಅಪ್ರತಿಭಳಾದ ಲಕ್ಷ್ಮಿಯ ಮುಖಕ್ಕೆ ರಂಗು ರಾಚಿತು. ನುಡಿದವಳ ಕಡೆಗೆ ಬೆರಗಿನಿಂದ ನೋಡುತ್ತಿರುವಂತೆಯೆ ಇನ್ನೊಬ್ಬಳು " ಅವ್ರಪ್ಪ ಶಾಸಕ ಆಗಿರೋನು ಮುಂದೆ ಮಂತ್ರಿಯಾಗಬಹುದಂತನಾ ? " ತಮಾಷೆಯಾಗಿ ಛೇಡಿಸಿದಳು.

ಮತ್ತಷ್ಟು ಅಪ್ರತಿಭಳಾದ ಲಕ್ಷ್ಮಿ ಇನ್ನೂ ಚೇತರಿಸಿಕೊಂಡಿರಲಿಲ್ಲ "ಅಯ್ಯೋ ಬೇಜಾರು ಮಾಡ್ಕೋಬೇಡ ಲಕ್ಷ್ಮಿ ನಾವು ನಿನ್ನಷ್ಟು ಪರೋಪಕಾರಿಗಳಲ್ಲ ನಾವು ನಮ್ಮ ಕ್ಲಾಸಿನ ರಾಜುಗೆ ಓಟು ಹಾಕೋದು " ಎಂದಾಗ ಲಕ್ಷ್ಮಿಯ ಮುಖ ಕುಗ್ಗಿ, ಅಪಮಾನ ಸಹಿಸಲಾರದೆ ತಲೆ ತಗ್ಗಿಸಿದಳು. ರಾಜುಗೆ ವಿರೋಧ ಮತ ಹಾಕಿಸುವ ಆಸೆ ಕಡಿದು ಬಿತ್ತು.

  

ಮತಗಳ ಎಣಿಕೆ ಆರಂಭವಾಗಿತ್ತು. ಪುರುಷೋತ್ತಮನ ಕಡೆಯವರು ಗೆಲುವು ತಮ್ಮದೆ ಎಂದು ಬೀಗುತ್ತ ಆಗಲೇ ಪಾರ್ಟಿಗೆ ಏರ್ಪಾಟು ಮಾಡಿದ್ದರು. ಮೊದಲಿನಿಂದಲೂ ಮುನ್ನಡೆ ಸಾಧಿಸಿ, ಹೆಮ್ಮೆಯಿಂದ ಎದೆ ಸೆಟೆಸಿ ಓಡಾಡುತ್ತಿದ್ದ. ಸೋಲು

ಗೆಲುವು ಎರಡನ್ನೂ ಸಮನಾಗಿ ಸ್ವೀಕರಿಸಲು ಸಿದ್ಧನಿರುವ ರಾಜು ಚಿತ್ತ ಕದಲದೆ ರಾಳ್ಕಿಯ ತನ್ನ ಮುಖದ ಮೇಲೆ ನೋವಿನ ಛಾಯೆಯೂ ಮೂಡಿಸದೆ ತನ್ನವರೊಂದಿಗೆ ಕುಳಿತಿದ್ದ. ನಿಜವಾದ ವೇದನೆ ಅನುಭವಿಸುತ್ತಿದದ್ದು ಸೋಮು ಮತ್ತು ರವಿ ಸ್ವಲ್ಪ ಅಂತರದಲ್ಲಿ ಹಿಂಬಾಲಿಸುತ್ತಿದ್ದ ರಾಜು ಇಷ್ಟು ಓಟು ಪಡೆದಿರುವುದು ಪುರುಷೋತ್ತಮನಿಗೆ ಆಶ್ಚರ್ಯವೆನಿಸಿತಾದರೂ, ಗೆಲುವು ಕೊಂಡಿರುವೆನೆಂಬ ಅಹಂಕಾರ ಮಾತ್ರ ಅವನನ್ನು ಬಿಟ್ಟಿರಲಿಲ್ಲ.

ಕೊನೆ ಗಳಿಗೆಯಲ್ಲಿ ಜಯಲಕ್ಷ್ಮಿ ರಾಜುಗೆ ಒಲವು ತೋರ ತೊಡಗಿದಳು. ಪುರುಷೋತ್ತಮನ ಓಟು ಗಳಿಕೆಯನ್ನು ಸಮ ಮಾಡಿದವನು ತಡೆಯಿಲ್ಲದೆ ಹಿಂದೆಹಾಕಿ ಕೇವಲ ಹತ್ತು ಮತಗಳಿಂದ ಜಯಗಳಿಸಿದ.

ಮತ ಎಣಿಕೆಗೆ ಆಸಕ್ತಿಯಿಂದ ಬಂದಿದ್ದ ಲಕ್ಷ್ಮಿ ಪುರುಷೋತ್ತಮನ ಪರಾಜಿತದಿಂದ ಸೋಟು ನೆಲದಲ್ಲಿ ಉದುಗಿಸಿದಳು. ಜೊತೆಯಲ್ಲಿ ರಾಜನನ್ನು ಸ್ನೇಹಿತರು ಹೆಗಲ ಮೇಲೆ ಹೊತ್ತು ಕುಣಿದಾಡಿದರು.

ಕನಸಿನಲ್ಲೂ ಸೋಲನ್ನು ಕಾಣದ ಪುರುಷೋತ್ತಮ ರೋಷದಿಂದ ಬಲಗೈ ಬೆರಳಿನ ಉಗುರುಗಳನ್ನು ಕೈ ಮಡಿಚಿ ಗಂಗಸದ ಹಲ್ಲಿನಿಂದ ಕತ್ತರಿಸತೊಡಗಿದ. ಕೆರಳಿದ ಕಾಳಿಂಗನಾಗಿದ್ದ ಪುರುಷೋತ್ತಮನಿಗೆ ಸಮಾಧಾನ ಮಾಡಲು ಯಾರಿಗೂ ಧೈರ್ಯವಿರಲಿಲ್ಲ.

ಕೊನೆಗೆ ಬಸವನೇ ಧೈರ್ಯ ತಂದುಕೊಂಡು, ಹಿಂದಿನಿಂದ ಭುಜದ ಮೇಲೆ ಕೈಹಾಕಿ "ಅಲ್ಲ ಗುರು ಇದ್ರಲ್ಲಿ ಏನೋಮೋಸ ನಡೆದಿದೆಯಂತ ನನಗೆ ಅನ್ಮಾನ ಬರ್‍ತಾ ಇದೆ" ಎಂದ.

ಸೋಲನುಂಡ ಪುರುಷೋತ್ತಮ ಆರೆಗೆಂಪು ಕಂಗಳಿಂದದಿಟ್ಟಿಸಿ "ಏನದು?" ಹೊಡೆದ ಕಂಠದಿಂದ ಕೇಳಿದ.

"ರೀ ಕೌಂಟ್ ಯಾಕೆ ಮಾಡಿಸ್ಬಾರ್ದು? ಯಾರೋ ಲಕ್ಚರ್ ಆಗದವರು

ಇದರಲ್ಲಿ ಕೈಹಾಕಿದ್ದಾರೆ ಅನ್ನೋ ಶಂಕೆ" ಎಂದ.

"ಹೌದು. ರೀಕೌಂಟ್ ಮಾಡ್ಲಿ" ಎಂದು ಸುಮ್ಮನಾದ.

ಕಣ್ಮುಚ್ಚಿ ತೆರೆಯುವಷ್ಟರಲ್ಲಿ ದೊಡ್ಡ ಗುಂಪು ಸಿದ್ಧವಾಯಿತು. ಮುಂದೆ ಬಸವ ಕೂಗುವವನು. ಹಿಂದೆ ಹಿಂಬಾಲಕರು. ಬಾಗಿಲ ಬಳಿ ಎರಡೂ ಕೈ ಕೋಳವೆಂಬೂಗಿ ಹಿಡಿದು "ಅಯ್ಯಯ್ಯೋ..." ಎಂದ.

ಉಳಿದವರ "ಅನ್ಯಾಯ, ಅನ್ಯಾಯ." ಒಕ್ಕೊರಲಿನ ಕೂಗು.

"ವಿ ವಾಂಟ್." ಕೂಗಿದ ಬಸವ.

"ಜಸ್ಟೀಸ್" ಉಳಿದವರ ದನಿ. ಹೀಗೆ ಕೂಗುತ್ತಲೇ ಪ್ರಿನ್ಸಿಪಾಲ್ ಛೇಂಬರ್‌ಗೆ ಲಗ್ಗೆ ಹಾಕಿದರು. ನಸುಗೆಂಪು ಬಣ್ಣದ ಸೂಟುಧಾರಿ ಪ್ರಿನ್ಸಿಪಾಲ್. ಹೊರ ಬಂದು "ಏನಿದು ಗಲಾಟೆ?" ಎಂದು ಪ್ರಶ್ನಿಸಿದರು.

ತಮ್ಮ ಕಷ್ಟ ತೋಡಿದ ಹುಡುಗರು "ರೀ ಕೌಂಟ್ ಸಾರ್" ಕೇಳಿದರು. ಗಲಾಟೆ ಮಾಡದಿರುವುದಾದರೆ ಅವಕಾಶಕೊಡುವುದಾಗಿ ಎಚ್ಚರಿಸಿದರು ಪ್ರಿನ್ಸಿಪಾಲ್.

ಮರಳಿ ಸೋತ ಪಾರ್ಟಿಯಲ್ಲಿ ನವಚೇತನ ಮೂಡಿತು. ಎಣಿಕೆ ಆರಂಭವಾಯಿತು ಎರಡೆರಡು ಮತಗಳು ತಿರಸ್ಕೃತವಾಗಿ ಮತ್ತೆ ಅಷ್ಟೆ ಅಂತರದಿಂದ ಆರಿಸಿ ಬಂದ ರಾಜುವನ್ನು ಎರಡನೆಯ ಭಾರಿಗೆ ಜಯಗಳಿಸಿದಂತೆ ಎತ್ತಿಕೊಂಡು ಮೆರೆಯಿಸಿದರು. ಸೋಮು ಸೇಡು ತೀರಿಸಿಕೊಂಡಿದ್ದ. ಈ ಬಾರಿಗೆ ಲಕ್ಷ್ಮಿ ಅಲ್ಲಿ ಯಾರ ಕಣ್ಣಿಗೂ ಬೀಳಲಿಲ್ಲ.

  

ರಾತ್ರಿ ಒಂಬತ್ತಾದರೂ ವಿಜಯೋತ್ಸವ ಇನ್ನೂ ಮುಗಿದಂತಿರಲಿಲ್ಲ. ತಾಯಿ ಮಂಜಮ್ಮಳಿಗೆ ಮಗ ಯಾರೂ ಸಾಧಿಸಲಾರದ್ದನ್ನು ಸಾಧಿಸಿದ್ದಾನೆಂಬ ಸಂತೋಷ, ಬಿಗುಮಾನ, ಹೆಮ್ಮೆ. ಮಗ ಜಯಗಳಿಸಿರುವಾಗ ತೀರ ಅಕ್ಕಪಕ್ಕದವರಿಗೆ ಸಿಹಿ ಹಂಚದೆ ಹೋದರೆ ಅದೇನು ಜನ್ಮನಾ? ಎಂದವರ ಅನಿಸಿಕೆ. ಸಾಕಷ್ಟು ಸ್ವೀಟನ್ನು

ಸ್ವೀಟ್ ಸ್ಟಾಲ್‌ನಿಂದಲೇ ತರಿಸಿದಳು. ಆ ಮನೆಯ ಬಲಪಾರ್ಶ್ವಕ್ಕೆ ಲಕ್ಷ್ಮಿಯ ಮನೆ. ಅಲ್ಲಿ ಅದೇ ಹತ್ತಿರದ ಮನೆಯಾದ್ದರಿಂದ ಆ ಮನೆಗೆ ಹೋದಲು ಹೊರಟರು.

ಹೊರಟಿದ್ದ ಪತ್ನಿಯನ್ನು ಕಂಡ ವೆಂಕಟಯ್ಯ "ಲೇ ಇದೇನೆ ಇದು ನಿನ್ನ ಹುಚ್ಚು "ಅವ್ನ ಮುಸ್ಡ, ಅವ್ನ ಕುಣಾನಿಗೆ ನೀನೂ ಕುಣಿತಿಯಲ್ಲೇ ಅದೇನು ಕೊಡು ಅವ್ನೆ ಕೊಟ್ಟಿದ್ದಾನೆ" ಎಂದು ಅಸಹನೆಯಿಂದ ರೇಗಿದರು.

"ನೀವು ಬಾಯ್ಮುಚ್ಕೊಂಡ್ ಸುಮ್ನಿದ್ರೆ ಚನ್ನಾಗಿರುತ್ತೆ ನೋಡ್ರಿ ಮಗ ಗೆದ್ದು ಕಾಲೇಜು ಹುಡುಗ್ರೆಲ್ಲ ಎತ್ಕೊಂಡು ಮೆರೀಬೇಕಾದ್ರೆ ನಾನು ಹೆಂಗ್ರೀ ಸುಮ್ನಿರೋದು?'' ಗಂಡನ ಬಾಯಿ ಮುಚ್ಚಿಸುವ ತಂತ್ರ ಬಲ್ಲ ಗಡುಸು ಹೆಣ್ಣು ಗುಡುಗಿದಳು.

"ತಲ್ಲಿ ಕುಣಿ ಕುಣೀ .." ಎಂದು ಅಣಕ ನುಡಿದು ತಣ್ಣಗಾದರು ವೆಂಕಟಯ್ಯ ಮಗನ ಕಡೆ ತಿರುಗಿ "ಲೋ ನೀನು ಇದ್ದೀಯಾ " ಎಂದು ಕೈ ಎತ್ತಿ ಹೊಡೆಯಲಾರದೆ ಕೈ ಇಳಿಸಿ ಸುಮ್ಮನಾದರು. ರಾಜು ಏನೂ ಅರಿಯದ ಕೂಸಿನಂತೆ ಬಿಡುಗಣ್ಣು ಬಿಟ್ಟ.

"ಬಾರೋ ಪಾಪು " ಎಂದು ಸಿಹಿ ತುಂಬಿದ ವೈರ್ ಬ್ಯಾಗ್ ತೆಗೆದುಕೊಂಡು ಸಂಭ್ರಮದಿಂದ ಮುಂದೆ ನಡೆದಳು

ವೆಂಕಟಯ್ಯ " ಹುಷಾರಾಗಿ ಹೋಗ್ಬನ್ನಿ " ಎಂದು ಬಾಗಿಲಿಗೆ ಬಂದು ನುಡಿದರು

"ಅಮ್ಮ ಅಮ್ಮಾ ಮೊದ್ಲು ಈ ಮನೆಗೆ ಹೋಗೋಣೇನಮ್ಮ ? " ಪಿಸುದನಿಯಲ್ಲಿ ಆಸೆಯಿಂದ ಕೇಳಿದ

"ಬೇಗ್ನ ಬಾ .." ಎಂದು ತಾಯಿ ಮಗ ಜೊತೆಯಲ್ಲಿ ನಡೆದರು.

  

ಲಕ್ಷ್ಮಿಯು ಯೋಚನಾ ಪೀಡಿತಳಾಗಿ ಹಾಲ್‌ನಲ್ಲಿ ಗದ್ದಕ್ಕೆ ಕೈ ಊರಿ

ಕುಳಿತಿರುವುದನ್ನು ಗಮನಿಸಿದ ಸಾವಿತ್ರಿ "ಲಕ್ಷ್ಮಿ ಏನಾಯ್ತು ? ಊಟಾನೂ ಸರಿಯಾಗಿ ಮಾಡ್ಲಿಲ್ಲ ತಗೋ ಈ ಹಣ್ಣು ತಿಂದು ಹಾಲು ಕುಡಿದು ಮಲಗು " ಎಂದು ಮಗಳ ಹಣೆ ಮುಟ್ಟಿ ನೋಡಿ ಜ್ವರ ಬಂದಿದೆಯೋನೊ ಎಂದು ಪರೀಕ್ಷಿಸಿದಳು.

"ನನಗೇನೂ ಆಗಿಲ್ಲ ಬಿಡಮ್ಮ " ಎಂದು, ತಾಯಿಯ ಕೈ ನೂಕುತ್ತಿದ್ದಂತೆ ಕಾಲಿಂಗ್ ಬೆಲ್ ಬಾರಿಸಿತು. ಇಬ್ಬರೂ ಪ್ರಶ್ನಾರ್ಥಕ ನೋಟದಿಂದ ಬಾಗಿಲ ಕಡೆ ನೋಡಿದರು. ಸಾವಿತ್ರಿಯೆ ಮುನ್ನಡೆದು ಬಾಗಿಲು ತೆರೆದಳು.

"ನಮಸ್ಕಾರ " ಎಂದಳು ಮಂಜಮ್ಮ.

"ಓ.. ಬನ್ನಿ. ಏನು ಇಷ್ಟೊತ್ನಲ್ಲಿ ಬಂದ್ರಲ್ಲ ? " ವಿಚಾರಿಸತೊಡಗಿದಳು.

ತಾಯಿಯ ಹಿಂದಿನಿಂದಲೇ ಪ್ರವೇಶಿಸಿದ ರಾಜು ಯಾರನ್ನೋ ಹುಡುಕಿದ. ಇದ್ದಕ್ಕಿದಂತೆ ಗೆಲುವಿನ ವಿಜಯದ ನಗೆ ಬೀರಿದ. ಲಕ್ಷ್ಮಿಗೆ ಮುಳ್ಳಿನ ಗದೆಯಿಂದ ಮುಖಕ್ಕೆ ಬಾರಿಸಿದಂತಾಯಿತು ಮನೆಗ್ಗೆ ಬಂದವರಿಗೆ ಆಸನ ತೋರದೆ ತನ್ನಿಚ್ಛೆಯಂತೆ ಅಲ್ಲೆ ಕುಳಿತು ಅಲಕ್ಷಿಸಿ, ನೋಟದಿಂದಲೇ ಇರಿಯಲು ಪ್ರಯತ್ನಿಸಿದಳು.

"ನಮ್ಮುಡ್ಗ ಎಲೆಕ್ಷನ್ನಗೆ ಗೆದ್ದಿದ್ದಾನೆ. ಸ್ವೀಟ್ ಕೊಟ್ಬೋಗಣ ಅಂತ ಬಂದೆ. ತಗೊಳ್ಳಿ ಸ್ವೀಟ್" ಎಂದು ಮಂಜಮ್ಮ ಬ್ಯಾಗ್‌ನಿಂದ ಪಾಕೆಟ್ ತೆಗೆದು ನೀಡಿದಳು.

"ಓ ಹೌದಾ ? " ಎಂದು ಪಡೆಯುತ್ತ "ಕೂತ್ಕೊಳ್ಳಿ ಕುಂಕುಮ ತಂದೆ" ಎಂದು ಒಳ ನಡೆದಳು. ಅವಕಾಶಕ್ಕೆ ಕಾಯುತ್ತಿದ್ದ ರಾಜು, ಅಲ್ಲೇ ಸೇಬು ಕತ್ತರಿಸುತ್ತಿದ್ದ ಲಕ್ಷ್ಮಿಯ ಕಡೆ ನೋಡಿ ಹಿಡಿಯಲಾರದ ಸಂತೋಷದಿಂದ " ನೀವು ಓಟು ಹಾಕ್ದ ಇದ್ದಿದ್ರೆ ನಾನು ಫೆಲೆಕ್ಷನ್ನಲ್ಲಿ ಸೋಲ್ತಿದ್ದೆ. ನಿಮ್ಮಿಂದ್ಲೇ ನಾನು ಗೆದ್ದಿದ್ದು. ತುಂಬಾ ಥ್ಯಾಂಕ್ಸ್ " ಎಂದು ಅವಳನ್ನು ಉಬ್ಬಿಸಿ ಅವಳ ಮನದಲ್ಲಿ ಮಾಡುವ ಬಯಕೆಯಿಂದ ನುಡಿದ.

ತಿರಸ್ಕಾರದ ನೋಟ ಎಸೆದ ಲಕ್ಷ್ಮಿಯು ಗಂಟಲಿನಲ್ಲಿ ನುಣ್ಣಗೆ ಆಗಿದ ಹಣ್ಣು ಸಹ ಗಂಟಲಲ್ಲಿ ಇಳಿಯದಂತಾಯಿತು. ಸಾಕಷ್ಟು ವಿರೋಧ ವ್ಯಕ್ತಪಡಿಸಿ ಅವನಿಗೆದುರಾಗಿ

ಮುಳ ಹಾಕಿದರೂ ತನ್ನನ್ನು ಕೊಗಳಿ ಎತ್ತರಿಸಿ ಎತ್ತಿಹಾಕುವವನಲ್ಲ ' ಎಂದು ಹಲ್ಲು ಮಸೆದಳು. 'ಇದಕ್ಕಿಂತ ಹೆಚ್ಚು ಮುಖಭಂಗ ಬೇರೆಲ್ಲೂ ಆಗಲಿಕ್ಕಿಲ್ಲ' ಎಂದು ನಿರ್ಧರಿಸಿತ ವಳ ಮನ.

ಅಷ್ಟರಲ್ಲಿ ಮಂಜಮ್ಮನೇ " ನೀನು ನಮ್ಮ ಹುಡುಗನ ಜೊತೆ ಏನಮ್ಮ ?" ಕೇಳಿದರು ಮಂಜಮ್ಮನ ನುಡಿಯನ್ನು ಅಪಾರ್ಥವಾಗಿ ಕಲ್ಪಿಸಿಕೊಂಡು ಕ್ರೋಧದಿಂದಲೇ ಕಣ್ಣು ಹಿಗ್ಗಿಸಿ ಮಂಜಮ್ಮಳನ್ನು ದಿಟ್ಟಿಸಿದಳು. ' ಇಷ್ಟು ದಿನ ಇವನಿಂದ ಸಹಿಸಿಯಾಗಿದೆ ಈಗ ಇವರೊಬ್ಬರು ಸೇರಿದರೋ ? , ಎಂದು ಗೊಣಗಿಕೊಂಡು ಥಟ್ಟನೆ ಎದ್ದು ನಿಂತಳು.

ರಾಜು ಮೋಹಕ ನಗೆಯಿಂದಲೇ "ನಮ್ಮಮ್ಮನ ಮಾತಿನ ಅರ್ಥ ನಾನು, ನೀನು ಇಬ್ಬರೂ ಒಂದೇ ಕ್ಲಾಸ ಅಂತ ಕೇಳಿದ್ರು ಅಷ್ಟೆ" ಎಂದ.

ಒಂದೇ, ಎರಡೆ ಸೋಲು ? ಎಲ್ಲೆಲ್ಲೂ ಸೋಲು ಇವನಿಂದ ಕೋಪಾಗ್ನಿಯ ಕಾರುತ್ತ ದಳ್ಳುರಿಯ ನಂದಿಸಲು ತನ್ನ ರೂಮಿಗೆ ಹೋಗಿ ಧಡಾರನೆ ಬಾಗಿಲಿಕ್ಕಿಕೊಂಡಳು. ತಂದೆ ತಾಯಿಗೆ ಹೇಳುವಂತಹ ವಿಷಯ ಅದು ಆಗಿರಲಿಲ್ಲವಾದ್ದರಿಂದ, ಕೇಳಿದರೆ ತನ್ನನ್ನೆ ಮೂರ್ಖಳು ಎಂದಾರೆಂಬ ಅನಿಸಿಕೆಯಿಂದ ತಾನೆ ಸಮಾಧಾನ ಮಾಡಿಕೊಂಡಳು.

ಇದಾವುದನ್ನು ಗಮನಿಸದ ಸಾವಿತ್ರಿ ಕುಂಕುಮ ತಂದು ನೀಡಿ, " ಕಾಫಿ ಮಾಡ್ತೀನಿ ಇರ್ರಿ " ಎಂದಳು.

"ಈಗ ಬೇಡ ಇನ್ನೊಮ್ಮೆ ಬರ್ತೀವಿ "ಎಂದು ಮಗನೊಂದಿಗೆ ಹೊರಟಳು.

ರಾಜನ ಉದ್ದೇಶ ಪೂರೈಸಿತ್ತು. ಲಕ್ಷ್ಮಿಯ ದೃಷ್ಟಿಯಲ್ಲಿ ಮಿಂಚಬೇಕು, ಅವಳ ಹೃದಯದಲ್ಲಿ ಮನೆ ಮಾಡಬೇಕೆಂಬ ಅವನ ಪ್ರಯತ್ನ ಹೇಗಾದರೂ ಸಫಲನಾಗಲು ಅವಕಾಶ, ಸಮಯಗಳು ಬೇಕಾಗಿತ್ತು. ಇನ್ನು ಯಾರ ಮನೆಗೆ ಹೋದರೇನು ? ಬಿಟ್ಟರೇನು ? ಎಂದು ಚಿಂತಿಸಿ " ಅಮ್ಮಾ ಮ್ಮ ಕೈಯಲ್ಲ ನೋವು " ಎಂದು ರಾಗ ಎಳೆಯು ಬಿಡದೆ ತಾಯಿಯನ್ನು ಮನೆಗೆ ಎಳೆದುಕೊಂಡು ಹೊರಟ.

  

೫

ತರಗತಿ ಆರಂಭವಾಗಿ ಅರ್ಧ ತಾಸು ಕಳೆದಿತ್ತು. ಲಗುಬಗೆಯಿಂದ ನಡೆಯುತ್ತಿದ್ದ ಲಕ್ಷ್ಮಿಯನ್ನು ಹಿಂಬಾಲಿಸಿದ ರಾಜು ನೀತಿ, ನಿಯಮಗಳನ್ನೆಲ್ಲ ಗಾಳಿಗೆ ತೂರಿದ್ದ. ಅಧ್ಯಾಪಕ ಮುದ್ದಪ್ಪ ಪಾಠ ಮಾಡುತ್ತಿದ್ದರು. ಪಾಠ ಒಂದು ಘಟ್ಟವನ್ನು ಮುಟ್ಟಿದ್ದಾಗಲೇ ಅಧ್ಯಾಪಕರನ್ನು ಕೇಳಿ ಒಳ ನಡೆದು ಮುಂದಿನ ಬೆಂಚಿನಲ್ಲಿ ಸ್ಥಳವಿಲ್ಲದೆ ಖಾಲಿಯಿದ್ದ ಮೂರನೆ ಬೆಂಚಲ್ಲಿ ಕುಳಿತಳು.

ಸಾಕಷ್ಟು ಪರಿಚಯವಿದ್ದುದರಿಂದ "ಏನಮ್ಮ ಇಷ್ಟು ತಡವಾಗಿಯೆ ಬರೋದು?" ಕೇಳಿದರು.

" ಹೌದು ಸಾರ್, ಸ್ವಲ್ಪ ಲೇಟಾಯ್ತು " ಎಂದು ತಲೆ ತಗ್ಗಿಸಿ ತಪ್ಪು ಒಪ್ಪಿಕೊಂಡು ಪುಸ್ತಕ ತೆಗೆದಿಟ್ಟುಕೊಂಡಳು.

ಇದೇ ಸಮಯಕ್ಕೆ ಎದೆ ಸೆಟೆಸಿ ನೇರವಾಗಿ ನಡೆದು ಬಂದ ರಾಜು, ಬಯಕೆ ಹೊತ್ತು ಕನಸು ಕಾಣುವ ಹೆಣ್ಣುಗಳ ಕಣ್ಣಿಗೆ ಹಬ್ಬವಾಗಿದ್ದ.ಲಕ್ಷ್ಮಿಯು ಕುಳಿತ ಹಿಂದಿನ ಬೆಂಚಿನಲ್ಲಿಯೆ ಜಾಗ ಮಾಡಿಕೊಂಡು ಕುಳಿತ.

ಅವನನ್ನು ನೋಡಿದ ಅಧ್ಯಾಪಕರು "ಏನಯ್ಯ ಬೃಹಸ್ಪತಿ, ಕಾಲೇಜಿಗೆ ಇಷ್ಟ ಬಂದಾಗ ಬರ್ಬೋದು ಅಂತ ತಿಳ್ದೇನು? ವೈಸ್ ಪ್ರೆಸಿಡೆಂಟ್ ಆಗಿದ್ದಕ್ಕೆ ಮಹರಾಜ ಬಂದಾಗೆ ಬರ್‍ತಿಯಲ್ಲ. ಏನು ವಿಷಯ ?" ಅವನು ನಡೆದು ಬಂದ ರೀತಿಯನ್ನು ನೆನೆದು ನುಡಿದರು.

" ಬೇಗ ಬರ್‍ತ ಇದ್ದೆ ಸಾರ್, ಆದ್ರೆ..." ಎದ್ದು ನಿಂತು ನುಡಿದು ಅರ್ಧಕ್ಕೆ ನಿಲ್ಲಿಸಿದ

" ಹುಂ ಏನಾಯ್ತು? " ಕೇಳಿದರು.

ತರಗತಿಯ ಹುಡುಗರೆಲ್ಲರ ನೋಟ ಅವನ ಕಡೆಗೆ ಕೇಂದ್ರಿಕೃತವಾಯಿತು.

"ಇವ್ರು ಲೇಟಾಗಿ ಬಂದ್ರಲ್ಲ ಅದಕ್ಕೆ " ಎಂದು ಲಕ್ಷ್ಮಿಯ ಕಡೆ ಕೈತೋರಿದ ಎಲ್ಲರಿಗೂ ಆಶ್ಚರ್ಯ ಉಂಟಾಯಿತು.

ಅಧ್ಯಾಪಕರಿಗೆ ಕೋಪ ನೆತ್ತಿಗೇರಿತು ಉಬ್ಬು ಗಂಟಿಕ್ಕಿ "ಯಾಕೆ ? " ಪ್ರಶ್ನಿಸಿದರು.

" ನಮ್ಮ ಮನೆ ಇವರ ಮನೆ ಒಂದೇ ಹತ್ರ ಸಾರ್ ಇರೋದು. ನಾನೇನೊ ಬೇಗ ಬರ್ಬೇಕಂತಲೇ ಇದ್ದೆ ಆದ್ರೆ ಇವರೆ ಹೊರಡ್ಲಿಲ್ಲ. ನಾನು ಇವರ ಹಿಂದೆನೇ ಬರ್ಬೇಕು" ಎನ್ನುತ್ತಿದ್ದಂತೆ ಹುಡುಗರೆಲ್ಲ ಕೇಕೆ ಹಾಕಿ ನಕ್ಕರು. ಲಕ್ಷ್ಮಿ ತಲೆ ತಗ್ಗಿಸಬೇಕಾಯಿತು.

" ಷಬಾಷ್ " ಗುಡುಗಿದರು ಅಧ್ಯಾಪಕರು.

ಕ್ಷಣ ಹೊತ್ತು ತರಗತಿಯೆಲ್ಲ ಸ್ತಬ್ದವಾಯಿತು. "ಹೀಗೆಲ್ಲ ಬಾಯಿಗೆ ಬಂದಂತೆ ಮಾತನಾಡಿದ್ರೆ ಪ್ರಿನ್ಸಿಪಾಲ್‌ಗೆ ರಿಪೋರ್ಟ್ ಮಾಡ್ಬೇಕಾಗುತ್ತೆ ಬಿ ಕೇರ್ ಫುಲ್ ." ಎಂದೆಚ್ಚರಿಸಿ ಕ್ಲಾಸ್ ತೊರೆದರು.

ಅವರ ಕಟು ನುಡಿಗಳಾವುವೂ ಅವನ ಮೇಲೆ ಪ್ರಭಾವ ಬೀರದೆ, ಮಾಮೂಲು ಸ್ಥಿತಿಯಲ್ಲೇ ಇದ್ದ ಬದಲಾಗಿ ಜೇಬಿನಲ್ಲಿದ್ದ ಮುದುರಿದ ಚೀಟಿಯನ್ನು ತೆಗೆದು ಮುತ್ತಿಟ್ಟ. ಕಣ್ಣು ಮಿಂಚಿದವು.



ಅಧ್ಯಾಪಕ ಮುದ್ದಪ್ಪ ಸ್ಟಾಫ್ ರೂಮಿನಲ್ಲಿ ಸಿಗರೇಟ್ ಹಚ್ಚಿ, ಆಗಾಗ ಒಂದೊಂದು ದಮ್ಮು ಎಳೆಯುತ್ತ ಮುಂದಿನ ಕ್ಲಾಸಿನ ಸಿದ್ಧತೆ ನಡೆಸುತ್ತಿದ್ದರು. ಸ್ಟಾಫ್ ರೂಮಿನಲ್ಲಿ ಅವರೊಬ್ಬರೇ ಇದ್ದುದರಿಂದ ಅವರನ್ನೆ ಅರಸಿ ಬಂದ ಲಕ್ಷ್ಮಿಗೆ ವಿಷಯ ತಿಳಿಸಲು ಸುಸಮಯವಾಗಿತ್ತು.

ಬಾಗಿಲಿಗೆ ಬಂದು ನಿಂತು "ಸಾರ್" ಎಂದು ಕುಗ್ಗಿದ ಧ್ವನಿಯಲ್ಲಿ ಕರೆದ ಆಕೆಯ ಮುಖ ಬಾಡಿತ್ತು. ಸಂಕೋಚದಿಂದಲೇ ವಿಷಯ ತಿಳಿಸಿ ರಾಜುಗೆ ಸರಿಯಾದ ಶಾಸ್ತಿ ಮಾಡಬೇಕೆಂದು ನಿರ್ಧರಿಸಿದ್ದಳು. ಅದಕ್ಕಾಗಿ ಮನೆಗೆ ಬಂದು ಕುಶಲ ವಿಚಾರಿಸುವ ಪರಿಚಯಸ್ಥನನ್ನು ಆರಿಸಿದಳು.

"ಓ ಏನಮ್ಮ ಬಾ " ಸ್ನೇಹಿತನ ಮಗಳನ್ನು ವಾತ್ಸಲ್ಯದಿಂದಲೇ ಕರೆದ.

ಸಮೀಪಕ್ಕೆ ಬಂದು, ಎದುರಿನ ಟೇಬಲ್ ಅಂಚನ್ನು ಬೆರಳಿನಿಂದ ಗೀರುತ್ತ "ಸಾರ್..... ರಾಜು. " ದನಿ ತಗ್ಗಿತ್ತು ಸಂಕೋಚ ಒತ್ತರಿಸಿ ಬಂತು.

ತಕ್ಷಣ ಮುದ್ದಪ್ಪನ ಮುಖ ಹರಿವ ನದಿಯ ನೀರಿನ ಅಲೆಯಂತೆ ವಕ್ರವಾಯಿತು. 'ಹುಂ ರಾಜು ಚುಡಾಯಿಸಿದ್ನಾ ? ' ತಾವೆ ಕೇಳಿದರು.

"ಇಲ್ಲ ಸಾರ್ " ಎಂದು ಕೈಯಲ್ಲಿದ್ದ ಪತ್ರ ಟೇಬಲ್ ಮೇಲೆ ಎದುರಿಗೆ ಹಾಕಿದಳು.

ಪತ್ರ ಬಿಡಿಸಿ ತೀಕ್ಷ್ಣ ನೋಟದಿಂದ ಎರಡು ಸಾಲು ಓದಿ ಕುದಿಯತೊಡಗಿದರು. ಮೆಲುಕು ಬಿಗಿದವು ಹಲ್ಲು ಮಸೆದು 'ಓ ಪ್ರೇಮ ಪತ್ರ ಬರ್ದಿದ್ದಾನೋ ಇರ್ಲಿ , ಎಂದುಕೊಂಡು "ನೀನು ಸ್ವಲ್ಪ ಇಲ್ಲೇ ಇರಮ್ಮ, ಅವ್ನಿಗೆ ಈಗ ವಿಚಾರಿಸದಿದ್ರೆ ಬಹಳ ಕಷ್ಟ ಅನುಭವಿಸಬೇಕಾಗುತ್ತೆ " ಎಂದು ಗಡುಸಾಗಿ ನುಡಿದು, ಹೊರ ಬಂದರು.

ತೃಪ್ತಿಯ ಉಸಿರು ಬಿಟ್ಟ ಲಕ್ಷ್ಮಿಯ ತುಟಿಯಲ್ಲಿ ತೆಳಿನಗೆ ಲಾಸ್ಯವಾಡಿತು.

ಇಬ್ಬರು ವಿದ್ಯಾರ್ಥಿಗಳನ್ನು ಕರೆದು, ತಮ್ಮ ಹೆಸರು ತಿಳಿಸಿ ರಾಜುವನ್ನು ಬರಲು ಹೇಳಿ, ಹಿಂತಿರುಗಿ ಬಂದು ಕಣ್ಮುಚ್ಚಿ ಕುಳಿತು ಹಾವು ಹಾವನ್ನೆ ನುಂಗುವಂತೆ ಕೋಪದಿಂದ ಉಸಿರು ನುಂಗತೊಡಗಿದರು. ಅವರ ಮುಖ ಒಮ್ಮೆ ನೋಡಿ ದೃಷ್ಟಿ ಬದಲಿಸುತ್ತ ರಾಜನಿಗೆ ಕೊಡಬೇಕಾದ ಶಿಕ್ಷೆಯನ್ನು ನೆನೆಯುತ್ತ ನಿಂತಳು ಲಕ್ಷ್ಮಿ.

ಗೂಳಿಯಂತೆ ನುಗ್ಗಿದ ರಾಜು "ನಮಸ್ಕಾರ ಸಾರ್ " ಎಂದೇ ಬಳಿಯಲ್ಲಿದ್ದ ಲಕ್ಷ್ಮಿಯತ್ತ ನೋಡಿ ಕಿರುನಗೆ ನಕ್ಕ. ಕೈಯಲ್ಲಿದ್ದ ನೋಟ್ ಬುಕ್ಕನ್ನು ಗರಗರನೆ ತಿರುಗಿಸಿದ. 'ಎಲ್ಲೈ ದುರ ಅಹಂಕಾರಿ' ಎಂದ. ಅವನ ಉದ್ಧಟತನದಿಂದ ಉಲಿಯಿತವಳ ಮನ.

ನಿಧಾನವಾಗಿ ಕಣ್ತೆರೆದು ಅವನತ್ತ ಕೆಂಗಣ್ಣು ತಿರುಗಿಸಿದರು.

"ಏನ್ ಸಾರ್ ಹೇಳಿ ಕಳ್ಸಿದ್ದೀರಲ್ಲ ? ನೀವು ನಿನ್ನೆ ಪೋಸ್ಟ್ ಮಾಡ್ಲಿಕ್ಕೆ ಕವರ್ ಕೊಟ್ಟಿದ್ರಲ್ಲ ಸಾರ್, ಪೋಸ್ಟ್ ಮಾಡಿದ್ದೀನಿ. ಇವತ್ತು ತಲುಪಿರಬಹುದು ನಾನೇ

ಹೇಳ್ಬೇಕೊಂತ ಇದ್ದೆ ಸಾರ್. ಆದ್ರೆ ಆಗ್ಲಿಲ್ಲ " ಎಂದು ತಡವಿಲ್ಲದೆ ನುಡಿದ.

"ಅದಲ್ಲಾ ..! " ಒಮ್ಮೆಲೆ ಚೇಳು ಕುಟುಕಿದಂತೆ ಗುಡುಗಿದರು.

"ಮತ್ತೆ ಯಾವುದು ಸಾರ್ ? " ಮೆಲ್ಲಗೆ ಪ್ರಶ್ನಿಸಿ, "ಓ .. ಅದಾ ? ಅದೆ ಸಾರ್ ನೀವು ಹೇಳಿದ್ರಲ್ಲ ಹೋದ ವರ್ಷದ ಕಾಲೇಜ್ ಮ್ಯಾಗ್ಜೀನೆಲ್ಲ ಬೇಗ ಇಶ್ಯು ಮಾಡ್ಬೇಕೊಂತ. ನೀವು ಯೋಚ್ನೆ ಮಾಡ್ಬೇಡಿ ಸಾರ್. ಈ ವಾರದೊಳಗೆ ಆ ಕೆಲಸ ಮುಗಿಯುತ್ತೆ " ಎಂದು ಬಡ ಬಡ ನುಡಿದು ಮುಗಿಸಿದ.

"ಅದೂ ಅಲ್ಲ ! " ಮತ್ತೆ ರೇಗಿದರು.

"ಇನ್ಯಾವುದು ? " ತಾನೇ ಪ್ರಶ್ನಿಸಿಕೊಂಡು ತಲೆ ಕೆರೆದು "ಓ..... ಈಗ ಗೊತ್ತಾಯ್ತು ಬಿಡಿ ಸಾರ್ " ಎಂದು ಮುಂದುವರಿಸುತ್ತಿದ್ದಂತೆ " ಪಟಪ್ " ಕಣ್ಣು ಗುಡ್ಡೆಗಳನ್ನು ಹೊರ ಚಿಮ್ಮುವಂತೆ ಬಿಡುತ್ತ ಕೂಗಿದರು.

"ಯಾಕ್ಸಾರ್.... ? " ಸಮಾಧಾನದಿಂದಲೇ ಪ್ರಶ್ನಿಸಿದ.

"ಯಾಕೆಯಂತ ನನಗೇ ಕೇಳ್ತೀಯಲ್ಲಯ್ಯ ? ನೀನು ಹೀಗ್ಮಾಡಬಹುದೆ ? ವಯಸ್ಸಿಗೆ ಬಂದಿದ್ದೀಯಾ, ಮುಂದಿನ ವರ್ಷ ಹೈಸ್ಕೂಲ್ ಟೀಚರ್ ಆಗ್ತೀಯಾ" ಎನ್ನುತಿದ್ದಂತೆ "ಅಯ್ಯೋ ಬಿಡಿಸಾರ್ ಹೈಸ್ಕೂಲ್ ಟೀಚರ್ ಯಾವನು ಆಗ್ತಾನೆ. ವೊದ್ಲು ವಿಷ್ಯ ಏನು ಹೇಳಿ ಸಾರ್ ? " ಗೊತ್ತಿದ್ದೂ, ಗೊತ್ತಿಲ್ಲದವನಂತೆ ಕೇಳಿದ.

"ಇದೆ—ಇದೇ ಏನಯ್ಯ ನೀನು ಮಾಡೋದು ? "ಮುಖದತ್ತ ಹಿಡಿದು ಅಲುಗಿಸುತ್ತ ನುಡಿದು ಮುಂದುವರಿಸಿದರು "ಇದನ್ನ ಪ್ರಿನ್ಸಿಪಾಲ್‌ಗೆ ತೋರಿಸಿದ್ರೆ ಏನಾಗುತ್ತೆ ಗೊತ್ತೋ .? ನಿನ್ನ ಕತೆ ಮುಗಿದಂಗೆ. ಯಾಕಪ್ಪ ಇದೆಲ್ಲ? ಹ್ಲಾ ಪೋಲೀಸ್‌ನವರಿಗೆ ಕೊಟ್ರಂತೂ ಮುಗಿದೋಯ್ತು. ನಿಮ್ಮ ತಂದೆ, ತಾಯಿಯರಿಗೂ ಕೆಟ್ಟ ಹೆಸ್ರು. ಇದೇ ಲಾಸ್ಟ್ ವಾರ್ನಿಂಗ್ " ಎಂದು ಅಬ್ಬರಿಸಿದರು.

ರಾಜು ಎಂದೆಂದು ಇಷ್ಟೊಂದು ವೇದನೆ ಅನುಭವಿಸಿರಲಿಲ್ಲ. ಭವ್ಯ ದೇಹದವನ್ನು ಕೇವಲ ಅಧ್ಯಾಪಕರ ಬಾಯಿ ಮಾತಿಗೆ ಇಷ್ಟೊಂದು ಮೃದುವಾಗುವನೆಂದು ಲಕ್ಷ್ಮಿಯೂ ಭಾವಿಸಿರಲಿಲ್ಲ. "ಸರಿ. ಏನು ನಿಂತೆ? ಅಪೋಲಾಜಿ ಕೇಳ್ಕೊಂಡು ನಡೆ " ಎಂದು ಆಜ್ಞಾಪಿಸಿದರು.

ರಾಜನ ಚಿಗುರು ಮೀಸೆ ಮೇಲ್ಮುಖವಾಗಿ ನೆರೆಯುತ್ತಿದ್ದವು ಜರ್ರನೆ ಕೆಳಗಾದಂತೆ ತೋರಿದವು ರಾಜನಿಗೆ ತನ್ನ ತಪ್ಪಿನ ಅರಿವಾದಂತಿತ್ತು.

"ಏನು ? ಸುಮ್ನೆ ನಿಂತ್ಯಲ್ಲ. ತಗೋ ಇದನ್ನ ಹರಿದು ಚೂರು ಮಾಡಿ, ಮತ್ತೆ ಎಂದೂ ಹೀಗೆ ಮಾಡೋದಿಲ್ಲಾಂತ ಲಕ್ಷ್ಮಿಯತ್ರ ಕ್ಷಮೆ ಕೇಳ್ಕೊಂಡು ಹೋಗು" ರೋಷದಿಂದ ಆಜ್ಞಾಪಿಸಿದರು.

ಪರಸ್ಪರ ಅಭಿಮುಖರಾಗಿ ನಿಂತಿದ್ದರು ರಾಜು, ಲಕ್ಷ್ಮಿ. ರಾಜು ಕಳ್ಳನಂತೆ ತಲೆ ತಗ್ಗಿಸಿದ್ದ.

'ಹುಂ ಬೇಗ ಹರಿದಾಕು ? "ಮತ್ತೆ ಒತ್ತಾಯಿಸಿದರು.

"ಹೊರಗಡೆ ಹರಿದಾಕ್ತೀನಿ ಸಾರ್" ಕೇಳಿಕೊಂಡ ದೀನನಾಗಿ.

" ನೋ ಇಲ್ಲೀ ಈಗ್ಲೆ. ಹೂಂ ಟೈಂ ವೇಸ್ಟ್ ಮಾಡ್ಬೇಡ. ನನಗೀಗ ಕ್ಲಾಸ್ಸಿದೆ " ಕೈಗಡಿಯಾರ ನೋಡಿ ಎಚ್ಚರಿಸಿದರು.

ಮುರಿದ ಮನದಿಂದ ತಳಮಳಗೊಳ್ಳುತ್ತ ತಾನೇ ಕೈಯಾರೆ ಬರೆದ ಪ್ರೇಮಪತ್ರ ಚಿಂದಿ ಚಿಂದಿ ಮಾಡಿದ. ನೋಡುತ್ತಿದ್ದ ಲಕ್ಷ್ಮಿಯೂ ಆ ಕ್ಷಣದಲ್ಲಿ ಅಳುಕದಿರಲಿಲ್ಲ.

" ಹಾಗೇ ಕ್ಷಮೆನೂ ಕೇಳ್ಬಿಡು " ಬಿಡದ ಹಠದಿಂದ ಹೇಳಿದರು. ತಗ್ಗಿಸಿದ ತಲೆಯಿಂದ ನೋಟವನ್ನು ಎತ್ತರಿಸಿದ. ಲಕ್ಷ್ಮಿ ಅವನ ಮುಖವನ್ನೆ ಸುದೀರ್ಘವಾಗಿ ದಿಟ್ಟಿಸುತ್ತಿದ್ದಳು. ಆ ನೋಟದಲ್ಲಿ ಕ್ಷಮಿಸುವ ಭಾವನೆಯಾಗಲಿ, ಮೊದಲಿನ ಸೇಡಿನ ಛಾಯೆಯಾಗಲಿ ಇರದೆ ಶೂನ್ಯಭಾವ ತುಂಬಿತ್ತು.

ಹಾಗೆ ನೋಡುತ್ತಲೆ ಸೊರಗಿದ ದನಿಯಿಂದ " ಲಕ್ಷ್ಮಿ ದಯವಿಟ್ಟು ಈ ಬಾರಿ ಕ್ಷಮಿಸಿ ಬಿಡು. ಇನ್ನೆಂದೂ ಹೀಗೆ ಮಾಡೊಲ್ಲ " ಕಲೆತ ನೋಟ ಕೆಳಗಿಳಿಸಿ ಅದೇ ದನಿಯಲ್ಲಿ " ನಾನು ಬರ್ತೀನಿ ಸಾರ್ ... " ಎಂದು ಹೊರಟ. ತೀಕ್ಷ್ಣವಾಗಿ ನೋಡುತ್ತಿದ್ದ ಲಕ್ಷ್ಮಿ ಅವನ ಮನದಲ್ಲಿ ಅವ್ಯಕ್ತವಾದ ನೋವಿನ ಆಳವ ಅಳೆದಳು.

"ಸರಿ ಹೋಗು " ಬಿಗುಮಾನದಿಂದ ಅವನ ಕಡೆ ನೋಡದೆ ಹೇಳಿದಳು.

ರಾಜ ಅಲ್ಲಿಂದ ಸೋಲು ಅಪಮಾನದ ನೋವು ಅನುಭವಿಸುತ್ತ ನಡೆದ.

ಅವನು ಅತ್ತ ಹೋಗುತ್ತಿದ್ದಂತೆ "ಸರಿ, ನೀನು ಹೋಗಮ್ಮ. ನೀನೇನು ಹೆದರ್ಕ್ಕೋಬೇಡ ಏನಾದ್ರು ಅವ್ನು ಅಂದ್ರೆ ನನ್ನತ್ರ ತಕ್ಷಣ ಬಾ, ತಲೆ ಎತ್ತದಾಗೆ ಮಾಡ್ತೀನಿ " ಎಂದು ಲಕ್ಷ್ಮಿಯನ್ನು ಕಳುಹಿಸಿದರು.

ವ್ಯಾಕುಲದಿಂದ ಹೊರ ಬಂದ ಲಕ್ಷ್ಮಿ 'ತಾನು ಇಷ್ಟೊಂದು ಅತಿಯಾಗಿ ವರ್ತಿಸಬಾರದಿತ್ತೇನೋ...... ಪಾಪ! ಕ್ಷಮೆ ಕೇಳುವಾಗ ಅದೆಷ್ಟು ವೇದನೆ ಅನುಭವಿಸಿಬಿಟ್ಟ " ಎಂದು ಒಂದು ಮನ ತರ್ಕಿಸಿದರೆ, ಇನ್ನೊಂದು ಮನ 'ಹಾಗೇ ಆಗ್ಬೇಕು ಅವನಿಗೆ, ಇಲ್ಲದಿದ್ದರೆ ಮೈ ಮುಟ್ಲಿಕ್ಕೂ ಹೇಸುವವನಲ್ಲ. ತನ್ನದೇನು ತಪ್ಪಿಲ್ಲವೆಂದು ತನ್ನಷ್ಟಕ್ಕೆ ಸಮಾಧಾನ ಹೇಳಿಕೊಂಡರೂ ಮನಸ್ಸು ಅಲ್ಲೋಲ ಕಲ್ಲೋಲ ಆಗತೊಡಗಿತು.

ಹೊರ ಬಂದಾಗ ಬೆನ್ನು ತಿರುಗಿಸಿ ನಿಧಾನವಾಗಿ ನಡೆಯುತ್ತಿದ್ದ ರಾಜು ಲಕ್ಷ್ಮಿಯೊಂದಿಗೆ ಕಟ್ಟಿದ ಕನಸು, ಬಯಕೆಗಳೆಲ್ಲವನ್ನು ಗಾಳಿಯಲ್ಲಿ ತೂರುವಂತೆ ಕೈಯಲ್ಲಿ ಹಿಡಿದಿದ್ದ ಪ್ರೇಮಪತ್ರ ಹರಿದ ಚೂರುಗಳನ್ನು ತೂರಿದ. ಲಕ್ಷ್ಮಿಯ ಮನ ಕನಿಕರದಿಂದ ಮರುಗಿತು.

ಹಿಂದೆಯೆ ಯೋಚನೆಯ ಸರಮಾಲೆ ನುಗ್ಗುತಿದ್ದಂತೆ ಭಾವುಕಳಾಗಿನಿಂತಳ್ಲೆ 'ಇನ್ನೆಂದೂ ಹೀಗೆ ಮಾಡೊಲ್ಲ ಎಂದ, ಅದರ ಅರ್ಥವೇನಿರಬಹುದು.? ಬಹುಶಃ ಅವನು ನನ್ನನ್ನೆ ನಂಬಿದ್ದನೆಂದು ಕಾಣುತ್ತೆ. ಪಾಪ ಕ್ಷಮೆ ಕೇಳ್ಬೇಕಾದ್ರೆ ಮೂಕ ಪ್ರಾಣಿಯ ತರಹ ವರ್ತಿಸಿ ಬಿಟ್ಟ. ಇದೇ ಪತ್ರ ಬೇರೆಯವರಿಗೇನಾದ್ರೂಬರ್ದಿದ್ರೆ ಪುತ್ಯೃತ್ತರ ಪರವಾಗಿ ಅನುಮೋದಿಸಿ ಬರೆಯುತಿದ್ದರು. ನಾನು ತಪ್ಪುಮಾಡಿದನೇನೊ? ಪ್ರೇಮ ಮಾಡ್ಲಿಕ್ಕೂ ಒಂದು ಯೋಗ್ಯತೆ ಬೇಕು. ಆ ಯೋಗ್ಯತೆ ನನಗಿರ್ಬೇಕಾದ್ರೆ ಬಂದ ಅವಕಾಶ ತಾನೇ ಹಾಳ್ಮಾಡಿಕೊಂಡೆನಂತ ಕಾಣ್ಸುತ್ತೆ. ಹುಡುಗಿಯರೆಲ್ಲ ಅವನಿಗೆ ಓಟು ಹಾಕುವಾಗ ಅವನನ್ನು ಸಾಕಷ್ಟು ಪರೋಕ್ಷವಾಗಿ ಹೊಗಳಿದ್ದೇಕೆ ಎಂದು ಈಗ ಗೊತ್ತಾಗ್ತ ಇದೆ. ಒಳ್ಳೇ ಅಟ್ರ್ಯಾಕ್ಟ್ ಮಾಡುವಂತ ಸುಂದರ!' ನಿಂತಲ್ಲೇ ಇಷ್ಟೊ

ಯೋಚನೆಯ ಲಹರಿ ಹರಿಯುತಿತ್ತೇನೊ ಅಷ್ಟರಲ್ಲಿ ಎದುರಿಗೆ ಬಂದ ಸ್ನೇಹಿತೆಯರು " ಏನೇ ಲಕ್ಷ್ಮಿ ಬೆಲ್ ಆದ್ರೂ ಇಲ್ಲೇ ಇದ್ದೀಯಲ್ಲ! ಕ್ಲಾಸಿಗೆ ಬರಲ್ವ?" ಕೇಳಿದಾಗಲೇ ಎಚ್ಚರಗೊಂಡದ್ದು.

"ಹಾಂ ಹಾಂ... ಹೂಂ ಬರ್‍ತೀನಿ ನಡಿ"ಎಂದು ತಟ್ಟನೆ ಎಚ್ಚೆತ್ತು ಜೊತೆಗೂಡಿ ನಡೆದಳು.

ಪೊಲಿಟಿಕಲ್ ಸೈನ್ಸ್‌ನ ಅಧ್ಯಾಪಕರು ಕ್ಲಾಸ್ ತೆಗೆದುಕೊಂಡಿದ್ದರು. ಸ್ವಲ್ಪ ಹೊತ್ತು ಸರಿಯಾಗಿ ಕುಳಿತಿದ್ದ ರಾಜು ಡೆಸ್ಕ್ ಮೇಲೆ ಕೈ ಕಟ್ಟಿ ತಲೆ ಇಟ್ಟು ಕಣ್ಮುಚ್ಚಿದ.

ಇದನ್ನು ಗಮನಿಸಿದ ಅಧ್ಯಾಪಕರು ಪಾಠ ನಿಲ್ಲಿಸಿ "ಯಾರದು ಮಲಗಿರೋದು ? " ಅತ್ತ ಬೆರಳು ತೋರಿ ದರ್ಪದಿಂದ ಪಕ್ಕದ ವಿದ್ಯಾರ್ಥಿಯನ್ನು ಕೇಳಿದರು.

ಪಕ್ಕದಲ್ಲಿ ಕುಳಿತಿದ್ದ ಸೋಮು ಅವರಿಗೆ ಉತ್ತರ ನೀಡದೆ ರಾಜನ ಪಕ್ಕೆ ತಿವಿದು " ಲೋ ರಾಜ, ಲಕ್ಚರ್ ನೋಡಿದ್ರು ಏಳಲೇ" ಪಿಸುದನಿಯಲ್ಲಿ ಗದರಿದ.

ಮಂಪರಿನಿಂದ ಎಚ್ಚೆತ್ತು ಅರೆಗೆಂಪು ಕಣ್ಣುಗಳಿಂದ ಅಧ್ಯಾಪಕರನ್ನು ನೋಡಿ ಎದ್ದು ನಿಂತ.

ಅಧ್ಯಾಪಕರು ಕೋಪದಿಂದ "ಏನ್ ರಾಜಾ ? ನಾನು ಪಾಠ ಮಾಡ್ತ ಇದ್ದೀನೊ, ಇಲ್ಲ ಜೋಗುಳ ಹಾಡ್ತ ಇದ್ದೀನೋ ? ನಾನು ವರ್ಷದ ಮೊದಲ ಪಿರೆಡ್ ತಗೊಂಡಾಗಲೇ ಹೇಳ್ಬಿಟ್ಟಿದ್ದೀನಿ. ಅಟೆಂಡೆನ್ಸ್‌ಗೆ ಯಾರೂ ಬರ್‍ಬೇಡಿ ಕೊಡ್ತೀನಂತ. ನಿಮಗೆ ಕ್ಲಾಸ್ ಇಂಟೆರೆಸ್ಟ್ ಇಲ್ದಿದ್ರೆ ಯಾಕ್ಬರ್‍ತೀರಿ ? ಇಂತವರನ್ನ ಕಂಡ್ರೆ ನನಗಂತೂ ಆಗಲ್ಲ. ಪ್ಲೀಸ್ ಗೆಟ್ ಔಟ್. " ಗಂಭೀರವಾಗಿ ಕೋಪ ಕಾರಿದರು.

ಸುಮ್ಮನೆ ಎದ್ದು ಪೆಕರನಂತೆ ನೋಡುತ್ತಿದ್ದ ರಾಜನನ್ನು ನೋಡಿ "ಯಾಕಪ್ಪ ನಾನು ಹೇಳಿದ್ದು ಅರ್ಥವಾಗಲಿಲ್ವ? ನಿನ್ನಂತ ವೈಸ್‌ಪ್ರೆಸಿಡೆಂಟೇ ಕಾಲೇಜಿನಲ್ಲಿ, ತರಗತಿಯಲ್ಲಿ ಅಶಿಸ್ತನ್ನು ಬೆಳೆಸಿದ್ರೆ ಮುಗಿಯಿತು. ಹೀಗೆ ಬಯ್ದಿದ್ದೀನಿಯಂತ ನಾಳೆ ಸ್ಟ್ರೈಕ್

ಮಾಡ್ಲಿಕ್ಕೆ ಹೋಗ್ಬೇಡ ಯಾರೂ ನನಗೆ ಏನೂ ಮಾಡ್ಲಿಕ್ಕಾಗಲ್ಲ " ಅತೀ ನೀತಿವಂತ, ದಕ್ಷತೆ ಬೆಳೆಸಿಕೊಂಡಿದ್ದ ಅವರು ಧೈರ್ಯದಿಂದಲೇ ಹುಸಿ ನಗೆ ತಂದುಕೊಂಡು ನುಡಿದರು.

" ನಾನು ಅಂತವನೂಂತ ಯಾರ್ ಸಾರ್ ಹೇಳಿದ್ದು ? " ರಾಜು ತನಗೆ ಇನ್ನೊಮ್ಮೆ ಅಪಮಾನವಾಗುವುದನ್ನು ಸಹಿಸಲಾರದೆ ತಾಳ್ಮೆ ತಪ್ಪಿ ಕೇಳಿದ.

"ಅದೇನೆ ಇರಲಿ. ಇಂಟರೆಸ್ಟ್ ಇಲ್ದೋರು ನನ್ನ ಕ್ಲಾಸಿಗೆ ಬರೋದು ನಾನು ಮಾತ್ರ ಸಹಿಸಲ್ಲ ಅಷ್ಟೆ. ಯಾಕೆ ಹುಷಾರಿಲ್ವ ? " ತಾವೇ ಸ್ವಲ್ಪ ಮೆತ್ತಗಾಗಿ ಕೇಳಿದರು. ಬೆಳೆದ ಹುಡುಗರನ್ನು ಎದುರು ಹಾಕಿಕೊಳ್ಳಲು ಅವರ ಮನಸ್ಸೂ ಸ್ವಲ್ಪ ಅಳುಕಿತು. ರಾಜು 'ಹೌದೆಂದು' ತಲೆ ತೂಗಿದ. ಅಧ್ಯಾಪಕರು ಮುಂದುವರಿಸಿದರು. "ಮತ್ತೇಕೆ ಬಂದೆ ಹುಷಾರಿಲ್ಲದವನು? ಹೋಗು ರೆಸ್ಟ್ ತಗೋ"ಎಂದರು. ಒಟ್ಟಿನಲ್ಲಿ ಅವನನ್ನು ಹೊರದೂಡು ವುದೇ ಅವರ ಮುಖ್ಯ ಉದ್ದೇಶವಿದ್ದಂತೆ ಇತ್ತು.

ಮೂರು ನೋಟ್ ಬುಕ್‌ಗಳನ್ನು ಕೈಗೆ ತೆಗೆದುಕೊಂಡು ಅಧ್ಯಾಪಕರನ್ನೆ ಧಿಕ್ಕರಿಸುವಂತೆ ನಡೆದ. ಎಲ್ಲರನೋಟಕ್ಕೆ ಹಾಗೆ ಕಂಡರೆ, ಲಕ್ಷ್ಮಿಗೆ ಭಗ್ನ ಪ್ರೇಮಿಯಂತೆ ತೋರಿ ತಳಮಳಗೊಂಡಳು ಮುಂದೆ ಪಾಠದಲ್ಲಿ ಅನಾಸಕ್ತಿ ಮೂಡಿತು.

" ಹ್ಹಾ.. ಪಾಠ ಎಲ್ಲಿಗೋ ನಿಂತಿತು ಎಲ್ಲಿಗಾದ್ರೂ ನಿಲ್ಲಿ, ನೋಟ್ಸ್ ಬರ್ಕೊಳ್ಳಿ, ಎಕ್ಸ್‌ಪ್ಲೈನ್ ಮಾಡೋ ಟೈಮ್ ಮುಗಿಯಿತು " ಎಂದು ತಮ್ಮ ಕರ್ತವ್ಯ ಪಾಲಿಸತೊಡ ಗಿದರು. ಎಂದೂ ಒಂದು ಅಕ್ಷರ ಬಿಡದೆ ಬರೆಯುವ ಲಕ್ಷ್ಮಿಯ ನೋಟ್ಸ್ ಇಂದು 'ಫಿಲಪ್ ದಿ ಬ್ಲ್ಯಾಂಕ್ಸ್' ಗೆ ಮಾದರಿಯಾಗಿತ್ತು. ಮುಂದೆ ಆಲೋಚನೆಗಳ ಮಧ್ಯೆ ಮೂಡಿ ಬರುತ್ತಿದ್ದದ್ದು ಕ್ಷಮೆಯಾಚಿಸುವ ಮುಖನೆ. ಚಿತ್ತ ಚಂಚಲವಾಗತೊಡಗಿತು. ನಾಲ್ಕಾರು ಲೈನ್ನು ಹಿಂದಿನಷ್ಟು ಹಿಂದೆ ಉಳಿದವು. ತಲೆಯ ತುಂಬಾ ಅವನೇ ಮಾಯಾವಿಯಾಗಿ ಕಾಡ ತೊಡಗಿದ.

ಎಷ್ಟೆ ಇಕ್ಕದೆ ಮುಂದಿನ ಬೆಂಚಲ್ಲಿ ಕುಳಿತಿದ್ದ ಲಕ್ಷ್ಮಿಯತ್ತ ಎರಡು ಮೂರು ಬಾರಿ ನೋಡಿ " ಏನಮ್ಮ ಪೆನ್ನು ಬರೀತಾ ಇಲ್ವಾ ? ತಾವೆ ಕೇಳಿದರು.

ಆಲೋಚನ ಮಗ್ನಳಾದ ಲಕ್ಷ್ಮಿಯನ್ನು ವಾಸ್ತವಕ್ಕೆ ಜಗ್ಗಿ ಎಳೆದು ತಂದಿತು ಅವರ ನುಡಿ. ಭಯಾವೃತ ವಿಸ್ಮಯದಿಂದ "ಹಾಂ ....." ಶಬ್ದ ಹೊರ ಹಾಕಿದಳು. ತನ್ನೆಲ್ಲ ಯೋಚನೆ ಅವರಿಗೆ ತಿಳಿದಿರಬಹುದೆಂಬ ಭಯದಿಂದ ಕಂಪಿಸುತ್ತ ಮೆಲ್ಲಗೆ " ಇಲ್ಲ ಸಾರ್ ತಲೆ ತಿರುಗಿದಾಗಾಯ್ತು " ತಡವಿಲ್ಲದೆ ಸುಳ್ಳು ಹೊರಬಿತ್ತು.

"ನೀರು ತರಿಸಿಕೊಡ್ಲೇನಮ್ಮ ? "

"ಬೇಡ ಸಾರ್ ಮನೆಗೆ ಹೋಗ್ತೀನಿ" ಎಂದಳು.

" ಸರಿ. ನೀನು ಹೋಗಿ ಮನೆಗೆಬಿಟ್ಟಿಡಮ್ಮ " ಎಂದು ಪಕ್ಕದಲ್ಲಿದ್ದ ಗೀತಾಳಿಗೆ ಹೇಳಿದರು.

ಸುಮ್ಮನೆ ಎದ್ದು ಹೊರ ಬಂದ ಮೇಲೆ "ಗೀತಾ ನನಗೇನು ಆಗಿಲ್ಲ ಕಣೆ, ನೀನು ಕ್ಲಾಸಿಗೆ ಹೋಗು " ಎಂದಾಗ, ಗೀತಾ ಅರ್ಥವಾಗದೆ ಮುಖ ನೋಡಿದಳು.

O O O

ರಾಜನ ನಡತೆ ಇಷ್ಟು ಸ್ಮರಣೀಯವಾಗಿ ಆಕರ್ಷಿಸುವುದರ ಕಡೆಗೆ ಗಮನ ವಿಲ್ಲದೆ ಬಲು ತಡವಾಗಿ ಒಲಿಯತೊಡಗಿದಳು ಲಕ್ಷ್ಮಿ. ರಾತ್ರಿ ನಿದ್ರೆಯ ಜೊಂಪಿನಲ್ಲಿರು ವಾಗಲೂ ಬೆಳಿಗ್ಗೆ ಕಾಲೇಜಿನಲ್ಲಿ ಭಾರ ಹೃದಯದಿಂದ ಪತ್ರ ಹರಿದಿದ್ದು, ತಲೆ ತಗ್ಗಿಸಿ ಕ್ಷಮೆ ಬೇಡಿದ್ದು ಒಂದೊಂದಾಗಿ ಪುನರಾವರ್ತನೆಯಾಗುತಿತ್ತು. ಕೋಣೆಯ ದೀಪ ಉರಿಯು ವಂತೆ, ಹೃದಯ ರಾಜನಂತೆಯೆ, ರಾಜನಿಗಾಗಿ ಬೇಯತೊಡಗಿತು ಯೋಚನೆ ಬದಲಾ ಯಿಸುವುದರೊಂದಿಗೆ ಮಗ್ಗಲು ಬದಲಿಸಿದಳು. ಅಂಗಾತಳಾಗಿ ಮಲಗಿ ಎದೆಯ ಮೇಲಿಕೈ ಇಟ್ಟು ಕಣ್ಣುಚ್ಚುತ್ತಿದ್ದಂತೆ 'ನನ್ನ ಕ್ಷಮಿಸು ಲಕ್ಷ್ಮಿ' ಮನವನ್ನೆ ಕಳವಳಗೊಳಿಸು ಕಣ್ನೋಟ, ಸೋತ ದನಿ ನೆನಪಿಗೆ ಬರುತ್ತಿದ್ದು, ಲಕ್ಷ್ಮಿಯನ್ನು ಸಾಕಷ್ಟು ಮೃದುಗೊಳಿ ಸವು ಮರಳಿ ಮಂಪರು ಕವಿಯುತ್ತಿದ್ದಂತೆ ಮಂಚದ ಕಾಲಿನ ಕಡೆ ರಾಜು ನಿಂತಿದ್ದ ಅವನು ಕೈಯಲ್ಲಿದ್ದ ಹರಿದ ಪ್ರೇಮಪತ್ರದ ತುಣುಕುಗಳನ್ನು ತನ್ನ ಮೇಲೆ ತೂರಿದ ಮುಳ್ಳಗೆಯಿಂದ. ಚೆಲ್ಲಿದ ಕಾಗದದ ಚೂರು ದೇಹದ ಮೇಲೆ ಬೀಳುವಾಗ ಮಲ್ಲಿಗೆಯಾಗಿ ಮಾರ್ಪಾಟಾಯಿತು. ತಟ್ಟನೆ ಎಚ್ಚೆತ್ತು ನೋಡಿದಳು ಭ್ರಮೆಯ ಸುಂದರ ಕನಸು. ಎದ್ದು ತಾಯಿಯ ರೂಮಿನಲ್ಲಿದ್ದ ಸ್ಲೀಪಿಂಗ್ ಟ್ಯಾಬ್ಲೆಟ್ಸ್ ತರಲು ನಡೆದಳು. ಬಾಗಿಲು ಬಡಿಯಲು ಕೈ ಎತ್ತುತ್ತಿದ್ದಂತೆ ಕಿಟಗುಳಿ ಇಟ್ಟಂತೆ ನಕ್ಕ ತಾಯಿಯ ಸರಸದ ದನಿ ಕಿವಿ

ಗೆ ಅಪ್ಪಳಿಸಿತು. ಸದ್ದಿಲ್ಲದೆ ಹಿಂತಿರುಗಿದಳು

  

ಎಂದಿಗಿಂತ ಅರ್ಧ ಗಂಟೆ ಕಾಲೇಜಿಗೆ ಬೇಗನೆ ಬಂದ ಲಕ್ಷ್ಮಿ, ರಾಜು ಹರಿದು ತೂರಿದ ಕಾಗದದ ತುಂಡುಗಳನ್ನು ಹುಡುಕತೊಡಗಿದಳು. ಎರಡುಮೂರು ತುಂಡುಗಳನ್ನು ಆಯ್ದುಕೊಂಡು, ಉಳಿದ ಇನ್ನೂ ಕೆಲವು ತುಂಡುಗಳಿಗಾಗಿ ಆಸಕ್ತಿಯಿಂದ ಅತ್ತ ಇತ್ತ ನೋಟ ಹರಿಸುತ್ತಿದ್ದಳು. ಕೆಲವೆಲ್ಲ ಗಾಳಿಗೆ ಎತ್ತಲೋ ಹಾರಿದ್ದವು. ಅಷ್ಟರಲ್ಲಿ ಹತ್ತಿರ ಬಂದ ಗೆಳತಿ "ಏನೇ ಲಕ್ಷ್ಮಿ ಹುಡುಕ್ತಿರೋದು ? ಏನಾದ್ರೂ ಕಳ್ಕೊಂಡ? " ಕೇಳಿದಳು.

ಅವಳ ಕಡೆ ಒಮ್ಮೆ ಅನಾಸಕ್ತಿಯ ನೋಟ ಬೀರಿ ಮತ್ತೆ ಕೆಳಗೆ ದೃಷ್ಟಿ ಹಾಯಿಸಿ "ಹೌದೆ ನೆನ್ನೆ ಪಾಯಿಂಟ್ಸ್ ಹಾಕಿದ್ದ ಪೇಪರ್ ಮರೆತ್ಬಿಟ್ಟು ಹರಿದಾಕ್ಬಿಟ್ಟೆ" ಶ್ರಮವಿಲ್ಲದೆ ಸುಳ್ಳು ಹೊರ ಬಿದ್ದಿತು.

" ಎಲ್ಲಾ ಲಕ್ಚರ್ಸ್ ನೋಟ್ಸ್ ಕೊಡ್ತೀರಾದ್ರೆ ಅದೇಕೆ ? ಬಾರೆ ಕ್ಲಾಸಿಗೆ ಹೋಗೋಣ " ಕೈ ಹಿಡಿದು ಎಳೆದಳು.

" ಹೇ ಬಿಡೆಯಮ್ಮ " ಕೈ ಕೊಸರಿ ಬಿಡಿಸಿಕೊಂಡು " ಲಕ್ಚರ್ಸ್ ಬರ್ಸಿದ ನೋಟ್ಸ್ ಓದಿದ್ರೆ ಸೆಕೆಂಡ್ ಕ್ಲಾಸೂ ಬರೋದು ಕಷ್ಟ. ಒಳ್ಳೆ ಬುಕ್‌ನಿಂದ ಕಲೆಕ್ಟ್ ಮಾಡಿದ್ದೆ " ಎಂದಳು.

" ನೀನು ಬುದ್ಧಿವಂತೆ ನಿಜ ಆದ್ರೆ ಇಂತಹ ಚಿಕ್ಕ ವಿಷಯಕ್ಕೆಲ್ಲ ಇಷ್ಟು ತಲೆ ಕೆಡಿಸಿಕೊಳ್ತೀಯಲ್ಲ ಅದೇ ನನಗೆ ಆಶ್ಚರ್ಯ " ಎನ್ನುತ್ತ ತುಂಟ ನಗೆಯಿಂದ ನುಡಿದಳು. ಪ್ರಶ್ನಾರ್ಥಕ ನೋಟದಿಂದ ನೋಡಿದ ಲಕ್ಷ್ಮಿಗೆ ತಾನೆ ಹೇಳಿದಳು "ಏನಿಲ್ಲ ಇಷ್ಟೆಲ್ಲ ಬುದ್ಧಿವಂತೆಯಾಗಿ ಕಳೆದುಹೋದ ಪಾಯಿಂಟ್ಸ್ ಹುಡುಕೋದ್ಕಿಂತ ಲೈಬ್ರರಿಗೆ ಹೋಗಿ ಬೇರೇದು ಬರೆದಿದ್ದಿದ್ರೆ ? " ಎಂದು ನಿಲ್ಲಿಸಿದಳು.

ಕೂರ್ಮ್ಯ ನೋಟದಿಂದ ಗೆಳತಿಯ ಮುಖ ದಿಟ್ಟಿಸಿ "ಹೌದು ಇಷ್ಟೊತ್ತಿಗೆ ಮುಗಿದೇ ಹೋಗ್ತಿತ್ತು ನಡಿ ಕ್ಲಾಸಿಗೆ ಹೋಗೋಣ "ಎಂದು ಪೆಚ್ಚು ಮುಖ ಮಾಡಿಕೊಂಡು ನಡೆದಳು.

  

ಎರಡು ದಿನ ಕ್ಲಾಸಿಗೆ ರಾಜು ಬರದಾಗ, ಅವನನ್ನು ಕಾಣದ ದುಃಖ ಯಿಂದ ವಂಚಿತಳಾಗಿ ಬೆದರಿದಳು. 'ಅವನೇಕೆ ಬರಲಿಲ್ಲ? ಅಪಮಾನ ಸಹಿಸದಾದನೆ? ಇಲ್ಲ ಭಗ್ನಪ್ರೇಮದಿಂದ ಹತಾಶನಾಗಿ ಭ್ರಮೆಗೊಂಡನೆ? ಹೆಚ್ಚು ಕಡಿಮೆಯಾದರೆ ಯಾರು ಜವಾಬ್ದಾರಿ? ಎರಡು ಕಾರಣಗಳಿಂದ ಅವನಿಗೆ ವಿರೋಧವಾಗಿ, ಏನಾದ್ರೂ ದುರಂತ ಸಂಭವಿಸಿದ್ದಲ್ಲಿ ಪಾಲ್ಗೊಳ್ಳಬೇಕಾಗುತ್ತೆ. ಅವನೇನು ಮಹಾ ಒಬ್ಬನೇನಾ ನೋವು ಅನುಭವಿಸುತ್ತಿರೋದು? ನನ್ನ ಸಂಕಟ ಕೇಳೋರಾರು?' ಮುಂತಾಗಿ ಯೋಚಿಸಿದ ಲಕ್ಷ್ಮಿಗೆ ಬೆಳಗಿನ ಜಾವ ಹಾಸಿಗೆಯಲ್ಲಿ ಮಲಗಿರುವಂತೆಯೆ ಹೊಳೆದದ್ದು ನೃತ್ಯದ ನೆನಪು. ಅಂದು ಅವನನ್ನು ಪ್ರಥಮವಾಗಿ ನೋಡಿದಾಗ ತನ್ನ ನೃತ್ಯವನ್ನು ಚಪ್ಪಾಳೆ ತಟ್ಟಿ ಶ್ಲಾಘಿಸಿ, ಒನ್ಸ್‌ಮೋರ್ ಎಂದು ಕೂಗಿದ್ದ, ಅವನನ್ನು ಮೆಚ್ಚಿಸಲು ಕಡೆಯ ಮಾರ್ಗ ಗೆಜ್ಜೆ ಕಟ್ಟಿ ಕುಣಿವ ನೃತ್ಯ. ನೃತ್ಯವನ್ನು ಬಿಟ್ಟ ಕೆಲವು ದಿನಗಳು ಆಗಿದ್ದರಿಂದಲೇನೊ ಹೊಸ ಹುಮ್ಮಸ್ಸು, ಕೆಚ್ಚು ದ್ವಿಗುಣಗೊಂಡಿದ್ದವು ಸಮಯ ಆರು ಗಂಟೆಗೆ ಹತ್ತು ನಿಮಿಷ ಕಡಿಮೆ ಇರುವಂತೆಯೆ, ಕತ್ತಲು ಮರೆಯಾಗುವ ವೇಳೆ. ನೃತ್ಯಕ್ಕೆ ತಕ್ಕದಾದ ಸಮಯ.

ತಡ ಮಾಡದೆ ಎದ್ದು ಹೊರಟಳು ಟೇಪ್ ರೆಕಾರ್ಡ್‌ರ್, ಅವನು ಮೆಚ್ಚಿದ ಗೀತೆಯ ಕ್ಯಾಸೆಟ್ ತೆಗೆದುಕೊಂಡು ಹೋಗಿ, ಮನೆಯ ಹಿಂಭಾಗದಲ್ಲಿದ್ದ ಮರದ ಟೇಬಲ್ ಮೇಲೆ ಇಟ್ಟು, ಒಮ್ಮೆ ಆ ಮನೆಯ ಕಡೆ ನೋಡಿ, ಸಂಗೀತ ಆರಂಭಗೊಳ್ಳುತ್ತಿದಂತೆ ಸೌಂಡ್ ಬಹಳ ಜೋರು ಮಾಡಿ, ಹೆಚ್ಚು ಹುರುಪಿನಿಂದ ನರ್ತಿಸಿದಳು. ಅದರ ವೀಕ್ಷಣೆಗೆ ಬರಬೇಕಾದ ವ್ಯಕ್ತಿ ಬರಲಿಲ್ಲ. ಅವನನ್ನು ಮೆಚ್ಚಿಸ ಹೊರಟ ಲಕ್ಷ್ಮಿಗೆ ಸ್ವಲ್ಪ ನಿರಾಶೆಯಾದರೂ, ಚೇತರಿಸಿಕೊಂಡು ಇನ್ನಷ್ಟು ಸೌಂಡ್ ಜೋರು ಮಾಡಿ ಪುನಃ ಅದೇ ಹಾಡಿಗೆ ನರ್ತಿಸಿದಳು. ಬರಬೇಕಾದ ಮನದನ್ನನಿರಲಿ ಅವನ ನೆರಳೂ ಕಾಣದಾಗ, ಆ ಮನೆಯ ಕಡೆ ನೋಡುತ್ತಲೇ ತೇವವಾದ ಕಂಗಳ ರೆಪ್ಪೆ ಬಡಿದು ಒಣಗಿಸಿದಳು. ನಿರಾಶೆಯ ಮೋಡ ಕವಿದಂತೆಲ್ಲ ದುಃಖ ಒತ್ತರಿಸಿ ಬರತೊಡಗಿತು.

ತನ್ನಷ್ಟಕ್ಕೆ ತಾನೆ ಮಹಡಿಯ ಕತ್ತಲ ಕೋಣೆಯಲ್ಲಿ ನಿಂತು, ಎರಡು ಬಾರಿ ಅಮೋಘ ನೃತ್ಯ ಅಭ್ಯಾಸ ಮಾಡಿದ ಲಕ್ಷ್ಮಿಯ ಮನಸನ್ನು ಗೆಲ್ಲಲಾರದೆ ಹೋದನೇ?

ಎಂದು ವ್ಯಥೆ ಅನುಭವಿಸುತ್ತಿದ್ದ ರಾಜ, ‘ ನನ್ನ ನಡತೆಯನ್ನು ಅಧ್ಯಾಪಕರಲ್ಲಿ ದೂರಿ, ಇನ್ನು ಯಾರ ಭಯವೂ ಇಲ್ಲ ಎಂಬಂತೆ ಧೈರ್ಯದಿಂದ ನೃತ್ಯ ಅಭ್ಯಾಸ ಮಾಡ್ತಿದ್ದಾಳೆ. ನಾನಂತೂ ಇಷ್ಟ ಪಟ್ಟಿದ್ದನ್ನು ಪಡೆಯದೆ ಹೋದರೂ ಚಿಂತೆಯಿಲ್ಲ. ಲಕ್ಷ್ಮಿಗೆ ಮಾತ್ರ ಆಗಾಗಬಾರದು' ಎಂದು ಚಿಂತಿಸಿದ ತನ್ನ ರೂಮಿನ ಕಿಟಕಿಯಿಂದ ಸ್ವಲ್ಪ ದೂರದಲ್ಲಿ ಕೈ ಕಟ್ಟಿ ನಿಂತು ವಿವೇಚಿಸಿ, ಹಿಂತಿರುಗಿ ತಮ್ಮ ಮನೆಯ ಕಡೆಯೆ ನೋಡುತ್ತ ಹೋದ ಲಕ್ಷ್ಮಿಯನ್ನು ಪರರ ಸ್ವತ್ತಿನಂತೆ ವೀಕ್ಷಿಸಿದ.

  

ಇದಂತೂ ಕಡೆಯ ನಿರ್ಧಾರ. ‘ಅಪರಾಧಿ ನಾನಾದ್ರೂ ಚಿಂತೆಯಿಲ್ಲ. ನನ್ನ ಮನದ ಅಳಲು, ಹಂಬಲವೆಲ್ಲ ಅವನಿಗೆ ಇದೇ ರೀತಿ ತೋರಿಕೊಳ್ಳುವುದು ಸರ್ವೋತ್ತಮ. ಮೂರು ದಿನದಲ್ಲಿ ಏಕಾಂತ ಸಿಕ್ಕಾಗಲೆಲ್ಲ ಅವನಿಗಾಗಿ ಬರೆದು ತುಂಬಿಸಿದ ನೂರು ಪುಟದ ನೋಟ್ ಬುಕ್ ತನ್ನ ಬತ್ತಳಿಕೆಯಲ್ಲಿದ್ದ ಕಡೆಯ ಅಸ್ತ್ರ. ಗುರಿ ತಲುಪಿತೋ ಶ್ರಮ ಸಾರ್ಥಕ, ಇಲ್ಲ ವ್ಯರ್ಥ. ಇದರಿಂದ ಚೇತರಿಸಿಕೊಳ್ಳಲಾರದಂತಹ ಆಘಾತ ತನ್ನಿಂದ ನಡೆದರೂ ನಡೆಯಬಹುದು ಅದೇನು ಆಶ್ಚರ್ಯವಲ್ಲ ಎಂಬಷ್ಟು ಲಕ್ಷ್ಮಿಯ ಮನ ದುರ್ಬಲವಾಗಿ ಹೋಗಿತ್ತು.

ಹೆಗಲಿಗೆ ವ್ಯಾನಿಟಿ ಬ್ಯಾಗ್ ಹಾಕಿಕೊಂಡು ಹೊರಟ ಲಕ್ಷ್ಮಿ, ಕಡೆಗೊಮ್ಮೆ ಅಸ್ತ್ರ ಬ್ಯಾಗ್‌ನಲ್ಲಿ ಇಟ್ಟಿರುವೆನೋ, ಇಲ್ಲವೋ ಎಂಬುದನ್ನು ಖಚಿತಪಡಿಸಿಕೊಂಡು "ಮಮ್ಮಿ ಹೋಗ್ಬರ್ತೀನಿ" ಎಂದು ಕಾಲೇಜಿಗೆ ಹೊರಟಳು.

ಪಂಜಾಬಿ ಉಡುಪು, ಕುದುರೆ ಬಾಲದ ತರಹದ ಚಲ್ಲೊಡೆದ ಕೂದಲಿಗೆ ರಬ್ಬರ್ ಬ್ಯಾಂಡ್ ಬಿಗಿದಿದ್ದಳು. ಎಡಭಾಗದ ಮನೆಯ ಮುಂದೆಯೆ ಹೋಗಬೇಕಾದುದರಿಂದ ಹಂಸದಂತೆ ನಡೆದು ಬಂದಳು. ದುಂಡು ದೇಹದ ಮಂಜಮ್ಮ ತಮ್ಮ ಪ್ರಕೃತಿಯ ತಾವು ಗಿಡಗಳ ಆರೈಕೆಯ ಕಡೆ ಗಮನವಿಟ್ಟಿದ್ದರು. ಇಲ್ಲದ ನಗು ತಂದುಕೊಂಡು, ಅವರ ಹೆಸರೂ ಸಹ ಗೊತ್ತಿಲ್ಲದ ಕಾರಣ "ರೀ ಏನ್ರಿ ತುಂಬಾ ಕೆಲಸ ಮಾಡ್ತ ಇದ್ದೀರಲ್ಲ?" ಎಂದು ತಾನೆ ಮಾತನಾಡಿಸಿದಳು ಲಕ್ಷ್ಮಿ. ಮಂಜಮ್ಮನ ಒಮ್ಮೆ ಮಾತನಾಡಿಸಿದಾಗ ಬಿಡಲಾರದಬಾಯಿ, ಇಂದು ತಾನೆ ತೆರೆದಿತ್ತು.

"ಹ್ಲ್ಲ... ಕಾಲೇಜಿಗೆ ಹೋರಟೇನಮ್ಮ?" ಎಂದು ಕೇಳಿದ ಮಂಜಮ್ಮ ತಮ್ಮ ಮಗ ಕಾಲೇಜಿಗೆ ಹೋಗದ ವಿಷಯವೇನಾದ್ರೂ ತಿಳಿಸುವರೇನೊ ಎಂದು ಕಾಯ್ದಳು. ಆಗರೆ ಮಂಜಮ್ಮ ಆಕಡೆ ಗಮನ ಕೊಡದಂತೆ, ಬೇರೊಂದು ಗಿಡಕ್ಕೆ ಬಕೇಟಿನಲ್ಲಿದ್ದ ನೀರು ಸುರಿದರು.

ಗೇಟಿನ ಬಳಿಯೆ ನಿಂತು "ಹೌದು ಕಾಲೇಜಿಗೆ ಹೋರಟಿದ್ದೆ. ರೀ ಅವತ್ತು ಒಂದು ದಿನ ಮಾತ್ರ ಮಲ್ಲಿಗೆ ಹೂ ಕೊಡ್ಲಿಕ್ಕೆ ಬಂದ್ರಿ ಮತ್ತೆ ಕೊಡ್ಲೇ ಇಲ್ಲ" ಅಪೇಕ್ಷಿಸಿ ಕೇಳಿದಳು.

"ಇನ್ನೇನಮ್ಮ? ಹೂ ಕೊಟ್ಟಿದ್ರೆ ಕಟ್ಕೋರು ಅನ್ನಿಸ್ಕೋಬೇಕು ನನಗೇ ನೊ ಹೆಣ್ಮಕ್ಳಿಲ್ಲ. ಅವತ್ತು ನಾನೇ ಮಲ್ಲಿಗೆ ದಂಡೆ ಕೊಡೋಕ್ಹೋದ್ರೆ ಕೆಕ್ಕರಿಸ್ಕೊಂಡು ನೋಡಿ ಮೂತಿ ತಿರುವಿ ಹೋಗೋದ? ಹೂವನ್ನ ಒಬ್ರಿಗೆ ಕೊಟ್ರೆ ಸುಮಂಗಲಿಯಾಗಿ ಸಾಯ್ತಾಳು ದಂತೆ. ಅದನ್ನ ಕಪ್ಪೊಸ್ಲತ್ತರ ನೋಡ" ಎಂದು ಲಕ್ಷ್ಮಿಯ ನಡೆಯನ್ನು ನೆನೆದು ಅವಳಂತೆಯೆ ಅನುಕರಿಸಿ ಆಪಾದಿಸಿದಳು.

ಕಾರ್ಯವಹಿಸಿ ಕತ್ತೆಕಾಲು ಹಿಡಿ ಎಂಬುದನ್ನು ಮನದಲ್ಲಿಟ್ಟುಕೊಂಡು ಧೈರ್ಯತಂದುಕೊಂಡು "ಲಕ್ಷ್ಮಿ ಅವತ್ತು ನಾನೇಕೆ ಬೇಡಾ ಅಂದ್ರೆ, ನನಗೆ ಹೂವಿನ ವಾಸನೆಯೊಂದ್ರೆ ತಲೆ ನೋವು ಬಂದ್ಬಿಡುತ್ತೆ. ಈಗ ಔಷಧಿ ತಗೊಂಡಿದ್ದೀನಿ. ಇನ್ಮೇಲಿಂದ ಯಾವ ಹೂವೇ ಆಗ್ಲಿ ಒಂದು ಪುಟ್ಟಿ ಬೇಕಾದ್ರೂ ಮುಟ್ಕೋಬಹುದು ನಾಳೆಯಿಂದ ಕೊಡ್ತೀರಿ ತಾನೆ ? " ಕೇಳಿದಳು.

" ದಿನಸೂ ಎಲ್ಲಾಗುತ್ತಮ್ಮ ? ವಾರಕ್ಕೆ ಒಂದೆರಡು ಪೂಜೆ ಇರೋದ್ರಿಂದ ಪೂಜೆಗೆ ಬೇಕು ಇನ್ನು ಉಳಿದ ದಿನ ನೋಡೋಣ " ಎಂದು ಒಪ್ಪಿಗೆ ಇತ್ತಳು.

ತಕ್ಷಣವೇ ಅಸ್ತ್ರ ಪ್ರಯೋಗಿಸದೆ, ಇನ್ನೊಂದಿಷ್ಟು ಅವರೊಂದಿಗೆ ಸಲಿಗೆ ಬೆಳೆಸಿಕೊಳ್ಳುವ ಇಚ್ಛೆಯಿಂದ "ಹ್ಞಾ ನಿಮ್ಮೆಸ್ರು ? " ಜ್ಞಾಪಿಸಿಕೊಂಡು ಕೇಳಿದಳು.

"ಮಂಜಮ್ಮ " ಅವರ ಪುಟ್ಟ ಬಾಯಿಯನ್ನು ಕಪೋಲಗಳು ರಭಸವಾಗಿ ಒತ್ತಿ ಹಿಡಿದವು.

"ಹಾಂ.. .ಮಂಜಮ್ಮನೋರೆ ನೀವು ಓದಿದ್ದೀರಾ?" ಸಲಿಗೆ ಬೆಳೆಸಿಕೊಳ್ಳುವತ್ತ ಗಮನ ಹರಿಸಿದಳು.

"ಬಿಡ್ತು ಅನ್ನು. ನನ್ನೆದೆ ಸೀಳಿದ್ರೂ ಒಂದಕ್ಷರ ಇಲ್ಲ. ನಾನೆಲ್ಲಾದ್ರೂ ಓದೋದು ಕಲ್ತಿದ್ರೆ ಮೈನಾ ಇಷ್ಟು ದಪ್ಪಾಗಾಗೋಕೆ ಬಿಡ್ತಿದ್ನಾ ? ಏನೂ ಗೊತ್ತಿಲ್ದೆ ಹಾಳಾದ ಜಡ್ಡು ಪದಾರ್ಥ ತಿಂದು ಪೂರಿ ಊದಿದಂಗೆ ಊದಿದ್ದೀನಿ " ಎಂದು ತಾವೇ ಹಾಸ್ಯ ಮಾಡಿಕೊಂಡರು.

ಅವರ ವಾಕ್‌ಚಾತುರ್ಯಕ್ಕೆ ಲಕ್ಷ್ಮಿಗೆ ನಗುಬಾರದೆ ಇರಲಿಲ್ಲ, ಗಲಕಿ ಅಲ್ಲಾಡಿಸಿದಂತೆ ನಕ್ಕು, ಒಮ್ಮೆಲೇ ಗಾಂಭೀರ್ಯ ಮುಖ ಭಾವ ಹೊಂದಿ, ಅವರಿಗೆ ಅಕ್ಷರ ಜ್ಞಾನ ಇಲ್ಲದಿರುವುದರಿಂದ ಹಿಗ್ಗಿ ಯಶಸ್ಸಿನ ಕಾರ್ಯಕ್ಕೆ ಕೈ ಹಾಕಿದಳು.

"ಮಂಜಮ್ಮನೋರೆ ನಿಮ್ಮ ಮಗ ಮನೆಯಲ್ಲಿ ಇಲ್ಲಾಂತಕಾಣ್ಸುತ್ತೆ" ಎಂದಳು ಲಕ್ಷ್ಮಿ.

"ಹೂಂ ಅವ್ರಪ್ಪನ ಜೊತೆಯಲ್ಲಿ ಕಾಲೇಜಿಗೆ ಹೋದ " ಎನ್ನುತ್ತಿದ್ದಂತೆ "ಹಾಗಾದ್ರೆ ತಗೊಳ್ಳಿ ಈ ನೋಟ್ಸ್ ನಿಮ್ಮ ಮಗ ಬಂದ ತಕ್ಷಣ ಕೊಡಿ. ಮತ್ತೆ ನಿಮ್ಮ ಮನೆಯವರಿಗೆ ಸಿಗುವ ಹಾಗೆ ಇಡ್ಬೇಡಿ " ಎಂದು ಎಚ್ಚರಿಸುತ್ತ ತೆಗೆದು ಕೊಟ್ಟಳು.

ಕೈಗೆ ತೆಗೆದುಕೊಂಡ ಮಂಜಮ್ಮ ನೋಟ್‌ಬುಕ್ ತಿರುಗಿಸಿ ಹಿಡಿದು ದಿಟ್ಟಿಸಿ ಅವರನ್ನು ನೋಡಿ, ಅವರ ಅಜ್ಞಾನಕ್ಕೆ ನಕ್ಕು 'ನಾನು ಬರ್ತೀನ್ರಿ' ಎಂದು ಹೊರಟಳು

ಮಗನ ಕೈಗೆ ಆ ನೋಟ್ಸ್ ಕೊಡುವವರೆಗೆ ಮಂಜಮ್ಮನವರಿಗೆ ಸಮಾಧಾನವೆ ಇರಲಿಲ್ಲ ಮಹಾ ಘನವಾದ ಕೆಲಸವೆಂದು ಪರಿಗಣಿಸಿದ ಅವರಿಗೆ ಮಗ ಎಷ್ಟೊತ್ತಿಗೆ

ಬಂದಾನೋ ಎಂದು ಕಾಯುತ್ತಿದ್ದಳು. ಅವನಿನ್ನೂ ಗೇಟು ತೆಗೆದುಕೊಂಡು ಬರುತ್ತಿದ್ದಂತೆ ಎದುರಿಗೆ ಏದುಸಿರು ಬಿಡುತ್ತ ಬಂದ ತಾಯಿ" ತಗೊಳ್ಳೋ ಪಾಪು, ನೀನುಬರೋದು ಕಾಯ್ದು ಕಾಯ್ದು ಸಾಕಾಯ್ತು " ಎಂದು ಕೈಗೆ ಕೊಟ್ಟಳು.

ಪ್ರಶ್ನಾರ್ಥಕ ನೋಟದಿಂದ ನೋಟ್‌ಬುಕ್ ನೋಡುತ್ತ "ಏನಮ್ಮ ಇದು? ಯಾರು ಕೊಟ್ಟಿದ್ದು?" ಗಂಟಲಿನಿಂದ ಕೇಳಿದ.

"ಆ ಮನೆ ಹುಡ್ಗಿ ನಿನ್ನಕೈಗೇ ಕೊಡ್ಬೇಕಂತ ಕೊಡ್ತು. ನಂಗಂತೂ ಕೈನಲ್ಲೇ ಇಟ್ಕೊಂಡು ಕಾಯ್ದು ಸಾಕಾಯ್ತು" ಎಂದು ಭಾರಿ ಜವಾಬ್ದಾರಿಯನ್ನು ಕಳೆದುಕೊಂಡವಳಂತೆ ನಿಟ್ಟುಸಿರು ಬಿಟ್ಟು ಹೊರಟರು.

ಕೈಯೊಳಗಿದ್ದ ಪುಸ್ತಕ ಅವನ ಕೈ ಸುಡತೊಡಗಿತು 'ತಾನೇ ಹೋಗಿ ಕೇಳಿದಾಗ ' ಕೊಡಕ್ಕಾಗಲ್ಲ ' ಎಂದು ಮುಲಾಜಿಲ್ಲದೆ ಎಂದವಳು, ಈಗ ಯಾಕೆ ಕೊಟ್ಟಳು ? ಮತ್ತೇನಾದ್ರೂ ಕುತಂತ್ರ ಮಾಡ್ತಿದ್ದಾಳೆಯೆ ? ' ಎಂದು ಸಂಶಯಿಸಿದರೂ ಅವನಲ್ಲಿ ಆಶ್ಚರ್ಯವೂ ಉದ್ಭವಿಸಿ, ಅದನ್ನು ತೆರೆದು ನೋಡುವ ಕುತೂಹಲವನ್ನು ಹೆಚ್ಚಿಸಿತು. ' ಬಹುಶಃ ನಾನು ಕ್ಲಾಸಿಗೆ ಹೋಗದೆ ಇರುವುದನ್ನು ಗಮನಿಸಿ, ಏನೋ ಬಡಪಾಯಿ ಬರೆದುಕೊಂಡು ಓದಿ ಉದ್ಧಾರವಾಗಲಿ ಎಂಬ ಕರುಣೆಯಿಂದಲೇನಾದ್ರೂ ಕೊಟ್ಟಿರುವಳೋ ? ನಾನಾ ತರಹದ ಆಲೋಚನೆಗಳೆಲ್ಲವನ್ನೂ ಮುಕ್ತಾಯಗೊಳಿಸಿ ಮೇಲಿನ ಪುಟವನ್ನು ಹೆಬ್ಬೆರಳಿನಿಂದ ಎತ್ತಿದ. ಮೊದಲ ಪುಟದಲ್ಲಿ ಅವನದೆ ಹೆಸರು, ತರಗತಿ, ವಿಭಾಗ ಎಲ್ಲವನ್ನು ಬಹಳ ಶ್ರಮ ಪಟ್ಟು ಬಣ್ಣ ಹಾಕಿ ಬರೆದಿದ್ದಳು.

ಕುತೂಹಲ ಹಿಮ್ಮಡಿಯಾಗಿ ಇನ್ನೊಂದು ಹಾಳೆ ತಿರುಗಿಸಿದ. ಎಡ ಮಗ್ಗುಲಲ್ಲಿ ಪೂರ್ತಿ " ಕ್ಷಮಿಸು, ಕ್ಷಮಿಸು " ಎಂದೂ ಬಲಭಾಗದಲ್ಲಿ" ದಯವಿಟ್ಟು ಪ್ರೀತಿಸು"ಎಂದು ಬರೆದಿದ್ದಳು. ಇದೇ ರೀತಿ ಉಳಿದ ಎಲ್ಲಾ ಹಾಳೆಗಳಲ್ಲೂ ಪುನರಾವರ್ತನೆಯಾಗುವ ಎರಡೇ ಪದಗಳು. ಮುಖ ಹಿಗ್ಗಿತು ಕಣ್ಣು ಹೊಳೆದವು. ಪಟಪಟನೆ ಹಾಳೆ ತಿರುಗಿಸಿದ, ಅವೇ ಪದಗಳು.

ತಾನು ಮೆಚ್ಚಿದ ಲಕ್ಷ್ಮಿ, ತನ್ನನ್ನು ತಿರಸ್ಕರಿಸಿದವಳು ಇಂದು ತಾನೇ ಒಲಿದಿದ್ದಾಳೆ ಎಂದ ಮೇಲೆ ಅದಕ್ಕಿಂತ ಸಂತೋಷದ ಸಂಗತಿ ಜಗತ್ತಿನಲ್ಲೇ ಅವನಿಗಿರುವಂತಿರಲಿಲ್ಲ. ಕಿವಿಯಲ್ಲಿ ಭೋರ್ಗರೆಯುವ ಮಧುರ ಗಾನ, ಕಣ್ಣಿಗೆ ಕಾಣುವ ಪ್ರತಿಯೊಂದು ವಸ್ತುವಿನಲ್ಲೂ ಎಂದೂ ಕಾಣದ ವರ್ಣನಾತೀತ ಸೌಂದರ್ಯ, ಎಲ್ಲೋ ತೇಲುತ್ತಿರುವಂತೆಯೆ ಭಾಸ. ಸಂತೋಷದಿಂದ ಪುಟ ತಿರುಗಿಸಿ ಕಡೆಯ ಪುಟಕ್ಕೆ ಬಂದ. ಕೊನೆಯಲ್ಲಿ ಕಿರು ಒಕ್ಕಣಿಕೆ ಅವನ ಗಮನ ಸೆಳೆಯಿತು.

" ನನ್ನೊಲವಿನ ರಾಜುಗೆ ಕ್ಷಮೆ ಕೋರಿ, ಪ್ರೀತಿ ಬೇಡುವ ಲಕ್ಷ್ಮಿ ನಿನ್ನ ಮನಸ್ಸನ್ನು ಅರಿಯದೆ ದುಡುಕಿದೆ. ಅದರ ಫಲವಾಗಿ ನೋವು ಅನುಭವಿಸುತ್ತಿರುವೆ. ನನ್ನಿಂದಾದ ಅಪಮಾನಕ್ಕೆ ಕ್ಷಮೆಯ ಸಾಕಾರ ಮೂರ್ತಿಯಾದ ನಿನ್ನಲ್ಲಿ ಕ್ಷಮೆ ಇದೆಯೆಂದು ಭಾವಿಸುತ್ತೇನೆ. ನಿನ್ನ ಮೆಚ್ಚುಗೆಗೆ ನೇರ ಪತ್ರ ಇದು. ಸಂಜೆ ಐದೂವರೆಗೆ ನೀನು ಮನೆಯ ಹಿಂಭಾಗದಲ್ಲಿ ಮುಖ ತೋರಿದರೆ ಸಾಕು, ಅದೇ ನಿನ್ನ ಒಪ್ಪಿಗೆಯೆಂದು ನಂಬುತ್ತೇನೆ. ನಿನ್ನನ್ನು ಮೊದಲಿನಿಂದಲೂ ಮೆಚ್ಚಿದ್ದೆನಾದರೂ ಸಹಜ ಹೆಣ್ಣಿನ ಸಹನೆಯನ್ನು ಅಹಂಕಾರದ ರೀತಿಯಲ್ಲಿ ತೋರಿದೆ ಅಪ್ರಯತ್ನವಾಗಿ ನನ್ನ ಮನದಲ್ಲಿ ಮನೆ ಮಾಡುತಿದ್ದ ನಿನ್ನನ್ನ ದ್ವೇಷದಿಂದ ಹೃದಯದಿಂದ ಕೀಳಲು ಪ್ರಯತ್ನಿಸಿದೆ. ಪ್ರಯತ್ನಿಸಿದಂತೆಲ್ಲ ಬಲವಾಗಿ ನಲ್ಮೆಯಿಂದ ಬೇರೂರಿದ ಜಾಣ ನೀನು ಆಗಿದ್ದೆಲ್ಲ ಮರೆತು ಪ್ರೀತಿಸು 'ಐ ಲವ್ ಯೂ, ಪ್ಲೀಸ್ ಯು ಲವ್ ಮೀ '

ಇಂತಿ ನಿನ್ನೊಲವಿನ ಲಕ್ಷ್ಮಿ.

ಪತ್ರ ಓದಿ ಮುಗಿಸಿದ ರಾಜು ತನಗರಿವಿಲ್ಲದಂತೆ ಆನಂದಾತಿರೇಖದಿಂದ ಮೇಲಕ್ಕೆ ನೆಗೆದು "ಯಾ....ಹೂ....." ಕೂಗು ಹಾಕಿದ. ಕುಣಿದು ಕುಪ್ಪಳಿಸಿದ. ವಿಚಿತ್ರ ಬಲದ ಪ್ರವೇಶ ದೇಹದಲ್ಲುಂಟಾಗಿತ್ತು. ಮನೆಯ ಮೂಲೆ ಮೂಲೆಯಿಂದಲೂ ಸಂತೋಷದ ಕೂಗು ಪ್ರತಿಧ್ವನಿಸಿತು.

ಗಾಬರಿಯಿಂದ ಓಡೋಡಿ ಬಂದ ಮಂಜಮ್ಮ "ಪಾಪೂ ಯಾಕೋ? ಏನಾಯ್ತೋ.....?" ಮಗನಿಗೆ ಏನೋ ಆಗ್ಬಿಟ್ಟಿದೆಯೆಂದು ಅಳುವ ದನಿಯಲ್ಲಿ ಕೇಳಿದರು.

ಕುಣಿದಾಟ ಕಡಿಮೆ ಮಾಡಿ ಮಾಸದ ಹಿಗ್ಗಿನಿಂದಲೇ "ದೊಡ್ಡವರಾಗಿ ಇಂತಹ ವಿಷಯದಲ್ಲೆಲ್ಲ ತಲೆ ಹಾಕ್ಬಾರ್ದು ಕಣಮ್ಮ. ಅದು ದೊಡ್ಡೋರ ದಡ್ಡತನ" ಎಂದು ಸಮಾಚಾರ ಮರೆ ಮಾಚಿದ.

"ಏನೋ ಅದು?" ಗಾಬರಿ ಅಡಗಿಸಿಕೊಂಡು ಸಮಾಧಾನದ ಉಸಿರಿನಿಂದ ಕೇಳಿದರು.

''ಇದು ಪಾಠದ ವಿಷಯ ನಿನಗೆ ಗೊತ್ತಾಗಲ್ಲ ಬಿಡಮ್ಮ"

''ಹೇಳೋ ಪಾಪು. ನನಗೆ ಓದ್ಲಿಕ್ಕೆ ಬರೊಲ್ಲಾಂತ ನೀನೊಬ್ನೆ ಓದಿ ನಗ್ತಿಯಲ್ಲೊ...... ಕೇಳಿ ನಾನು ನಗ್ತಿನೀ. ಓದೋದೆ ಒಬ್ರನ್ನ ನಗಿಸಿ, ಸುಖ ಸಂತೋಷ ದಲಿಡ್ಲಿಕ್ಕೆ" ಎಂದಳು.

"ಹು ಹೇಳ್ತೀನಿ ಕೇಳು. ಲವ್ ಅಂದ್ರೆ ಗೊತ್ತಾ?' ಕೇಳಿದ.

''ಇಲ್ಲ" ಮುಗ್ಧತೆಯಿಂದ ನುಡಿದಳು.

"ನಿನಗೆ ಗೊತ್ತಿಲ್ದೆ ಇರೋದು ನನ್ನ ಪುಣ್ಯ. ಈಗ ಓದೋದರ ಜೊತೆಗೆ ಅದ್ನೂ ಮಾಡ್ತಿನಿ" ಎಂದು ತಮಾಷೆಯಾಗಿ ನಗುತ್ತ ಮಹಡಿಗೆ ಹಾರಿದ.



ಲಕ್ಷ್ಮಿ ಸರಿಯಾಗಿ ಐದೂವರೆಗೆ ಎಂದು ಸೂಚಿಸಿದ್ದರಿಂದ ಐದು ಗಂಟೆಯಾಗುವ ವರೆಗೆ ಹೇಗೊ ಕಾಲ ತಳ್ಳಿದವನಿಗೆ, ಐದು ಗಂಟೆಯಾಗುತ್ತಿದ್ದಂತೆ ಗಡಿಯಾರದ ಮುಳ್ಳು ಹೂತು ಹೋದಂತೆ ತೋರಿದವು ಗಡಿಬಿಡಿಯಿಂದ ಅತ್ತ ಇತ್ತ ಓಡಾಡುತ್ತಾ ಆಗಾಗ ಹಿಂಬಾಗಿಲು ತೆಗೆದು ನೋಡುತ್ತಿದ್ದ. ಅಸಹನೀಯ ವೇಳೆ ಸಾಗದೆ ಅವನಲ್ಲಿ ಅದೆಷ್ಟೋ ರೋಷವನ್ನು ತಂದಿತು. ಇಂತಹುದೆಲ್ಲವನ್ನು ಲಕ್ಷ್ಮಿಯ ಸವಿ ನೆನಪೊಂದೆ ತಣ್ಣಗಾಗಿಸುತ್ತಿತ್ತು. ಇದೂವರೆಗೆ ತನ್ನ ಮನದಲ್ಲಿ, ಹೃದಯದಲ್ಲಿ ಮನೆ ಮಾಡಿದ್ದ ಲಕ್ಷ್ಮಿಯ ಉರಿದು ಬೀಳುವ ದ್ವೇಷದ ಮುಖವನ್ನೆ ನೋಡಿದ್ದವನು: ಇಂದು ಪ್ರೇಮದ

ಮೂರ್ತಿಯಾಗಿ, ಪ್ರೀತಿಯ ಚೆಲುವೆಯಾಗಿ ವದನ ತೋರುವ ಮನದನ್ನೆಗಾಗಿ ಅವನ ಹೃದಯ ತವಕದಿಂದ ಆತೊರೆಯುತ್ತಿತ್ತು. 'ಈಗ ಅವ್ಳು ಇನ್ನೆಷ್ಟು ಚನ್ನಾಗಿ ಕಾಣ್ತಾಳೋ......ಏನೋ?' ಎಂದುಕೊಂಡ.

ಹತ್ತು ನಿಮಿಷವಿರುವಂತೆ ಮನೆಯ ಹಿಂಬದಿಗೆ ಬಂದು ಕೈ ಕಟ್ಟಿ, ಒರಗಿ ನಿಂತು, ಆ ಮನೆಯ ಬಾಗಿಲ ಮೇಲೆ ದೃಷ್ಟಿನೆಟ್ಟು ಅವಳ ಬರುವನ್ನೇ ಕಾಯತೊಡಗಿದ.

ಇತ್ತ ಲಕ್ಷ್ಮಿ 'ತಾನು ಪತ್ರ ಬರೆದವಳಾದ್ದರಿಂದ ತಿಳಿಸಿದ ಸಮಯಕ್ಕಿಂತ ಐದು ನಿಮಿಷ ಮೊದಲೇ ಹೋಗುವುದು ಒಳಿತೆಂದು' ಭಾವಿಸಿ, ಬೇಗನೆ ಮ್ಯಾಕ್ಸಿ ಧರಿಸಿ, ಎರಡು ಜಡೆಗಳನ್ನು ಮಡಿಚಿ ಕಟ್ಟಿಕೊಂಡು ಐದು ನಿಮಿಷಗಳಿರುವಂತೆ ಮನೆಯಲ್ಲಿದ್ದ ತಾಯಿಗೆ ಅಂಜುತ್ತಲೇ ತನ್ನ ರೂಮ್ ಬಿಟ್ಟಳು. ತುಂಬು ಭಯ ಅವಳನ್ನು ಹಿಮ್ಮೆಟ್ಟಿಸಲು ಯತ್ನಿಸಿತಾದರೂ ಪ್ರೇಮ ಜ್ಯೋತಿಯ ಮುಂದೆ ಸೋಲೊಪ್ಪಿತು. ನಾಡಿ ಬಡಿತ ಹೆಚ್ಚಿ, ಕೈಕಾಲಿನಲ್ಲಿ ಶಕ್ತಿ ಉಡುಗಿ ಕಂಪನ ಉಂಟಾಯಿತು. ನಿಧಾನವಾಗಿ ಸದ್ದಾಗದಂತೆ ಬೋಲ್ಟ್ ಸರಿಸಿ ಹೊರ ಬಂದು ಬಾಗಿಲು ಮುಚ್ಚಿಕೊಂಡಳು.

ರಾಜನಿಗೆ ಮತ್ತೆ ಕುಣಿದು ಕುಪ್ಪಳಿಸುವ ತವಕ, ಆದರೂ ತನ್ನನ್ನು ನಿಯಂತ್ರಿಸಿಕೊಂಡು ಮುಖ ಅರಳಿಸಿ "ಹಲ್ಲೋ" ಎಂದು ಕೈ ಬೀಸಿ ಜಾಗ ಕದಲಿಸಿದ.

ಎದೆಯಲ್ಲಿ ರಾಗ, ಮುಖದಲ್ಲಿ ಬಿರಿದ ತಾವರೆಯ ರಂಗು ತುಂಬಿಕೊಂಡು ತುಟಿ ಪಿಟಿಕ್ ಎನ್ನದೆ, ಸಮೀಪ ಬರುವಂತೆ ಕೈ ಸನ್ನೆ ಮಾಡಿ, ಎರಡೂ ಮನೆಗಳ ಮಧ್ಯೆಯಲ್ಲಿದ್ದ ಕಾಂಪೌಂಡ್ ಕಡೆ ನಡೆದಳು. ರಾಜೂ ಸಹ ಉತ್ಸಾಹದ ಚಿಲುಮೆಯಾಗಿ ಹತ್ತಿರ ಬರುತ್ತಿದ್ದಂತೆ "ರಾಜು ಆವತ್ತು ಲೆಟರ್ ಬಯ್ದರಲ್ಲ ಬೇಸರ ಮಾಡ್ಕೊಂಡಾ ?" ಗದ್ಗದಿತಳಾಗಿ ಕೇಳಿದಳು.

" ಹಾಗಂತ ಯಾರೇಳಿದ್ದು ? " ಮಾತನಾಡಲು ಬೇರೆ ಪದವಿಲ್ಲದೆ ಸಮಾಧಾನಗೊಳಿಸುವಂತೆ ಮೃದುವಾಗಿ ಮಾತು ಸೇರಿಸಿದ.

' ನಿನ್ನ ನೋಡ್ದಾಗ ಹಾಗನ್ನಿಸ್ತು ಅಷ್ಟೆ ಹಾಂ ನಾಳೆ ಲಕ್ಚರಕ್ಕೆ

ಹೋಗೋಣ್ವಾ ? ' ಯಾರಾದ್ರೂ ನೋಡಿಯಾರು ಎಂಬ ಭಯದಿಂದ ಅವಸರದಿಂದಲೂ ಕೇಳಿದಳು.

ರಾಜುನಿಗೆ ಸಂಶಯ ತಲೆ ಹೊಕ್ಕಿತು " ಯಾಕೆ ಇನ್ನೊಂದ್ಸಾರಿ ಬಯ್ಯಿಸೋ ಆಸೆನಾ ?" ಬೇಡವೆಂದರೂ ಬಾಯಿಂದ ಮಾತು ಹೊರ ಬಿತ್ತು.

" ಅಯ್ಯೋ ಹಾಗಲ್ಲ ರಾಜು. ನೀನಿನ್ನೂ ನನ್ನ ಅರ್ಥ ಮಾಡ್ಕೊಂಡೇ ಇಲ್ಲ. ನಾನು ಅವರೆದುರಿಗೆ ನೀನು ಮಾಡಿದ್ದು ಸರಿ. ನಾನೂ ರಾಜುನ ಪ್ರೀತಿಸುತ್ತಿದ್ದೀನಿ ಅಂತಾ ಬೇಕಾದ್ರೂ ಹೇಳ್ತೀನಿ. ನೀನೇಗೆ ನನ್ನತ್ರ ಕ್ಷಮೆ ಕೇಳಿದೆಯೋ.. ನಾನೂ ಹಾಗೆ, ನಿನಗಾದ ಅಪಮಾನಕ್ಕೆ ಕ್ಷಮೆ ಕೇಳ್ತೀನಿ. ನಾವಿಬ್ರೂ ಒಬ್ಬರನ್ನೊಬ್ಬರು ಪ್ರೀತಿಸ್ತಿದ್ದೀವಿ ಸಾರ್, ಅಂತಾ ಬೇಕಾದ್ರೂ ಹೇಳ್ತೀನಿ. ನೀನಂತೂ ನನ್ನ ಪ್ರೀತಿಸುತ್ತಿದ್ದೀಯಾ ತಾನೇ ?" ಎಂದು ದೀನಳಾಗಿ ಕೇಳಿದಳು. ಆ ವಿಶಾಲ ಕಂಗಳು ನೀರಿನಿಂದ ಸುತ್ತುವರಿಯಲ್ಪಟ್ಟಿವು.

ಕರಗಿ ಹೋದ ರಾಜು " ಛೆ ಆ ಮೇಷ್ಟ್ರತ್ರ ಹೋದ್ರೆ ನಾವೇ ಮೂರ್ಖರು ಆಗ್ತೀವಿ. ಅವೆಲ್ಲ ಬೇಡ. ನಾನು ನಿನ್ನ ಬಿಟ್ಟು ಬೇರೆ ಯಾರನ್ನೂ ಈ ಜನ್ಮದಲ್ಲಿ ಪ್ರೀತಿಸೊಲ್ಲ. ಇಷ್ಟಕ್ಕೆಲ್ಲ ಕಣ್ಣೀರು ಏಕೆ? ನೀನು ಯಾವಾಗಲೂ ನಗ್ತ ಇರ್ಬೇಕು ಲಕ್ಷ್ಮಿ ಅದೇ ನನ್ನಿಷ್ಟ. ಎಲ್ಲಿ " ಎನ್ನುತ್ತ ಕಪೋಲದ ಮೇಲೆ ಜಾರಿದ ನೀರನ್ನು ಒರೆಸಿದ

' ನಾನು ಬರ್ತೀನಿ. ಯಾರಾದ್ರೂ ಬಂದ್ರೆ ಕಷ್ಟ, " ಎಂದು ಉನ್ಮಾದದಿಂದ ನುಡಿಯುತ್ತ ಲಕ್ಷ್ಮಿ ಹಿಂದೆ ಸರಿಯುತ್ತಿದ್ದಂತೆ " ಅರೆ ಇಷ್ಟೇಕೆ ಹೆದರ್ತೀಯ ಲಕ್ಷ್ಮಿ? ಅಲ್ನೋಡು ಯಾರೂ ಬರ್ದಂಗೆ ಬಾಗ್ಲಿಗೆ " ಎಂದು ತಮ್ಮ ಮನೆಯ ಬಾಗಿಲ ಕಡೆ ಕೈ ತೋರಿದ. ಅತ್ತ ನೋಟ ಹರಿಸಿದಳು ಲಕ್ಷ್ಮಿ. ಮುಂಜಾಗ್ರತೆಯಿಂದ ಬಾಗಿಲಿಗೆ ಚಿಲಕ ಹಾಕಿ ಕಡ್ಡಿ ಸಿಕ್ಕಿಸಿ ಬಾಗಿಲು ತೆಗೆಯಲು ಬಾರದಂತೆ ಮಾಡಿದ್ದ.

ಬಾಯಿಬಿಟ್ಟು, ಕಣ್ಣರಳಿಸಿ ಕಿಲಕಿಲ ನಕ್ಕ ಲಕ್ಷ್ಮಿ "ನೀನು ಬಹಳ ಬುದ್ಧಿವಂತ ಆದ್ರೆ ನಾನು ಹಾಗೆ ಮಾಡೇಇಲ್ಲ. ಬರ್ತಿನಿ, ನಾಳೆ ಕಾಲೇಜಿಗೆ ಬರ್ತೀಯಲ್ಲ. ? ಎನ್ನುತ್ತ ಒಂದೆಜ್ಜೆ ಹಿಂದಿಟ್ಟಳು.

"ನೀನು ಎಲ್ಲಿರ್‍ತಿಯೋ ಅದೇ ಕಾಲೇಜು. ಇನ್ಮೇಲಿಂದ ಒಂದು ದಿನ ತಪ್ಪದಾಗೆ ಕಾಲೇಜಿಗೆ ಬರ್‍ತೀನಿ" ಎಂದ.

ಇಲ್ಲದ ಲವಲವಿಕೆ ಎಲ್ಲಿಂದಲೋ ಅವಳ ಮೈಯಲ್ಲಿ ಸೇರಿಕೊಂಡಿತು. 'ಬೈ . . ಬೈ . . ' ಹೇಳಿ ಹಿಂದಕ್ಕೆ ಓಡಿದಳು. ರಾಜು ವಿಜಯದ ನಗೆಯಿಂದ ತನ್ನನ್ನು ಮರೆತು ಅಲ್ಲೇ ನಿಂತು ಲಕ್ಷ್ಮಿಯೊಂದಿಗೆ ಸ್ವೇಚ್ಛೆಯಾಗಿ ವಿಹರಿಸುವ ಕನಸು ಕಾಣತೊಡಗಿದ.

೬

ನವೀನ ಮಾದರಿಯಲ್ಲಿ ದೊಡ್ಡ ಬಂಗಲೆಯ ಕಟ್ಟಡ ಕೆಲವೇ ದಿನಗಳಿಂದ ಏಳಲಿಕ್ಕೆ ಆರಂಭವಾದದ್ದು, ಆಶ್ಚರ್ಯಕರ ರೀತಿಯಲ್ಲಿ, ನೋಡಿದವರು ಮೂಗಿನ ಮೇಲೆ ಬೆರಳಿಡುವಂತೆ ನಿರ್ಮಾಣವಾಗುತ್ತಿತ್ತು. ಪ್ರಭಾವಿ ರಾಜಕಾರಣಿಯ ಕಾರ್ಯವೆಂದ ಮೇಲೆ ತಡವಾಗುವುದುಂಟೆ ? ಅವಶ್ಯಕ ಕಬ್ಬಿಣ, ಸಿಮೆಂಟ್ ಹೇರಳವಾಗಿ ಬಾಗಿಲಿಗೆ ಬಂದು ತಾನೆ ಬೀಳುತ್ತಿತ್ತು. ವಿಚಿತ್ರ ರೀತಿಯಲ್ಲಿ ಕಟ್ಟಲಾಗುತ್ತಿದ್ದ ಕಟ್ಟಡದ ಎರಡನೇ ಅಂತಸ್ತಿಗೆ, ಕೆಳಗೆ ಕಲೆಸಿದ ಮಣ್ಣಿ, ಇಟ್ಟಿಗೆಯ ಬಾಂಡ್ಲಿಗಳು ಸಾಲಾಗಿ ನಿಂತವರ ಕೈ ಮೇಲೆ ಯಾಂತ್ರಿಕವಾಗಿ ಸಾಗುತ್ತಿದ್ದವು. ಆಗಾಗ ಅಲ್ಲಿಗೆ ಬಂದು ಹೋಗುತ್ತಿದ್ದ ಪುರುಷೋತ್ತಮನಿಗೆ ಈ ದಿನ ಕಂಟ್ರ್ಯಾಕ್ಟರ್ ಬರದ ಕಾರಣ ಕೆಲಸದ ಜವಾಬ್ದಾರಿ ತಾನೆ ಹೊತ್ತಿದ್ದ.ಮ ಚಿನಂತೆ ಸ್ಕೂಟರಿನ ಮೇಲೆ ಬಂದವನು, ಸ್ಟ್ಯಾಂಡ್ ಹಾಕಿ, ಮೂಗರಳಿಸಿ, ಸಾಕಷ್ಟು ಸಿಡುಕುತನವನ್ನು ಮುಖದಲ್ಲಿ ಎಳೆದು ತಂದು ಅತ್ತ ಇತ್ತ ನೋಡುತ್ತ ನಡೆ ಯುತ್ತಿದ್ದ, ಅವನನ್ನು ನೋಡಿದ ಕೆಲವರು ಕಚ್ಚಿದ ಕೊಳೆ ಬೀಡಿಯನ್ನು ಹಾಗೆ ಬಾಯಿ ಸಡಿಲಿಸಿ ನೆಲಕ್ಕೆ ಬೀಳುತ್ತಿದ್ದಂತೆ ಕಾಲಿನಿಂದ ಹೊಸಕಿದರು.

ಪುರುಷೋತ್ತಮ ಕಪ್ಪು ಗ್ಲಾಸಿನ ಹಿಂದಿನಿಂದ ಕೂಲಿ ಕೆಲಸಗಿತ್ತಿಯರ ತೆರೆದ

ಕೊರಳು, ಉಬ್ಬಿದ ವಕ್ಷ, ಬೊಜ್ಜಿನ ಸೋಂಕಿಲ್ಲದ ನಡು, ಕೈಬದಲಾವಣೆಗೆ ಕುಪ್ಪಳಿಸುವ ಹಿಂಭಾಗ, ತೊನೆಯುವ ದೇಹವನ್ನೆ ತೀಕ್ಷ್ಣವಾಗಿ ದಿಟ್ಟಿಸುತ್ತಿದ್ದ. ಅವನ ಮನದ ಆಳ ಅರಿಯಲಾರದ ಕೆಲಸಗಾರ ಹೆಂಗಳೆಯರು, " ಯಾಕೋ ನೋಡ್ತಾನೆ? ನಾವು ಕೆಲ್ಸ ನಿಧಾನ ಮಾಡ್ತೀವಿ ಎಂದೇ ? ' ಎಂದು ಭಾವಿಸಿ ಕೈ ಚುರುಕುಗೊಳಿಸಿದರು.

ಯಜಮಾನರ ಮಗನೆಂದ ಮೇಲೆ ಎಲ್ಲರೂ ತನ್ನ ಆಜ್ಞೆ ಪಾಲಕರೇ ಎಂಬ ಅಹಂಕಾರದಿಂದ ಕಬ್ಬಿಣ ತುಂಡರಿಸುತ್ತಿದ್ದವನ ಬಳಿ ಹೋಗಿ, " ಏಯ್ ಕಬ್ಬಿಣ ಅಂಗ್ನಾ ತುಂಡ್ಮಾಡೋದು ? ಸದ್ದಿಲ್ದಾಗೆ ಮಾಡ್ಲಿಕ್ಕೆ ಬರಲ್ಲೇನು ? ' ಎಂದ.

ಗೆರೆ ಗುರುತು ಹಾಕಿಕೊಟ್ಟು ಅದನ್ನು ಸರಿಯಾದ ಜಾಗಕ್ಕೆ ತುಂಡರಿಸುವಂತೆ ಚಾಣ ಹಿಡಿದು ಕುಳಿತ ಮಧ್ಯ ವಯಸ್ಸಿನವನು, ಸಾಹುಕಾರನ ಮಾತಿಗೆ ಬೆಲೆಕೊಟ್ಟು ಕೆಲಸ ನಿಲ್ಲಿಸಿ ತಲೆ ಎತ್ತಿ " ಅಂಗೆ ಎಂಗ್ ಸ್ವಾಮಿ ಆಕುತೆ ? ಸದ್ದಿಲ್ದಂಗೆ ಮಾಡಾಕೆ ಇದೇನು ಬಾಳೆಹಣ್ಣು ಅನ್‌ಕಂಡ್ರಾ ?' ಎಂದವನೆ ಸರಳಿನ ಮೇಲೆ ಚಾಣ ಇಟ್ಟು ಕೆಲಸಗಾರನಿಗೆ "ಲೋ ಏನ್ಲ ಅಂಗೇ ನಿಂತ್ಕಂಡ್ರೆ ಮುಗೀತು ಜಡಿಯಲೇ . ' ಎನ್ನುತ್ತಿದ್ದಂತೆ ಹದಿನಾಲ್ಕು ವರ್ಷದ ಹುಡುಗ " ಉಸ್.... ಉಸ್ . " ಎನ್ನುತ್ತ ಸುತ್ತಿಗೆಯಿಂದ ಚಾಣದ ನೆತ್ತಿಯ ಮೇಲೆ ಬಾರಿಸತೊಡಗಿದ.

ಇಂತಹ ಕೆಲ್ಸದಲ್ಲೆಲ್ಲ ಬಾಯಿ ಮುಚ್ಕೊಂಡಿರೋದು ಲೇಸೆಂದುಕೊಂಡ ಪುರ್ರುಷೋತ್ತಮನು ಅಲ್ಲಿಂದ ಕಾಲ್ಕಿತ್ತ. ಪುನಃ ಹಳೇ ಜಾಗಕ್ಕೆ ಹಿಂತಿರುಗಿ ಬಂದ. ತುಂಬು ಯೌವನಸ್ಥೆ, ಕಾಲಿ ಕೊರಳು, ಹಣೆ ಇರುವವಳ ಮುಂದೆ ನಿಂತು ಸಿಗರೇಟ್ ಹಚ್ಚಿದ. ಆವೇಶದಿಂದ ಮೇಲೆ ಮೇಲೆ ದಮ್ಮೆಳೆದು ಹೊಗೆ ಬಿಡುತ್ತ, ಸುಟ್ಟು ಸಣ್ಣಗಾದ ಸಿಗರೇಟ್ ತುಂಡನ್ನು ನೆಲಕ್ಕಾಕಿ ಬೂಟ್ ಕಾಲಿನಿಂದ ತಿಕ್ಕಿದ.

ನೇರವಾಗಿ ಆ ಹೆಣ್ಣಿ ಎದುರಿಗೆ ನಿಂತು " ನೀನು ಸಿದ್ದಪ್ಪನ ಹೆಂಡ್ತಿಯಲ್ಲ ? ಅದೇ ಬಿಲ್ಡಿಂಗ್ ಮೇಲಿಂದ ಬಿದ್ದು ಸತ್ನಲ್ಲ ?" ಮೂರು ತಿಂಗಳ ಹಿಂದೆ ನಡೆದದ್ದನ್ನು ಹೇಗೋ ಜ್ಞಾಪಿಸಿಕೊಂಡು ಅವಳಲ್ಲಿ ಮರಳಿ ದುಃಖಉಂಟು ಮಾಡುವಂತೆ ಮೆಲುದನಿಯಲ್ಲಿ

ಕೇಳಿದ.

ಹೌದೆಂದು ತಲೆ ಹಾಕಿದ ಹರೆಯದ ಹೆಣ್ಣಿನ ಕಣ್ಣಿಂದ ನೀರು ತುಳುಕಿತು. ಅಷ್ಟರಲ್ಲಿ ಮೇಸ್ತ್ರಿ ಅಲ್ಲಿಗೆ ಧಾವಿಸಿದ್ದರಿಂದ ಆ ಕಡೆ ತಿರುಗಿದ ಪುರುಷೋತ್ತಮ. " ಏನ್ರಿ ಮೇಸ್ತ್ರಿ ? ನಮ್ಮಪ್ಪ ಹೇಳೋದು ಇನ್ನ ಎರಡು ತಿಂಗ್ಳಲ್ಲಿ ಬಿಲ್ಡಿಂಗಿನ ಕೆಲ್ಸ ಏನೂ ಉಳಿಬಾರ್ದಂತೆ " ಎಂದ.

" ಎರಡು ತಿಂಗ್ಳೆ ? ಸಾಕು ಬಿಡಿ ಸ್ವಾಮಿ. ಕಾಂಪೌಂಡ್ ಕೆಲ್ಸ ಸುರುವಾದ್ರೆ ಸಿಮೆಂಟ್ ಮಾಡಿದ್ಮೇಲೆ ಎಂಟೆತ್ತು ದಿನನಾದ್ರೂ ತಣ್ಣೀರು ಹಾಕ್ಬೇಕು,ಇಲ್ದಿದ್ರೆ ಬಿರುಕು ಬಿಡುತ್ತೆ. ಆಮೇಲೆ ಸುಣ್ಣ ಬಣ್ಣ ಸ್ವಲ್ಪ ಜಾಸ್ತಿ ದಿನಾನೇ ಬೇಕಾಗುತ್ತೆ ಸ್ವಾಮಿ " ಎಂದ ವ್ಯವಹಾರ ಚತುರ.

" ಸರಿ ಬಿಡು ನೀವು ಮಾಡುವ ಕೆಲ್ಸನೇ ಹೀಗೆ ಹಾ.... ಮೇಸ್ತ್ರಿ ಈಯಮ್ಮನ ಹೆಸ್ರೇನು ? " ಕೇಳಿದ.

" ಹೆಸ್ರು ಕಟ್ಕೊಂಡು ಏನ್ಮಾಡ್ತಿರಿ ಬಿಡಿ ಸ್ವಾಮಿ. ಆಯಮ್ಮನ ಕಷ್ಟ ಏನ್ ಕೇಳ್ತೀರಿ ? ಮದ್ವೆ ಮಾಡ್ಕೊಂಡು ಎರಡು ತಿಂಗ್ಳಿಗೆ ಗಂಡ ಬಿಲ್ಡಿಂಗ್ ಮೇಲಿಂದ ಬಿದ್ದು ಸತ್ತೋದ. ನನಗೆ ಬಲಗೈ ಇದ್ದಂಗಿದ್ದ ಸ್ವಾಮಿ. ಅವ್ನ ಚಿತ್ರ ಬಿಡಿಸ್ದಂಗೆ ಈಗ ನಮ್ ಗ್ರೂಪ್‌ನಾಗೇ ಯಾರೂ ಬಿಡ್ಸಲ್ಲ ಸ್ವಾಮಿ .. " ಎಂದು ಕೆಲಸದಲ್ಲಿ ತಲ್ಲೀನಳಾದ ಆ ಹೆಣ್ಣಿಗೆ ಮಾತು ಕೇಳದಂತೆ ಮೆಲುದನಿಯಲ್ಲಿ ನುಡಿದ.

" ನನಗೂ ಇಂತಹವರನ್ನ ಕಂಡ್ರೆ ಸಂಕಟ. ಏನಾದ್ರೂ ಹಣದ ಸಹಾಯ ಮಾಡ್ಬಹುದು. ಮಾಡಿದ್ರೆ ನೀನಲ್ಲ, "ನಿನ್ನಂತ ನಾಲಕ್ಕು ಜನ ಏನ್ ತಿಳೀತಾರೆ? ಬಾಯಿಗೆ ಬಂದಂಗೆ ಮಾತಾಡ್ತಾರೆ ಇದಕ್ಕೆ ಹೆದರಿಕೊಂಡು ಅವರ ಕಷ್ಟ ನೋಡ್ಬೇಕಾಗ್ತೈತೆ. ನೋಡೋಣ. ವಿಧುವೆ ಅಂತ ಹೇಳಿ ತಿಂಗ್ಳಾ 50 ರೂಪಾಯಿ ಸರ್ಕಾರದಿಂದ ಕೊಡ್ತಾರೆ ಅದನ್ನ ಮುಂದಿನ ತಿಂಗ್ಳಿಂದ ಕೊಡಿಸ್ತೀನಿ " ಎಂದು ಮಹಾ ಪರೋಪಕಾರಿ ಪಣ ತೊಟ್ಟವನಂತೆ ನುಡಿದ.

ವೃತ್ತಿಯಿಂದ ಮೇಲೆ ಬಂದ ಅನಕ್ಷರಸ್ಥ ಮೇಸ್ತ್ರಿಯ ನೋಟಕ್ಕೆ ಆದರ್ಶವಾದಿಯಂತೆ ಕಂಡ ಪುರುಷೋತ್ತಮನಿಗೆ "ಅಂಗೇ ಮಾಡಿ ಪುಣ್ಯ ಕಟ್ಕೊಳೀ ಸ್ವಾಮಿ. ಬಡವ್ರು ಬದುಕೊಂಡ್ಲಿ " ಎಂದು ಕೆಳಗೆ ನೋಡಿ "ಲೋ ಯಾವನ್ಲೇ ಅವ್ನ ಮಡ್ಡಿ ಖಾಲಿ ಆಯ್ತು. ಆ ಕಡೆಗೆ ಇಪ್ಪತ್ತೈದು ಬಾಂಡ್ಲಿ ಮರಳು ಹಾಕಿ ಮೂರಕ್ಕೆ ಒಂದು ಸಿಮೆಂಟ್ ಹಾಕಿ ಬೇಗ ಕಲ್ಸೋ " ಎಂದು ಪುರುಷೋತ್ತಮನ ಕಡೆ ತಿರುಗಿ " ಬಂದೆ ಸ್ವಾಮಿ ಈ ನನ್ಮಕ್ಳು ಎದುರಿಗೆ ಇದ್ರೇನೆ ಕೆಲ್ಸ ಮಾಡೋದು. ಇಲ್ಲಾಂದ್ರೆ ಜೆಲ್ಲಿ ಮಾಡಿ ಮೈತುಂಬಾ ಮೂರು ಪಟ್ಟೆ ಬಳಿದು ರಸ್ತೆಗೆ ನಿಲ್ಸ್ತಾರೆ" ಎನ್ನುತ್ತ ಕೆಳಗಿಳಿದು ಹೋದ.

ಪುರುಷೋತ್ತಮನೂ ಕೆಳಗಿಳಿದು ಬಂದು ವರಾಂಡ, ಅತಿಥಿಗಳ ಕೋಣೆ, ತನಗೆ ಯಾವುದು ? ಎಂದು ಪ್ರತಿ ದಿನವೂ ಚಿಂತಿಸುವಂತೆ ಈ ದಿನವೂ ಅದನ್ನೆ ಚಿಂತಿಸುತ್ತ ಒಳಗೆ ನಡೆದ. ಎಡ ಬದಿಯ ಮೂಲೆಯ ರೂಮಿನ ಬಾಗಿಲು ತಳ್ಳಿ ಇಣುಕಿದ. ದೊಡ್ಡ ಬಕೆಟ್‌ನಲ್ಲಿ ಸುಣ್ಣದ ನೀರು, ಡಿಸ್ಟೆಂಪರ್ ಡಬ್ಬಗಳಿದ್ದವು. ಮಧ್ಯದಲ್ಲಿ ಕಪ್ಪು ಬಣ್ಣದ ತೆಳು ದೇಹದ ಯುವಕನೊಬ್ಬ ತಲೆಕೆರೆದುಕೊಳ್ಳುತ್ತ ಕೋಣೆಯನ್ನು ತನ್ನ ದೃಷ್ಟಿಯಲ್ಲಿ ಅಳೆಯತೊಡಗಿದ. "ಇಡೀ ಬಂಗ್ಲೆಗೆ ಸುಣ್ಣ ಬಣ್ಣ ಬಳಿಯುವಷ್ಟರಲ್ಲಿ ನಾಲ್ಕೈದು ಸಾವಿರವಾದ್ರೂ ಲಾಭ ಬಂದ್ರೆ!" ಎಂದು ಆಲೋಚಿಸುತ್ತಿದ್ದವನಿಗೆ " ಏಯ್ ಏನ್ಮಾಡ್ತ ಇದ್ದೀಯಾ ? " ತನ್ನದೆ ಗತ್ತಿನಲ್ಲಿ ಕೇಳಿದ.

ಆ ವ್ಯಕ್ತಿ ತಲೆ ಕೆರೆಯುತ್ತ " ಇವತ್ತಿಂದ ಸುಣ್ಣ ಬಣ್ಣದ ಕೆಲ್ಸ ನಂಗೆ ಕೊಟ್ಟಿದ್ದಾರೆ ಕಣಣ್ಣಾ, ಈ ರೂಮಿನಿಂದನೆ ಕೆಲ್ಸ ಸುರುವು ಮಾಡಾನಾ ಅಂತ ಇದೀನಿ " ಎಂದ ವಿನಯತೆಯಿಂದ.

" ಹುಂ ಎಷ್ಟಕ್ಕೆತಗೊಂಡಿದ್ದಿಯಾ ಕೂಲಿ ? ಕೇಳಿದ.

ಬಿಡದ ವಿಧೇಯತೆಯಿಂದ " ಹನ್ನೆರಡು ಸಾವ್ರ ಕೇಳ್ದೆ ಆಗಾದಿಲ್ಲಾಂತ ಹತ್ತು ಸಾವ್ರ ತಗಾಅಂದ್ರು ಕಣಣಾ. ನಮ್ಗೆಗಿಟ್ಟಲ್ಲ. ಆದ್ರೆ ದೊಡ್ಡೋರು ಕೆಲ್ಸ ಬ್ಯಾಡ ಅನ್ಬಾರ್ದೂಂತ ಒಪ್ಕೊಂಡೆ ಕಣಣಾ "

" ನೀನು ಮಹಾ ದೊಡ್ಡ ಮನುಷ್ಯ ಬಿಡಲೇ.... ಅಷ್ಟು ಹಣ ತಗೊಂಡು ಯಾವನ್ನಾದ್ರೂ ಸಮಾಧಿಗೆ ಮರಿಗ್ಸಿ ಮಣ್ಣೆಳೆದು ಬಿಡ್ತಿ ಕಣಲೇ. " ಎಂದು ದಬಾಯಿಸುತ್ತಿದ್ದಂತೆ ಬೆದರಿದ ಅವನ್ನು "ಅಂಗಲ್ಲ ಕಣಣಾ, ಸುಣ್ಣ ಬಣ್ಣ ಎಲ್ಲ ನಮ್ದೇ. ಕೂಲಿನೇ ಐದು ಸಾವ್ರ ಆಗ್ತದೆ. ಬೇಕಾದ್ರೆ ಬೇರೆ ಯಾರ್ನಾದ್ರೂ ಕೇಳ್ಣ. ಒಂದು ಕಾಸೂ ತಗಳ್ದಂಗೆ ಮಾಡ್ತೀನಿ " ವ್ಯಾಪಾರಿ ಭಾಷೆ ಆರಂಭಿಸಿದ.

"ಸುಮ್ನಿರಲೇ ನಿಮ್ಮಂತವರ್ನ ಭಾರಿ ನೋಡಿದ್ದಿನಿ. ಐದು ಸಾವಿರ ಅವತ್ತೇ ತಗೊಂಡಿದ್ದೀಯಾ ಈಗ ಪುಕ್ಕಟ್ಟೆ ಮಾಡ್ತಾನಂತೆ " ಎಂದು ಗದರಿ ಒಳನುಗ್ಗಿ ಖಾಲಿ ಸ್ಟೂಲ್ ಮೇಲಿದ್ದ ಧೂಳು ಕೊಡವಿ ಅದರ ಮೇಲೆ ಕುಳಿತು ಸಿಗರೇಟ್‌ಗೆ ಬೆಂಕಿ ಹಚ್ಚಿದ. ಮನಸ್ಸು ಕೇಂದ್ರಿಕೃತವಾಗತೊಡಗಿತು.

ಕೆಲಸಗಾರ ಸುಣ್ಣದ ತಿಳಿ ನೀರಿನ ಬಕೆಟ್‌ನಲ್ಲಿ ಬಿಮರಿನ ದೊಣ್ಣೆ ಇಳಿಬಿಟ್ಟು ಗೂರಾಡತೊಡಗಿದ. ತಳದಲ್ಲಿನ ಬಿಳಿ ಕಣಗಳು ಮೇಲೆ ಬಂದಂತೆ ಪುರುಷೋತ್ತಮನ ತಲೆಯಲ್ಲಿ ಆಲೋಚನೆ ಎದ್ದು ಕೊರೆಯಲಾರಂಭಿಸಿತು, ಆಗಾಗ ನೆನಪಿಗೆ ತರುವ ಬರಿ ಕೊರಳಿನ ದುಂಡು ದೇಹದ ವಿಧುವೆಯ ಚಲುವು. ತಟ್ಟನೆ ತಲೆ ಕೊಡವಿ ಸಿಗರೇಟ್ ಕೆಳಗೆ ಹಾಕಿ, ಜೇಬಿನಿಂದ ಪೆನ್ನು ಹಾಳೆ ತೆಗೆದು ಒತ್ತಿಗೆಗೆ ಸುತ್ತಮುತ್ತ ಕಣ್ಣಾಡಿಸಿ ಏನೂ ಸಿಗದೆ ಡಬ್ಬವನ್ನು ತೆಗೆದುಕೊಂಡು, ಅದರ ಮೇಲೆ ಹಾಳೆ ಇಟ್ಟು ಬರೆಯತೊಡಗಿದ.

ಆಗ ತಾನೆ ಕೆಲಸಗಾರ ಕುಂಚ ಸುಣ್ಣದ ನೀರಿನಲ್ಲಿ ಅದ್ದಿ ಗೋಡೆಗೆ ಬಳಿಯ ತೊಡಗಿದ. ಕಪ್ಪು ಗೋಡೆಗೆ ಸುಂದರ ಬಣ್ಣ ಕೊಡಲು ಅವನು ಹವಣಿಸುತ್ತಿದ್ದಂತೆ, ಪುರುಷೋತ್ತಮ ವಿಧುವೆಯ ಜೀವನ ವರ್ಣಮಯಗೊಳಿಸುವವನಂತೆ ಸರ್ಕಾರಕ್ಕೆ ಶಿಫಾರಸು ಮಾಡಿ ವಿಧವಾವೇತನಕ್ಕೆ ಬರೆಯುತ್ತಿದ್ದ.

ಬರೆದು ಮುಗಿಸಿ ಮತ್ತೊಮ್ಮೆ ಸರಿಯಾಗಿ ಓದಿ ಕೆಲಸಗಾರನ ಕಡೆ ತಿರುಗಿ " ಏಯ್ ಇದೇನು ಗೊತ್ತೇನೋ? " ಕೇಳಿದ. ಕೆಲಸ ನಿಲ್ಲಿಸಿ ಅವನತ್ತ ತಿರುಗಿ ತಲೆ ಅಲ್ಲಾಡಿಸುತ್ತ 'ಇಲ್ಲ ' ಎಂದ

"ನಿನಗೇನು ಗೊತ್ತೇಳು ? ಗಂಡ ಸತ್ತವರು ಇರ್ತಾರಲ್ಲ ಅವರಿಗೆ ಹಿಂಗ್ಯಾ ದುಡ್ಡು ಬರಂಗೆ ಮಾಡ್ತಿದ್ದೀನಿ. ನಿಮ್ಮ ಸಂಬಂಧಿಕರೂ ಯಾರಾದ್ರೂ ಇದ್ರೆ ಹೇಳು ಮಾಡೋಣ?" ಎಂದ.

ಕ್ಕೆ ಯಾರೂ ಇಲ್ಲ ಅಂಗೆ ದುಡ್ಡು ಕೊಡ್ತಾರೆ ಅನ್ನೋದು ನನಗೀಗ ನೋಡಣ್ಣ ಗೊತ್ತಾಗಿದ್ದು. ಸರ್ಕಾರ್ದೋರು ಏನೇನೋ ಮಾಡ್ತಾರೆ, ಏಷ್ಟ್ಯ ನವ್ಗೆ ಗೊತ್ತಾಗೋದೆ ಇಲ್ಲ . " ಎಂದು ಸರ್ಕಾರದೊಂದಿಗೆ ಅವನನ್ನು ಹೊಗಳಿದ.

" ಹಾ ನೀನು ಬಾ ಇಲ್ಲಿ " ಎಂದು ಕಾಲ ಮೇಲೆ ಕಾಲು ಹಾಕಿ, ತಲೆತಗ್ಗಿಸಿ ಕುಳಿತು ಕರೆದ.

" ನಾನೇನಣ್ಣಾ ? " ಪ್ರಶ್ನಿಸಿದ, ಕುಂಚ ಕೈಯಲ್ಲೆ ಹಿಡಿದು.

" ಹುಂ ಕಣಲೇ ಬಾ ಯಾಕಂಗೆ ಹೆದರ್ತಿಯಾ ಒಳ್ಳೆ ಹೆಂಗ್ಸು ಮಾಡ್ದಂಗೆ ಮಾಡ್ತೀಯಲ್ಲ. ನೀನೇ ಹೇಳೊ ಇಂತಹ ಬಡವ್ರಿಗೆ ನಾನು ಸಹಾಯ ಮಾಡ್ತಿನಲ್ಲ ನಾನು ಒಳ್ಳೇನೋ ಕೆಟ್ಟೋನೊ ? " ಕೇಳಿದ.

" ನಿವ್ ತಂದೆಯವ್ರನ್ನ ನೋಡಿದ್ರೆ ತಿಳಿಯಾಕಿಲ್ವ ? ದೇವ್ರಂತ ಮನುಷ್ಯರು. ಅಪ್ಪ ಮಗ ನೀವು "

"ಸದ್ಯ ಅಪ್ಪಾದ್ರೂ ತಿಳ್ಕೊಂಡಿದ್ದೀಯಲ್ಲ. ಅದು ನನ್ನ ಪುಣ್ಯ. ಸ್ವಲ್ಪ ಬಾ ಇಲ್ಲಿ" ಎಂದು ಹತ್ತಿರಕ್ಕೆ ಮೆಲು ದನಿಯಲ್ಲಿ ಕರೆದ.

" ಏನಣ್ಣ . ? " ಕುಂಚ ಕೆಳಗಿಟ್ಟು ಹತ್ತಿರಕ್ಕೆ ಬಂದು ನಿಂತ.

" ಈಗ ನೀನೊಂದು ಕೆಲ್ಸ ಮಾಡ್ಬೇಕು. ಅದೇನಂದ್ರೆ ಅಲ್ಲಿ ಗಾರೆ ಕೆಲ್ಸದ ಸಿದ್ದಪ್ಪ ಸತ್ತೋದ್ನಲ್ಲ ಅವ್ನೆಂಡ್ತಿ ಇದ್ದಾಳೆ. ಬೆಳ್ಳಗೆ ದಪ್ಪ ಇದ್ದಾಳೆ. ಅವ್ಳ ಹೆಸ್ರೂ ಸಹ ಗೊತ್ತಿಲ್ದೆ ಹೋದ್ರೆ ನಾನು ಏನಂತ ಬರೆಯೋದು ಹೇಳು ? ಅವ್ಳ ಅಪ್ಪನೆಸ್ರು, ಗಂಡ ನೆಸ್ರು, ಕುಲಗೋತ್ರ, ಸತ್ತದ್ದು ಬದುಕಿದ್ದು ಎಲ್ಲಾ ಬರೀಬೇಕು. ಅದನ್ನ ತಿಳ್ಕೊಳ್ದೆ ಬರೆಯೋದು ಕಷ್ಟ. ಅವ್ಳನ್ನ ಇಲ್ಲಿ ಕಾಯ್ತಿರ್ತೀನಿ. ನೀನು ಹೋಗಿ ಕಳಿಸ್ಬಿಟ್ಟು ಅವ್ಳ ಕೇಳ್ತಿ

ನೀನು ಮಾಡು " ಎಂದು ಹಿಡಿತದ ಪದಗಳನ್ನು ಪ್ರಯೋಗಿಸಿದ.

" ಅದೆಲ್ಲ ಆಗದಿಲ್ಲ ಬಿಡಣ್ಣ. ನಮ್ದು ಬರೀ ಬಣ್ಣ ಹೊಡಿಯೋ ಕೆಲ್ಸ. ಅವರ್ದೇ ಬೇರೆ ತರ "ಎಂದ.

" ಅದೇನೆ ಇರ್ಲಿ. ನಿನ್ ತಂಗಿ ಸುಖವಾಗಿರೋದ್ನ ನೀನು ಇಷ್ಟಪಡೋದಿಲ್ಲೇನು?" ಕೇಳಿದ.

"ಒಪ್ಪಿದ್ನಣ್ಣ. ನಾನು ಆ ಕೆಲ್ಸ ಮಾಡಿಗ್ರೆ ಇಲ್ಲಿ ಸುಣ್ಣ ಬಳಿಯೋದು ಯಾರು? ನಾನು ಹಗ್ಲೂ ರಾತ್ರಿ ನಿದ್ರೆ ಮಾಡ್ದಂಗೆ ಮಾಡ್ಬೇಕಾಗ್ತೈತೆ.. " ತನ್ನ ದೌರ್ಬಲ್ಯ ಹೇಳಿಕೊಂಡ.

ಅದೆಲ್ಲವನ್ನು ಪುರುಷೋತ್ತಮ ಕೇಳುವಂತಿರಲಿಲ್ಲ. "ಇರ್ಲಿ ಹೋಗು. ಐದು ನಿಮಿಷಕ್ಕೆ ನೀನೆಷ್ಟು ಬಳಿದೀಯಪ್ಪ. ಜಾಸ್ತಿ ಅಂದ್ರೆ ಈ ರೂಮಿನ ಒಂದು ಮಗ್ಗುಲಿಗೆ ಬಳಿಯಬಹುದು" ಎಂದು ಮತ್ತಷ್ಟು ಒತ್ತಡ ಹಾಕಿದ.

"ಸರಿ ಬಿಡಣ್ಣ. ನಿಮ್ಮ ಕಾರ್ಯ ತಡ ಆದ್ರೆ ಸಿಟ್ಟು ಮಾಡ್ಕಳ್ದಂಗೆ ಇದ್ರಾಯ್ತು. ಅಲ್ಲಿ ಯಾರ್ಗ್ನಂತ ಕಳ್ಸೋದಣ್ಣ? ಎಂದ.

"ಸಿದ್ದನ ಹೆಂಡ್ತಿ. ಗಂಡ ಇಲ್ಲಲ್ಲಾ ಅವ್ಳು ಅನ್ನು. ಹ್ಞಾ. ಮೇಸ್ತ್ರಿ ಏನಾದ್ರೂ ಕೇಳಿದ್ರೆ ಸ್ವಾಮೇರು ಫಾರಂ ಭರ್ತಿ ಮಾಡ್ಸಿಕೊಳ್ಳೋಕೆ ಕರ್ಕೊಂಡು ಹೋಗಿದ್ದಾರೆ, ಈಗ ಕಳ್ಸಿ ಬಿಡ್ತಾರೆ ಅಂತೇಳು" ಎಂದು ಮಾತು ತವಕದಿಂದ ಮುಗಿಸಿ ಸಾಗ ಹಾಕಿದ.

ಆ ವ್ಯಕ್ತಿ ಹೊರ ಹೋಗಿ ಮರೆಯಾದ ಸ್ವಲ್ಪ ಹೊತ್ತಿಗೆ ಒಳಗೆ ಬಟ್ಟಲು ಕಣ್ಣು ಬಿಡುತ್ತ ಹೆಜ್ಜೆ ಮೇಲೆ ಹೆಜ್ಜೆ ಇಡುತ್ತ ಬರುವುದನ್ನು ಕಂಡು " ಬಾರವ್ವ ಬಾ. ಏನ್ ನಿನ್ ಹೆಸ್ರು? ಕೇಳಿದ್ರೆ ಒಬ್ರೂ ಹೇಳ್ಲಲ್ಲ. ಎಂತಾ ಕೆಟ್ಟ ಜನಾ ಅಂತೀರಾ ? . ಏನಂದ್ರೆ ನಾವು ನಿನಗೆ ಕೆಲವು ವಿಷಯ ಕೇಳ್ತೀನಿ. ನೀನು ಹೇಳ್ಬೇಕು. ನಾನು ಬರ್ಕೊಂಡೋಗಿ ಆಫೀಸಿಗೆ ಕೊಡ್ತೀನಿ. ನಿನಗೆ ತಿಂಗ್ಳಾ ಐವತ್ತು ರೂಪಾಯಿ ಬರುತ್ತೆ. ಸಂತೋಷ ತಾನೆ? " ಎಲ್ಲ ಒಂದೇ ಉಸಿರಿಗೆ ಮಾತನಾಡಿ ಸಲಿಗೆ ಬೆಳೆಸಿಕೊಂಡ.

ಕಂಗಳಿಂದಲೇ ಒಪ್ಪಿಗೆ ಸೂಚಿಸಿ ತಲೆ ಅಲ್ಲಾಡಿಸಿದಳು.

"ಇಲ್ಲಿ. ಇಲ್ಲಿ. ಬಾ. ಮುಚ್ಚು ಮರೆ ಏನೂ ಇಟ್ಕೋಬಾರ್ದು ಎಲ್ಲಹೇಳ್ಬೇಕು ಗೊತ್ತಾಯ್ತಾ? " ಎಚ್ಚರಿಸುವಂತೆ ನುಡಿಯುತ್ತ ರೂಮಿನೊಳಗೆ ಕರೆದ.

"ಆಗ್ಱಿ " ಎಂದಿತು ಹೆಣ್ಣಿನ ದನಿ, ಎಷ್ಟೋ ದೂರದಿಂದ ಬಂದಂತೆ ಇತ್ತು. ಸಂಕೋಚದಿಂದಲೇ ಒಳಗೆ ನಡೆದಳು. ಪುರುಷೋತ್ತಮ ಸ್ಟೂಲ್ ಮೇಲೆ ಕುಳಿತು, ಗಂಟಲು ಕೆನೆದು "ಏನಮ್ಮ ನಿನ್ನ ಹೆಸರು?"ಕೇಳಿದ. ಅಳುಕುತ್ತ "ಸಾಕಮ್ಮ" ಎಂದಳು.

"ಗಂಡ...... ?" ಎಂದು ಅವಳ ಮುಖ ಸೂಕ್ಷ್ಮವಾಗಿ ದಿಟ್ಟಿಸಿದ.

"ಇಲ್ಲ" ಗದ್ಗದಿತಳಾಗಿ ನುಡಿದಳು.

"ಓ ಹೌದಲ್ಲಾ ಮರೆತೇ ಬಿಟ್ಟಿದ್ದೆ" ಅವಳ ಭಾವನೆಗಳನ್ನು ಕೆರಳಿಸುವಂತೆ ಯತ್ನಿಸಿ ಮುಂದುವರೆಸಿದ ಮದುವೆಯಾದದ್ದು ಯಾವಾಗ? ಗಂಡ ತೀರ್ಕೊಂಡಿದ್ದು ಯಾವಾಗ?"

"ಐದು ತಿಂಗ್ಳಿಂದೆ ಮದ್ವೆ ಆಗಿತ್ತು? ಅವ್ರು ಸತ್ತು ಎರಡೂವರೆ ತಿಂಗ್ಳಾಯ್ತು" ಎಂದಳು ಕಣ್ಣೀರು ಒರೆಸಿಕೊಳ್ಳುತ್ತ.

"ಇಷ್ಟು ಸಾಕು ಉಳಿದಿದ್ನೆಲ್ಲ ನಾನು ಬರ್ದಿದ್ದೀನಿ.ನೀನೇನು ಯೋಚ್ನೆ ಮಾಡ್ಬೇಡ. ಬಾ ಇಲ್ಲಿ, ನಿನಗೇನು ಹೆಸ್ರು ಬರೆಯೋಕೆ ಬರುತ್ತೊ ಇಲ್ಲ ಹೆಬ್ಬೆಟ್ಟು ಒತ್ತುತ್ತೀಯಾ'? ಪ್ರಶ್ನಿಸಿದ.

"ಬರೆಯೋಕೆ ಬರಲ್ಲ ಹೆಬ್ಬೆಟ್ಟು ಒತ್ತುತ್ತೀನಿ " ಎಂದಳು.

"ಹೌದಾ ಹಾಗಾದ್ರೆ ಬಾ ಮತ್ತೆ ಒತ್ಬಿಡು. ನಿನ್ನಂತ ಹೆಣ್ಣಿಗೆ ಅರ್ಜಿ ಬರೆಬೇಕಾಯ್ತಲ್ಲ ಅದು ನನಗೆ ವ್ಯಥೆಯಾಗಿರೋದು. ಸಂಕೋಚ ಬೇಡ ಬನ್ನಿ" ಇನ್ನಷ್ಟು ಹತ್ತಿರ ಕರೆದು ಎಡಗೈನ ಹೆಬ್ಬೆರಳಿಗೆ ಪೌಂಟೇನ್ ಪೆನ್‌ನಿಂದ ಇಂಕ್ ತೀಡುತ್ತ ಸಂತೋಷಪಟ್ಟನು."ಹ್ಞು ಇಲ್ಲಿ ಒತ್ತು" ಎನ್ನುತ್ತ ಹಾಳೆಯ ಮೂಲೆಯಲ್ಲಿ ಹೆಬ್ಬೆಟ್ಟನು ತಾನೇ ಹಿಡಿದು ಮುತುವರ್ಜಿಯಿಂದ ಒತ್ತುತ್ತ ನಾನು ಎಷ್ಟೆಲ್ಲ ಕಷ್ಟ ಪಡ್ತಿದ್ದೀನಿ ನನಗೇನಾದ್ರೂ ಲಂಚ ಕೊಡಿ" ತಮಾಷೆಯಾಗಿ ನುಡಿದು ಅವಳಿಗೆ ಗಾಬರಿ ಉಂಟುಮಾಡಿದ.

"ಲಂಚ! " ಉದ್ಗಾರದೊಂದಿಗೆ ಹಿಂದೆ ಸರಿದಳು. "ಯಾಕೆ ಲಂಚ ಅಂದ್ರೆ ಅಷ್ಟು ಭಯ? ಲಂಚ ಒಂದಿಪ್ಪತ್ತು ರೂಪಾಯಿ ಆಗ್ಬಹುದು" ಎಂದ. ಆ ಹೆಣ್ಣು ಬೆರಗಾಯಿತು. ಅವಳ ಬೆದರಿದ ರೀತಿ ಕಂಡು ಗೇಲಿ ಮಾಡುವವನಂತೆ " ಓ ಹೆದರಿಕೊಂಡ್ಯಾ ? ಅದು ಬೇಕಿಲ್ಲ. ಲಂಚ ಮಂಚದಲ್ಲಾದ್ರೂ ಪರವಾಯಿಲ್ಲ" ಎಂದಾಗಲೇ ಆಕೆಗೆ ತನ್ನಲ್ಲಿ ದೇಹದ ಸಿರಿ ಇದೆ ಎಂದು ಅರಿವಾದದ್ದು.

ಅವಳ ಕೈ ಇನ್ನೂ ಅವನ ಕೈ ಯಲ್ಲಿ ಇರುವಂತೆಯೇ ಪುರುಷೋತ್ತಮ ಎದ್ದು ನಿಂತು, ಗೊಂಬೆಯ ಸೀರೆ ಕಳಚುವಂತೆ ಸೆಳೆದುಕೊಂಡು ಹಿಡಿಮಾಡಿ ಮೂಲೆಗೆ ಎಸೆದ. ಅರೆ ಮನದಿಂದ ಪ್ರತಿರೋಧಿಸಿದ ಯೌವನಸ್ಥೆ ಬಲು ಬೇಗನೆ ಮಣಿದಳು. ಅವಳ ಬಯಕೆಗೆ ತಕ್ಕ ಉತ್ತರವಾಯಿತೆ ಹೊರತು, ರಕ್ಷಿಸಿಕೊಳ್ಳಲಾಗಲಿಲ್ಲ. ಸುರಪಾನ ಮಾಡಿದ ಮತ್ತಿನಲ್ಲಿದ್ದವಳ ನಗ್ನದೇಹದ ಮೇಲೆ ಸೀರೆ ಎಸೆದು ಬೆನ್ನು ತಿರುಗಿಸಿ ಕುಳಿತ. ಸಾಕಮ್ಮ ಹತ್ತು ನಿಮಿಷದ ನಂತರ ಸದ್ದಿಲ್ಲದೆ ಹೊರಟಳು.

" ಸಾಕಮ್ಮ ನೀನೇನು ಯೋಚ್ನೆ ಮಾಡ್ಬೇಡ ಇನ್ನು ನಿನ್ನ ಕೆಲ್ಸಕ್ಕೆ ಹೋಗು" ಎಂದು ಕರುಣಾಮೂರ್ತಿಯಂತೆ ಬಾಗಿಲುತೆರೆದು ಬೀಳ್ಕೊಟ್ಟ. 'ಒಂದು ಪಕ್ಷ ಮೇಸ್ತ್ರಿಗೆ ಗೊತ್ತಾಗಿದ್ದಿದ್ದರೆ ನೂರೋ ಇನ್ನೂರೋ ಅವ್ನ ಬಾಯಿಗೆ ಇಟ್ರೆ ಸಾಕು ತೆಪ್ಪಗಾಕ್ತಾನೆ ಅನ್ನೋ ಅನಿಸಿಕೆಯ ಜೊತೆಯಲ್ಲಿ ನನ್ನ ತಂದೆ ಯಾರು ಅನ್ನೋದು ನೆನಪಿಟ್ಕೋ ಅಂದ್ರೆ ಸಾಕು. ಕಾಲ್ಸಂದಿಗೆ ಬಾಲ ಎಳ್ಕೊಂಡ ನಾಯಿ ಆಗ್ತಾನೆ' ಎನ್ನುವ ನಂಬಿಕೆ.

ಅಷ್ಟರಲ್ಲಿ ಎದುರಿಗೆ ಬಂದ ಮೇಸ್ತ್ರಿ " ಏನ್ ಸ್ವಾಮಿ ಈಗ ತಾನೇ ಏನೇನೋ ಅಂತಿದ್ರಿ. ಆಗಲೇ ನಮ್ಮ ತಾಯಿದು ಹೆಸ್ರೆಲ್ಲ ಬರ್ಕೊಂಡ್ರಂತೆ! ಛಲಗಾರ್ರು ಅಂದ್ರೆ ನೀವು" ಹೊಗಳಿದ. "ಹೌದು ಬಾ ಮಹರಾಯಾ, ನಿನ್ನದೂ ಒಂದು ಸಹಿ ಇಲ್ಲಿ ಹಾಕು" ಎಂದು ಕರೆದಾಗಲಂತೂ ಅತ್ಯಾನಂದದಿಂದ ಸಹಿ ಹಾಕಿದ. ಸಾಕಮ್ಮ ತಾನೊಬ್ಬಳೆ ಅಪರಾಧದ ಭಾರ ಹೊರಬೇಕಾದುದರಿಂದ, ಯಾರಿಗೂ ಅನುಮಾನ ಬಾರದಂತೆ ಇರಲು ಪ್ರಯತ್ನಿಸಿದಳು. ಯಾರಿಗೂ ಸಂಶಯದ ಸೊಗಡೂ ಹತ್ತಲಿಲ್ಲ ಪುರುಷೋತ್ತಮ ಹೆಸರಿಗೆ ತಕ್ಕನಾಗಿ ತೋರಿದ

"ಮೇಸ್ತ್ರಿ ನಾನು ಮನೆಗೆ ಹೋಗಿ ಊಟ ಮಾಡಿ ಬರ್‍ತೀನಿ ಕೆಲ್ಸ ನೋಡ್ಕೊಳ್ಳಿ" ಎಂದು ಅನುಭವಿಸಿದುದೆಲ್ಲ ಮತ್ತೆ ಮತ್ತೆ ನೆನೆದೇ ಸವಿಯುತ್ತ ಸ್ಕೂಟರ್ ಕಡೆಗೆ ನಡೆದ. ಅವಕಾಶ ಸಿಕ್ಕ ಕಡೆಯಲೆಲ್ಲಾ ಅವನು ಎಷ್ಟೋ ಜನರನ್ನು ಅನುಭವಿಸಿದ್ದುಂಟು. ಅದರಲ್ಲಿ ಇವಳೊಬ್ಬಳ ನೆನವು ಮಾತ್ರ ಅವಿಸ್ಮರಣೀಯ ಎಂದು ತೀರ್ಮಾನಿಸಿತವನ ತುಡುಗ ಮನ.

೭

ಆ ದಿನದ ಮಾರನೆ ದಿನದಿಂದಲೂ ರಾಜು, ಲಕ್ಷ್ಮಿ ಮನೆಯಿಂದ ಸ್ವಲ್ಪ ದೂರ ಹೋಗುವವರೆಗೆ ಒಬ್ಬಂಟಿಗರಾಗಿ ನಡೆದು ನಂತರ ಜೊತೆಗೂಡಿ ಮಾತನಾಡುತ್ತ ಕಾಲೇಜಿಗೆ ಹೋಗುತ್ತಿದ್ದರು. ಕ್ಲಾಸ್ ನಡೆಯುವಾಗ ನೋಟದಿಂದ, ಸಂಜ್ಞೆಯಿಂದ ಮಾತನಾಡಿ ಕೊಳ್ಳುತ್ತಿದ್ದರು. ಕಾಲೇಜು ಮುಗಿಸಿ ಹಿಂತಿರುಗುವಾಗ ಮನೆ ಹತ್ತಿರ ಬರುತ್ತಿದ್ದಂತೆ ರಾಜು ಸ್ವಲ್ಪ ದೂರ ಹೆಜ್ಜೆಗಳನ್ನು ಬಿರುಸಾಗಿ ಹಾಕಿ ಮುಂದೆ ನಡೆಯುತ್ತಿದ್ದ. ಲಕ್ಷ್ಮಿ ನಿಧಾನವಾಗಿ ಹಿಂಬಾಲಿಸುತ್ತಿದ್ದಳು. ಇಬ್ಬರೂ ಹಿಂದಿನಂತೆ ಸರಿಯಾದ ವೇಳೆಗೆ ಹೊರಡುತ್ತಿರಲಿಲ್ಲ. ಈಗ ಹದಿನೈದು ಇಪ್ಪತ್ತು ನಿಮಿಷ ಬೇಗನೆ ಹೊರಡುವರು.

ಕನ್ನಡಿ ಎದುರಿಗೆ ನಿಂತ ರಾಜು ಕ್ರಾಪ್ ತೀಡಿ ಬಾಚಿ, ಕೆಡಿಸಿ ಮತ್ತೆ ಬಾಚಿ "ಹೂ ಈಗ ಚನ್ನಾಗಿದೆ. ಲಕ್ಷ್ಮಿ ಮೆಚ್ಕೋಹಾಗೆ" ಎಂದು ತನ್ನೊಳಗೆ ಗೊಣಗಿಕೊಂಡ. ಮುಖಕ್ಕೆ ಪೌಡರ್ ಬಳಿದು ಕೊಂಡು ಹೊರ ಬಂದು, ಒಳಗಿದ್ದ ತಾಯಿಗೆ "ಅಮ್ಮಾ ಹೋಗ್ಬರ್‍ತೀನಿ" ಎಂದು ಅರಚಿದ. ಅಲ್ಲಲ್ಲಿ ಇದ್ದ ಮನೆಗಳಿಗೂ ಆ ಕೂಗು ಧಾರಾಳವಾಗಿ ಕೇಳುತ್ತಿತ್ತು.

ಮತ್ತೊಮ್ಮೆ ಕೂಗುತ್ತಿದ್ದಂತೆ, ಲಕ್ಷ್ಮಿ ಕೈ ಬೆರಳು ನೋಯುವಷ್ಟು ಬೇಗನೆ ಜಡೆ ಕಟ್ಟಿಕೊಂಡು 'ಸೈರನ್ ಕೂಗ್ತಿದೆ' ಎಂದುಕೊಂಡಳು. ಅಲ್ಲಿಗಾಗಮಿಸಿದ ಸಾವಿತ್ರಮ್ಮ

"ಆ ಹುಡುಗನಿಗೇನು ಹುಚ್ಚು ಹಿಡಿಯುತ್ತೇನೊ ಕಾಣೆ...." ಮುಖ ಸಿಂಡರಿಸಿಕೊಂಡು ನುಡಿದ ತಾಯಿಯನ್ನು ನೋಡಿ, ನಕ್ಕು "ಹುಚ್ಚು ಹಿಡಿಯೋದೇನು ಮಮ್ಮಿ ... ಹಿಡಿದ್ಬಿಟ್ಟಿದೆ. ಬಿಡಿಸ್ಬೇಕು ಅಷ್ಟೆ" ಎಂದು ತನಗೆ ಹಿತವಾದುದನ್ನೆ ದೃಷ್ಟಿಯಲ್ಲಿ ಇಟ್ಕೊಂಡು ನುಡಿದಳು. ಸಾವಿತ್ರಮ್ಮಳಿಗೆ ಮಗಳು ತನ್ನ ಮಾತನ್ನು ಅನುಮೋದಿಸಿದಳಾಯಿತಷ್ಟೆ.

ಅಷ್ಟರಲ್ಲಿ ಮತ್ತೊಮ್ಮೆ ಲಕ್ಷ್ಮಿಯ ಮನೆಕಡೆಗೆ ನೋಡುತ್ತಲೇ "ಅಮ್ಮಾ ಕಾಲೇಜಿಗೆ ಹೋಗ್ಬರ್‍ತೀನಿ, ಲೇಟಾಯ್ತು" ಎಂದು ಮತ್ತೊಮ್ಮೆ ಕೂಗಿದ, ಲಕ್ಷ್ಮಿ ತಾಯಿ ಇಲ್ಲದಿರುವುದನ್ನು ಗಮನಿಸಿ 'ಈ ಹುಡುಗನಿಗೆ ಸ್ವಲ್ಪವಾದ್ರೂ ತಾಳ್ಮೆ ಇಲ್ಲ' ಎಂದು ಮುದ್ದಿನಿಂದ ಮನಸ್ಸಿನಲ್ಲೆ ಬೈದಳು.

ಮಂಜಮ್ಮ ಒಳಗಿನಿಂದಲೇ "ಹೂ.....ಹುಷಾರು ಹೋಗ್ಬಾ" ಎಂದಳು. ರಾಜು "ಸರಿ ಹೋಗ್ಬರ್‍ತೀನಿ___ ಬರ್‍ಲಾ. ?" ಎಂದು ಕೂಗು ಹಾಕಿದಾಗ ತಡೆಯಲಾಗದ ನಗುವಿಗೆ ತುಟಿ ಕಚ್ಚಿ ತಡೆದುಕೊಳ್ಳುತ್ತ, ಕೈ ಹಿಲ್ಡ್ ಚಪ್ಪಲಿಯನ್ನು ಕಟ್ಟತೊಡಗಿದಳು.

ದಾರಿಯ ಅರ್ಧ ದೂರ ನಡೆದ ನಂತರ ದೂರದಲ್ಲಿ ತನಗಾಗಿ ಕಾಯುತ್ತಾ ನಿಂತಿದ್ದ ರಾಜನನ್ನು ನೋಡಿ ತಲೆ ತಗ್ಗಿಸಿದಳು. ತೀರ ಸಮೀಪಕ್ಕೆ ಬಂದಾಗ ಮುಖ ನೋಡುತ್ತ 'ಇಲ್ಲಿ ಬೇಡವೆಂದು' ತಲೆ ಅಲ್ಲಾಡಿಸಿ ತಿರಸ್ಕಾರ ಸೂಚಿಸಿದಳು. ಅರ್ಥ ಮಾಡಿಕೊಳ್ಳದೆ ಮಂಕಾಗಿ ಮುಖ ದಿಟ್ಟಿಸಿದ ರಾಜನಿಗೆ ಹಲ್ಲುಕಚ್ಚಿ ಉಸಿರು ಬಿಗಿಹಿಡಿದು "ಏ ರಾಜೂ ನಿನಗೆಷ್ಟು ಬಾರಿ ಹೇಳ್ಬೇಕು ? ಇಲ್ಲೆಲ್ಲ ನನಗೆ ಪರಿಚಯದ ಜನ ಇದ್ದಾರೆ" ತೀಕ್ಷ್ಣವಾಗಿ ಬೇರೆಯವರ ನೋಟಕ್ಕೆ ಬಾಯಿಗೆ ಅಗ್ಗವಾಗಿ ಸಿಕ್ಕಲಿಕ್ಕೆ ಇಚ್ಛಿಸದೆ ನುಡಿದಳು. ನಿನ್ನೆ ತಾನೆ ಹೇಳಿದ್ದನ್ನು ನೆನೆದು ಅವಳ ಮುಖವನ್ನು ನೋಡದೇ ಕೆಳಗೆ ದೃಷ್ಟಿ ಹಾಕಿ, ನೋಟ್ ಬುಕ್ ಬಾಯಿಗೆ ಅಡ್ಡ ಹಿಡಿದು "ಓ___ ಸಾರೀ ಮರೆತ್ಬಿಟ್ಟಿದ್ದೆ" ಎನ್ನುತ್ತ ಮುಂದೆ ನಡೆದ ಎದುರಿಗೆ ಬಂದ ವ್ಯಕ್ತಿ ದನಿಕೇಳಿ ಇಬ್ಬರನ್ನೂ ಸಂಶಯದಿಂದ ಒಮ್ಮೆ ನೋಡಿ ಮುಂದೆ ಸಾಗಿದ.

ಮತ್ತಷ್ಟು ದೂರ ನಡೆದ ನಂತರ ರಾಜು ಹಿಂದೆ ತಿರುಗಿದ, ನಿಲ್ಲುವಂತೆ ತಲೆ ಹಾಕಿದಳು. ರಾಜು ನಿಂತು ಅವಳ ಜೊತೆಗೂಡುತ್ತಿದ್ದಂತೆ "ಎಂಥಾ ಹುಚ್ಚು ಹುಡುಗ

ನೀನು? ಎಷ್ಟು ಹೇಳಿದ್ರೂ ಮರೆತ್ಬಿಡ್ತಿಯಾ " ಅಪಾದಿಸಿದಳು ಲಕ್ಷ್ಮಿ. "ಹೌದು ಲಕ್ಷ್ಮಿ ನೀನು ಎದುರಿಗಿದ್ರೆ ಮಾತೇನು? ನನ್ನನ್ನೇ ಮರೆತ್ಬಿಡ್ತೀನಿ" ಎಂದ ಭಾವುಕದಿಂದ. ಎರಡೆಜ್ಜೆ ಮುಂದೆ ಹೋಗಿ "ಫಿಲಂಗೆ ಹೋಗೋಣ್ವಾ?" ಕೇಳಿದ.

"ಫಿಲಂಗೆ?" ಕಣ್ಣರಳಿಸಿ ನುಡಿದು "ಈಗಾಗಲೇ ನಾಲ್ಕೈದು ಬಾರಿ ಹೋಗಿದ್ದೀವಿ. ಬೇಡಪ್ಪಾ ಕೊನೆಗೆ ಅಟೆಂಡೆನ್ಸ್ ಷಾರ್ಟೇಜ್ ಬಂದ್ರೆ ಏನ್ಮಾಡೋದು?" ಹೋಗಲು ಇಷ್ಟವಿದ್ದರೂ ನೆಪ ಹಾಕಿದಳು.

"ನೀನೊಂದು ಪುಸ್ತಕದ ಹುಳು. ನಾನು ವೈಸ್ ಪ್ರೆಸಿಡೆಂಟ್, ಅಟೆಂಡೆನ್ಸ್ ಕೊಡು ಅಂದ್ರೆ ಕೊಡ್ಬೇಕು. ಪ್ಲೀಸ್ ಬಾ ಲಕ್ಷ್ಮಿ ಹೋಗೋಣ. ಹೊಸ ಪಿಚ್ಚರ್. ಒಳ್ಳೇದು" ಎಂದು ಅವಳ ಅಧೈರ್ಯಕ್ಕೆ ಕೊಂಚ ಸಮಾಧಾನ ನೀಡಿದ. ಆತನನ್ನು ಗೇಲಿ ಮಾಡುವಂತೆ "ನೀನು ಮಹಾರಾಜ ನೋಡು ಅದ್ಕೆ ನೀನೇಳ್ದಾಗೆ ಕೇಳ್ತಾರೆ ಅನ್ಕೊಂಡ? ಅಟೆಂಡೆನ್ಸ್ ಕೊಡಿಸ್ಬಹುದು. ಪಾಸೂ ನೀನೆ ಮಾಡಿಸ್ತೀಯಾ? ಬೇಡಪ್ಪ ನನ್ನ ನೋಟ್ಸೆಲ್ಲ ಫಿಲಪ್ ಆಗೇ ಇಲ್ಲ. ನಾನಂತೂ ಎರಡು ದಿನ ಎಲ್ಲೂ ಬರಲ್ಲ" ಕಡ ಖಂಡಿತವಾಗಿ ಹೇಳಿದಳು.

"ಲಕ್ಷ್ಮಿ ಅವತ್ತು ನೀನೇ ಹೇಳಿದ್ದೆ. ನಮ್ಮ ಜೀವನದ ಪರೀಕ್ಷೆಯೆ ಬೇರೆ. ಅದು ನಮ್ಮಿಬ್ಬರ ಪ್ರೇಮಪರೀಕ್ಷೆ ಎಂದಿದ್ದೆ. ಇವತ್ತಾಗಲೇ ಮರೆತೊಯ್ತಾ? ಸರಿ ಬಿಡು ನಿನ್ನಿಷ್ಟದಾಗೇ ಆಗ್ಲಿ ಅದೇ ನನ್ನಿಷ್ಟ ಅನ್ಕೊಂಡು ತೃಪ್ತಿ ಪಟ್ಕೊಳ್ತೀನಿ" ಎಲ್ಲ ನಿಸಗಾಗೇ ಎನ್ನುವಂತೆ ನುಡಿದರೂ ಬೇಸರದ ಲೇಪನವಿತ್ತು.

ಮುನಿದವನಂತೆ ಮುಖ ಊದಿಸಿಕೊಂಡು ನಡೆಯುತ್ತಿದ್ದವನನ್ನು ನೋಡಿ ತಳಮಳಗೊಂಡ ಲಕ್ಷ್ಮಿ ತಾನೇ ದಾರಿಗೆ ಬಂದಳು. "ಅಲಗ್ರೇ ಇಷ್ಟಕ್ಕೆ ಮುನಿಸ್ಕೊಂಡಾ? ಕ್ಲಾಸ್ ತಪ್ಪುತ್ತೆಯಂತ ಹಾಗೆಂದೆ ಅಷ್ಟೆ. ನಡಿ ಹೋಗೋಣ ನನ್ದೇನು ಅಭ್ಯಂತರವಿಲ್ಲ. ಯಾವ್ದದು ಪಿಕ್ಚರ್ ರಾಜು?" ಕೇಳಿದಳು.

ಗೆಲುವನ್ನು ಸಂಪಾದಿಸಿದ ರಾಜು ಉಲ್ಲಾಸದಿಂದ " ಇಂಗ್ಲೀಷ್ ಪಿಕ್ಚರ್ ಲಕ್ಷ್ಮಿ.

ದ ನ್ಯಾಚುರಲ್ ಲವ್ ." ಎಂದ ಚಿತ್ರದ ಪ್ರಚಾರಕನಂತೆ. "ಇಂಗ್ಲೀಷ್ ಅಂದ್ಮೇಲೆ ಬರೀ ಸೆಕ್ಸ್, ಅಯ್ಯೋ ಅದೇನು ನೋಡ್ಬೇಕು? " ನಿರಾಕರಿಸುವಂತೆ ನುಡಿದಳು.

"ಸೆಕ್ಸ್ ಇಸ್ ಎ ಲೈಫ್ ಅನ್ನೋದು ಬಿಟ್ಟು, ಲವ್ ಇಸ್ ಎ ಲೈಫ್ ಅರಿಸ್ಕೊಳ್ಳೋಣ. ನೋಡು ಲಕ್ಷ್ಮಿ, ಹಿಂದೆ ಪಾಠದ ಕಡೆಯಲ್ಲಿ 'ನೋಡಿ ತಿಳಿ, ಮಾಡಿ ಕಲಿ' ಅಂತಾ ದೊಡ್ಡದಾಗಿ ಬರ್ದಿರ್ತಿತ್ತು. ಓದಿದ್ದು ನೆನಪಿದೆ ತಾನೆ? ಹಾಗೇ " ಮಹಾ ಮೇಧಾವಿಯಂತೆ ನುಡಿದ.

"ಹೌದು ನೆನಪಿದೆ. ನೀನು ಅಷ್ಟು ಜಾಣನಾಗಿದ್ದಿದ್ರೆ ಫಸ್ಟಿಯರ್, ಸೆಕೆಂಡ್ ಇಯರ್‌ನಲ್ಲಿ ಒಟ್ಟು ಎಂಟು ಸಬ್ಜೆಕ್ಟ್ ಯಾಕೆ ಉಳಿತಿತ್ತು? ಸರಿ ಸಿನಿಮಾಕ್ಕೆ ಹೊರಟಿದ್ದೀಯಲ್ಲ ನನ್ ದುಡ್ಡು ಯಾವಾಗ ಕೊಡ್ತೀಯಾ? ಕೇಳಿದಳು.

"ಯಾವ್ದು? " ಪ್ರಶ್ನಿಸಿದ.

"ಓ ಮರ್ತೆಯಾ . ? ಮೊನ್ನೆ ಪಿಕ್ಚರಿಗೆ ಹೋಗ್ಬೇಕಾದ್ರೆ ದುಡ್ಡಿಲ್ಲ ಅಂತ ನನ್ ಕಾಲೇಜ್ ಫೀಸನ್ನೇ ಕೊಡ್ತೀನಿಯೆಂದು ಇಸ್ಕೊಂಡಿದ್ದಲ್ಲಾ ? " ನೆನಪಾಗುವಂತೆ ನುಡಿದಳು.

"ಹ್ಞಾ ಅದಾ!? ಕೊಟ್ರೆರಾಯ್ತು ಬಿಡು. ಇನ್ನೂ ಲಾಸ್ಟ್ ಡೇಟ್ ದೂರ ಇದೆ ಬೇಕಾದ್ರೆ ಫೈನ್ ಹಾಕ್ಕೊಂಡ್ಲಿ. ನಾನೂ ಫೀಸ್ ಕಟ್ಟಿಲ್ಲ. ಹೋಗ್ಲಿ ಬಿಡು ದುಡ್ಡು ಕಟ್ಟಿ ಫೇಲ್ ಅನ್ನೊ ರಿಸಲ್ಟ್ ತಗೋಳದಕ್ಕಿಂತ ಮಜಾ ಮಾಡೋದೆ ಒಳ್ಳೇದು" ಎಂದ.

"ಅಬ್ಬಬ್ಬಾ ನೀನು ಮಹಾ ಪ್ರಚಂಡ ಇದ್ದೀಯ ಬಿಡು." ಅವನಿಗೆ ಓದಿನಲ್ಲಿರುವ ನಿರ್ಲಕ್ಷ್ಯಕ್ಕೆ ಬೆರಗಾಗಿ ಹೆಚ್ಚೇನು ನುಡಿಯಲಾರದೆ ಸುಮ್ಮನಾದಳು ರಾಜು ಗಟ್ಟಿಯಾಗಿ ನಕ್ಕ. "ಲಕ್ಷ್ಮಿ ನೀನು ಒಬ್ಳೇ ಮಗಳಲ್ವ? ನಿನಗೇಕೆ ಹೆಚ್ಚು ಹಣ ಕೊಡಲ್ಲ? " ಕೇಳಿದ ರಾಜು.

"ನನ್ನ ಮದುವೆಯಾಗುವವನಿಗೆ ವರದಕ್ಷಿಣೆ ಕೊಡ್ಲಿಕ್ಕೆ ಕೂಡಿ ಹಾಕ್ತಿದ್ದಾರೆ. ಅದಕ್ಕಿಂತ ಹೆಚ್ಚಾಗಿ ನಾನು ಹೆಣ್ಣು. ಹಣ ಕೊಟ್ರೆ ಕೆಟ್ಹೋಗ್ತಾಳೆ ಅನ್ನೊ ಭಯ.

ನೀನೇಕೆ ಒಬ್ನೇ ಮಗನಾಗಿ ತಂದೆ ಜೇಬಿಗೆ ಕನ್ನ ಹಾಕ್ತೀಯಾ?" ಕೆಣಕಿಸುವಂತೆ ಕೇಳಿ ನಕ್ಕಳು.

"ನಮ್ಮಪ್ಪ ಎಂತಹ ಜಿಪುಣ ಅನ್ನೋದು ನಿನಗೆ ಗೊತ್ತಿಲ್ಲ ಲಕ್ಷ್ಮಿ. ಇಷ್ಟು ದಿನದ ವರೆಗೆ ನನಗೇ ಗೊತ್ತಿರ್ಲಿಲ್ಲ. ಇನ್ನು ನಿನಗೇಗೆ ಗೊತ್ತಾಗ್ಬೇಕು? ನನಗೆ ಏನೂ ಕೆಲಸ ಮಾಡ್ಲಿಕ್ಕೆ ಬರೋದಿಲ್ಲಾಂತ ನಮ್ಮಪ್ಪ ಎರಡು ಲಕ್ಷದ ಏಳು ಸಾವಿರ ಬ್ಯಾಂಕಲ್ಲಿ ಇಟ್ಟಿದ್ದಾರೆ ಬರೀ ಅದರ ಬಡ್ಡಿ ತಿನ್ಕೊಂಡ್ರೆ ನಾವಿಬ್ರೂ ಆರಾಮವಾಗಿ ಪ್ರೇಮ ಪ್ರೀತಿ ಅನ್ಕೊಂಡು ಇರ್ಬಹುದು ಅಲ್ವಾ?" ಕೇಳಿದ ತುಂಟತನದಿಂದ.

ಅಲ್ಪ ನಗುವಿನೊಂದಿಗೆ "ಹೌದು ನನ್ನ ವರದಕ್ಷಿಣೆಯ ಹಣವನ್ನೂ ತಂದು ಬ್ಯಾಂಕಲ್ಲಿ ಇಟ್ರೆ ಇನ್ನಷ್ಟು ಹೆಚ್ಚು ಬಡ್ಡಿ ಬರುತ್ತಲ್ವಾ?" ಎಂದಳು. ವರದಕ್ಷಿಣೆ ವಿರೋಧಿ ರಾಜು, "ಬೇಡ. ವರದಕ್ಷಿಣೆ ನಾನು ತಗೋಳಲ್ಲ. ವರದಕ್ಷಿಣೆ ಬೇರೆ ಯಾರಿಗಾದ್ರೂ ಕೊಟ್ಕೊಳ್ಳಿ. ನನಗೆ ನಿನ್ನ ಕೊಟ್ರೆ ಸಾಕು" ಎಂದ ತಮಾಷೆಯಾಗಿ.

ಸ್ವಲ್ಪ ನಾಚಿಕೆಯಿಂದಲೇ "ಓ ಒಳ್ಳೆ ಜೋಕ್. ವಧು ಒಬ್ರಿಗೆ, ದಕ್ಷಿಣೆ ಒಬ್ರಿಗೆ" ಎಂದು ಮೆಚ್ಚುಗೆಯಿಂದ ನಗು ತಡೆಯಲಾರದೆ ಸಾಕಷ್ಟು ಜನ ಸಂದಣಿ ಇರುವ ಕಡೆ, ತನ್ನ ನಿಜಸ್ಥಿತಿ ಮರೆತು ಪಕಪಕ ನಕ್ಕುಬಿಟ್ಟಳು. ತಕ್ಷಣ ಅಕ್ಕಪಕ್ಕದ ಜನರನ್ನು ಅರಳಿದ ಕಂಗಳಿಂದ, ಭೀತಿಯಿಂದಲೂ ನೋಡಿ ಗಂಭೀರತೆಯನ್ನು ಉಳಿಸಿಕೊಳ್ಳಲು ತುಟಿ ಕಚ್ಚಿ ಕೊನೆಗೆ ತನ್ನ ಬಲಗೈ ತೋರು ಬೆರಳನ್ನು ಕಚ್ಚಿಕೊಂಡಳು.

"ಲಕ್ಷ್ಮಿ ಸ್ವಲ್ಪ ಬೇಗ ಬಾ ರಷ್ ಆಗಿ ಟಿಕೇಟ್ ಸಿಗದಿದ್ರೆ ಕಷ್ಟ" ಎಂದೆಚ್ಚರಿಸಿದ ರಾಜು ಇಬ್ಬರೂ ಒಟ್ಟಿಗೆ ಡೈಮಂಡ್ ಟಾಕೀಸ್ ಕಡೆಗೆ ಬೇಗ ಬೇಗನೆ ನಡೆಯ ತೊಡಗಿದರು. ಬೇಡ ಎಂದಿದ್ದ ಲಕ್ಷ್ಮಿ ಈಗ ತನ್ನ ಪ್ರೇಮಿಯೊಂದಿಗೆ ಹಿಗ್ಗಿನಿಂದ ಹೆಜ್ಜೆ ಹಾಕತೊಡಗಿದಳು. ಮಾರ್ನಿಂಗ್ ಷೋಗೆ ಶಾಲಾ ಕಾಲೇಜು ಹುಡುಗರೇ ಹೆಚ್ಚು ಸಂಖ್ಯೆಯಲ್ಲಿದ್ದರು. ಎಲ್ಲರ ಕೈನಲ್ಲೂ ಪುಸ್ತಕಗಳಿದ್ದವು. ಶ್ರೀಮಂತ ಮನೆತನದ

ವಿದ್ಯಾರ್ಥಿನಿಯರಂತೆ ತೋರುವ ಕಾಲೇಜು ತರುಣಿಯರೂ ಸಂಕೋಚವಿಲ್ಲದೆ ಬಂದಿದ್ದರು. ಗಣನೀಯವಾಗಿ ಅವರ ಸಂಖ್ಯೆಯೂ ಏರುತ್ತಿತ್ತು. ಹನುಮನ ಬಾಲದಂತೆ ಬೆಳೆದಿರುವ ಕ್ಯೂ ನೋಡಿ ರಾಜುಗೆ ಟಿಕೇಟ್ ಸಿಗುವುದು ಅನುಮಾನವಾಯಿತು. ಕ್ಯೂನ ಮುಂಭಾಗ ದಿಂದ ಹಿಂಭಾಗದವರೆಗೂ ಪೋಲಿಸ್ ಮಧ್ಯೆ ಯಾರೂ ನುಗ್ಗದಂತೆ ನೋಡಿಕೊಳ್ಳುತ್ತ ಮಧ್ಯೆ ಸೇರಿದವರನ್ನು ಎಳೆದು ಹಾಕುತ್ತಿದ್ದ. ದೊಡ್ಡ ಸಾಲನ್ನು ನೋಡಿದ ಲಕ್ಷ್ಮಿ "ಈಗ ಏನ್ಮಾಡೋದು? ಅಷ್ಟು ದೂರದಿಂದ ಬಂದು ವಾಪಸ್ಸು ಹೇಗೆ ಹೋಗೋದು?" ಬೇಸರದಿಂದ ನುಡಿದಳು.

ಮೊದಲಿಗೆ ಬೇಡ ಎಂದವಳು ಈಗಾಗಲೇ ಬದಲಿಸಿರುವುದನ್ನು ಕಂಡು "ಯಾಕೆ ವಾಪ್ಸು ಹೋಗೋದು? ನೋಡ್ತಿರು. ತಗೋ! ಈ ಬುಕ್ ನಿನ್ನ ಬ್ಯಾಗಲ್ಲಿಟ್ಕೋ" ಎಂದು ಲಕ್ಷ್ಮಿಯ ಕೈಗಿತ್ತ. ಆಕೆ ತನ್ನ ಬ್ಯಾಗಿನಲ್ಲಿ ಪುಸ್ತಕ ಇಟ್ಟುಕೊಳ್ಳುತ್ತ "ಏನ್ಮಾಡ್ತಿಯಾ?" ಮೆಲು ದನಿಯಲ್ಲಿ ತಲೆ ಎತ್ತಿ ಕೇಳಿದಳು.

"ನೋಡ್ತಿರು ಎಂದ್ನಲ್ಲ" ಎಂದು ಪ್ಯಾಂಟಿಗೆ ಚಪ್ಪಾಳಿ ಹಾಕಿ, ಧೂಳು ಕೊಡವಿದಂತೆ ಕೈ ಒದರಿ, ಧೈರ್ಯ ತುಂಬಿಕೊಂಡು ಪೋಲೀಸ್‌ನನ್ನು ವೀಕ್ಷಿಸಿದ. ಕ್ಯೂನ ಕೊನೆಯಲ್ಲಿ ನುಗ್ಗಾಟವಿದ್ದುದರಿಂದ ಪೋಲೀಸ್ ಅಲ್ಲಿ ದೊಣ್ಣೆಯನ್ನು ಬೀರುತ್ತಾ ಮುಲಾಜಿಲ್ಲದೆ ಥಳಿಸುತ್ತಿದ್ದ. ಅವನಿಲ್ಲದ ಸಮಯವನ್ನೇ ನೋಡಿ ಮಿಂಚಿನ ವೇಗದಲ್ಲಿ ಓಡಿ ಹೋಗಿ ಅವರಿವರನ್ನು ಜಗ್ಗಾಡಿ ಮಧ್ಯದಲ್ಲಿ ತೂರಿಕೊಂಡನು. ಅಕ್ಕಪಕ್ಕದ ಹುಡುಗರೆಲ್ಲ "ಪೋಲೀಸ್ ಪೋಲೀಸ್..... ಓ " ಎಂದು ಒಕ್ಕೊರಲಿನಿಂದ ಕೂಗಿದರು. ರಾಜು ಜಾಗ ಮಾಡಿಕೊಂಡು ಲಕ್ಷ್ಮಿಯ ಕಡೆ ನೋಡಿ ಕೈ ಬೀಸುತ್ತ ವಿಜಯದ ನಗೆ ಬೀರಿದ. ಪೋಲೀಸ್ ಅಲ್ಲಿಗೆ ಓಡಿ ಬಂದು "ಯಾರು? ಯಾರು?" ಕೋಪದಿಂದಲೆ ಪ್ರಶ್ನಿಸಿದ. "ಇಲ್ಲಿ.....ಇಲ್ಲಿ....." ಎಂದು ಹಿಂಬದಿಯ ಹತ್ತನ್ನೆರಡು ಜನ ಅವನ ಕಡೆಗೆ ಕೈ ತೋರಿಸಿದರು.

ನೀತಿವಂತ ಮನೋಭಾವದವನಾದ ಪೋಲೀಸ್ ದೊಣ್ಣೆಯನ್ನು 'ಜುಮು ಜುಮು' ಕೊಡವುತ್ತ ರಾಜನ ಭುಜವನ್ನು ಕೋಲಿನಿಂದ ತಟ್ಟಿ "ಏಯ್ ಇತ್ಲಾಗೆ ತಿರುಗಲೇ

ದೊಡ್ಮನುಷ್ಯ" ಎಂದ ಗಡುಸಾಗಿ. ರಾಜು ಭಯವನ್ನು ತೋರದೆ ಪರಿಚಯದ ನಗು ಬೀರಿದನಾದರೂ "ಆಗ್ಲೆ ನೀನೆಲ್ಲಿದ್ದೆ? ಯಾವಾಗ ಬಂದು ಸೇರ್ಕೊಂಡೆ ಬಾರೋ ಮಗ್ನೆ. ನಿನ್ನಂತವ್ರನ್ನ ನನ್ ಸರ್ವೀಸ್‌ವಲ್ಲಿ ಎಷ್ಟು ನೋಡಿಲ್ಲ" ಎಂದು ಗತ್ತಿನಿಂದ ನುಡಿದು ರಾಜನ ತೋಳು ಹಿಡಿದು ಹೊರಕ್ಕೆ ಎಳೆದಾಕಿದ. ಎಲ್ಲ ಆಟವನ್ನು ನೋಡಿದ ಲಕ್ಷ್ಮಿ ಯನ್ನು ಪೆಚ್ಚು ಮೋರೆಯಿಂದ ನೋಡಿದ.

ಟಿಕೆಟ್ ಸಿಗದಿದ್ರೂ ಚಿಂತೆಯಿಲ್ಲ ಪೋಲೀಸ್‌ನಿಂದ ಹೊಡೆತ ಬೀಳದಿದ್ದದ್ದು ಅವಳಿಗೆ ಸಮಾಧಾನ ತಂದಿತು. "ಸಧ್ಯ ಹೊಡೆತ ಬೀಳಲಿಲ್ಲ. ಫಿಲಂ ಬೇಡ ಬಾ ರಾಜು ಹೋಗೋಣ" ಎಂದಳು.

"ಬ್ಲಾಕ್‌ನಲ್ಲಾದ್ರೂ ತಗೊಂಡು ಹೋಗೋಣ ಸುಮ್ನಿರು ಲಕ್ಷ್ಮಿ. ನೋಡ್ಲೇ ಬೇಕಂತ ನಿರ್ಧಾರ ಮಾಡಿದ್ಮೇಲೆ ಮುಗಿದೋಯ್ತು. ನೋಡ್ಲೇ ಬೇಕು, ಇಂತಹ ಚಿಕ್ಕ ಮಾತನ್ನೆ ಉಳಿಸ್ಕೊಳ್ದಿದ್ರೆ? ಲಕ್ಷ್ಮಿ ಲೇಡಿಸ್ ಕೌಂಟ್ರೇಲ್ಲಿ ರಷ್ ಇಲ್ಲಿಗಿಂತ ಕಡಿಮೆ ಇರ್ಬಹುದು" ಜ್ಞಾಪಕ ಮಾಡಿಕೊಂಡು ನುಡಿದ.

"ಹೌದು ಬಾ ನೋಡೋಣ—" ಎನ್ನುತ್ತ ಹೆಂಗಸರ ಕೌಂಟರ್ ಕಡೆ ಓಡಿದಳು. ರಾಜು ಹಿಂಬಾಲಿಸಿದ.

ಅಲ್ಲೂ ಸಾಕಷ್ಟು ಉದ್ದದ ಕ್ಯೂ ಇತ್ತು. ಅದನ್ನು ಕಂಡ ರಾಜು "ನಮಗೆ ಹಿಡಿದಾಗೆ ಇವ್ರಿಗೂ ಪ್ರೇಮದ ರೆಪ್ಪೆ ಹಿಡಿದಿರೊ ಹಾಗೆ ಕಾಣ್ಸುತ್ತೆ" ಎಂದು ಲಕ್ಷ್ಮಿಗೆ ಕೇಳುವಂತೆ ಗೊಣಗಿದ. ಮುಗುಳ್ನಗೆ ತೇಲಿಸಿದ ಲಕ್ಷ್ಮಿ "ರಾಜು ಹಣ ಕೊಡು ನಾನ ಟ್ರೈ ಮಾಡ್ತೀನಿ. ತಗೋ ಬ್ಯಾಗ್" ಎಂದು ಅವನ ಕೈಗೆ ಬ್ಯಾಗ್ ಇತ್ತು, ಹಣ ಪಡೆದು ಸಾಲಿನ ಕೊನೆಗೆ ನಿಂತಳು. ರಾಜು ಬ್ಯಾಗ್ ಹೆಗಲಿಗೆ ಹಾಕಿಕೊಂಡು ನಿಂತ. ಲಕ್ಷ್ಮಿ ನಿಂತ ಸ್ವಲ್ಪ ಹೊತ್ತಿಗೆ ವಿದ್ಯಾರ್ಥಿನಿಯರು ತಂಡ ತಂಡವಾಗಿ ಬಂದು ಸೇರಿದರು. ಕೆಲಸವಿಲ್ಲದೆ ಕುಳಿತ ಆ ಭಾಗದ ಪೋಲೀಸ್ ಏಳಬೇಕಾಯಿತು ಹೆಂಗಸರು ನೂಕು ನುಗ್ಗಾಟದಲ್ಲಿ ಗಂಡಸರಿಗಿಂತ ಒಂದು ಕೈ ಮೇಲೆಂಬುದನ್ನು ಬಲ್ಲ ಪೋಲೀಸ್ "ಸರಿಯಮ್ಮ, ಸರಿ ಸರಿ "ಎನ್ನುತ್ತ ಹಿಂದೆ ಸರಿಸಿದ.

ಸ್ವಲ್ಪ ಹೊತ್ತಿಗೆ ಕೌಂಟರ್‌ನ ಕಿಟಕಿ ತೆರೆದು, ಒಬ್ಬರಿಗೆ ಎರಡರಂತೆ ಟಿಕೆಟ್ ಕೊಡಲಾರಂಭಿಸಿದ ಮೇಲಂತೂ ನುಗ್ಗಾಟ, ಗುದ್ದಾಟ ಎಲ್ಲ ಹೆಚ್ಚಾಗತೊಡಗಿತು. ಈ ಹಿಡಿಂಬೆ, ಶೂರ್ಪನಕಿಯರ ಮಧ್ಯೆ ತನ್ನ ಪ್ರೇಯಸಿ ಎಲ್ಲಿ ಅಪ್ಪಚ್ಚಿಯಾಗುವಳೋ ಎಂದು ರಾಜು ಚಿಂತಿಸಿದ. ಹಿಂದಿನ ಮುಂದಿನ ಒತ್ತಡದಿಂದ ಲಕ್ಷ್ಮಿಯ ಮುಖ ಕೆಂಪಾಗಿ ಅಳುವುದೊಂದು ಬಾಕಿ ಉಳಿದಿತ್ತು. ಕೌಂಟರಿನತ್ರ ಹೋಗುವಷ್ಟರಲ್ಲಿ ಸಾಕಾಗಿ ಹೋಯ್ತು. ಕುದುರೆ ಬಾಲದಂತೆ ಇದ್ದ ಜಡೆ ಚಲ್ಲು ಹೊಡೆದಿತ್ತು. ಮುಖದಲ್ಲಿ ಬೆವರಿನ ಕಣಗಳು ಮೂಡತೊಡಗಿತು. ಇನ್ನೇನು ಟಿಕೆಟ್ ಸಿಕ್ಕಿತು ಎಂದುಕೊಳ್ಳುತ್ತಿದ್ದಂತೆ ಯಾರಾದರೂ ಅವಳನ್ನು ಅತ್ತ ಇತ್ತ ನೂಕಿ ತಮ್ಮ ಜನ್ಮವನ್ನೆ ಸಾರ್ಥಕಗೊಳಿಸಿಕೊಂಡವ ರಂತೆ ಸಮಾಧಾನವಾಗಿ "ಎರಡು ಕೊಡಿ " ಎನ್ನುತ್ತಿದ್ದರು. ಲಕ್ಷ್ಮಿಯ ಪ್ರಯತ್ನವೆಲ್ಲ ವಿಫಲವಾಗುತ್ತಿರುವುದನ್ನು ನೋಡಿದ ರಾಜು "ಅಯ್ಯೋ ಪೋಲೀಸ್ . ಒಂದು ಹುಡ್ಗಿ ಅನ್ಯಾಯವಾಗಿ ಸಾಯ್ತಿದೆ" ಎಂದು ಕೂಗುತ್ತ ಪೋಲೀಸ್ ಬಳಿಗೆ ಓಡಿದ.

ಪೋಲೀಸ್ ಬಂದು ನುಗ್ಗುತ್ತಿದ್ದವರನ್ನು ಸರಿಯಾಗಿ ನಿಲ್ಲಿಸಿದ ತಕ್ಷಣ ಲಕ್ಷ್ಮಿಗೆ ಎರಡು ಟಿಕೇಟ್ ಸಿಕ್ಕವು. ಕಣ್ಣಿನ ಮುಂದೆ ಬಂದಿದ್ದ ಕೂದಲನ್ನು ಬೆರಳಿನಿಂದಲೇ ಹಿಂದೆ ಸರಿಸಿ ಬಲಗೈನಲ್ಲಿ ಟಿಕೆಟ್ ಹಿಡಿದು ಬೆವೆತು ಏದುಸಿರು ಬಿಡುತ್ತ ಓಡಿ ಬಂದ ಲಕ್ಷ್ಮಿ ರಾಜನೊಡಗೂಡಿದಳು "ಪೋಲೀಸ್ ತುಂಬಾ ಥ್ಯಾಂಕ್ಸ್ " ಎಂದು ಎಡಗೈಯಿಂದ ಅವಳ ಬಲಗೈ ಹಿಡಿದು ಬಲಭುಜಕ್ಕೆ ಬ್ಯಾಗ್ ಹಾಕಿಕೊಂಡು ಥಿಯೇಟರ್‌ನೊಳಗೆ ಅವಳನ್ನೂ ಎಳೆದುಕೊಂಡು ಓಡಿದ. ಪೋಲೀಸ್ ಬೆಪ್ಪನಂತೆ ಅವರಿಬ್ಬರೂ ಓಡುವುದನ್ನು ನೋಡುತ್ತ ನಿಂತ

○ ○ ○

ರೂಮಿನ ಹೊರಗಿನಿಂದಲೇ "ಪಾಪೂ ಪಾಪೂ ಎರಡ್ಗಂಟೆಯಿಂದ ಮಾತ್ರೆನೇ ನುಂಗಿಲ್ವಲ್ಲೊ? " ಎನ್ನುತ್ತ ತಾಯಿ ಮಂಜಮ್ಮ ಗ್ಲಾಸಿನಲ್ಲಿ ನೀರು ಮತ್ತೊಂದು ಕೈನಲ್ಲಿ ಆಯುರ್ವೇದಿಕ್‌ನ ಹಸಿರು ದುಂಡನೆ ಮಾತ್ರೆ ತಂದಳು

ತಲೆ ತುಂಬ ಲಕ್ಷ್ಮಿಯ ರೂಪನ್ನೆ ತುಂಬಿಕೊಂಡಿದ್ದ ರಾಜ ವಾಸ್ತವಕ್ಕಿಳಿದು "ನೀನು ಇಂತಾ ದೊಡ್ಡ ಮಗನನ್ನೇ ಪಾಪೂ ಅಂತೀಯಲ್ಲಮ್ಮ ? ನೀನು ಯಾವ

ಪಾಪಕ್ಕೆ ಹೋಗ್ತ್ತಿಯೋ ಆ ದೇವರಿಗೇ ಗೊತ್ತು. ಏನೇನೊ ಪಾಠದ ಯೋಚ್ನೆ ಮಾಡ್ಬೇಕಾದ್ರೆನೆ ಬಂದಲ್ಲ. ಅದೇನು ನಿನ್ನ ಬುಡಬುಡಿಕೆ ಬಾರ್ಸ್ಲಿ ಬೇಗ ಹೋಗು" ಎಂದು ತಾಯಿಯನ್ನು ಅಣಕಿಸಿದ.

"ನೋಡಿದ್ರೇನ್ರಿ ಇವ್ನು ಯಂಗೆ ಬಾಯಿಗೆ ಬಂದಾಗೆ ಮಾತ್ನಾಡ್ತಾನೆ. ಮಾತ್ರೆ ನುಂಗಿಲ್ವಲ್ಲೊ ಅಂದ್ರೆ" ಕೆಳಗಡೆ ಕುರ್ಚಿಗೊರಗಿ ಕುಳಿತಿದ್ದ ಗಂಡನಿಗೆ ಕೂಗಿ ಹೇಳಿದಳು.

"ಅವ್ನೇನು ಸಣ್ಣ ಮಗು ಅಲ್ಲ. ನುಂಗ್ದಿ ಏನು? ಕೊಡೇ " ಎಂದು ಆದೇಶಿಸಿ ಗದರಿದರು.

"ನೋಡ್ದೇನೊ? ತಗಳೊ ಬೇಗ" ಎಂದಳು ಮಂಜಮ್ಮ.

"ಹ್ಞಾ ನೀನೆ ಹಾಕು ಬಾಯೊಳಗೆ" ಎಂದು ಮಂಡಿ ಬಗ್ಗಿಸಿ ಬಾಯಿ ತೆರೆದ. ಮಾತ್ರೆ ಬಾಯಿಗೆ ಹಾಕಿ ನೀರು ಕುಡಿಸಿದಳು. ಮುಗಿಯುತ್ತಿದ್ದಂತೆ ಅಲ್ಲಿಂದ ಛಂಗನೆ ಕೆಳಗೆ ನೆಗೆದ ರಾಜು.

"ಮೆಲ್ಲಗೆ ಹೋಗೋ ಪಾಪು ಬಿದ್ರೆ ಕೈ ಕಾಲು ಮುರಿದೋಗುತ್ತೆ ಅಷ್ಟೆ" ರೋಸಿ ನುಡಿಯುತ್ತ ನಿಧಾನವಾಗಿ ತಮ್ಮ ಭಾರವಾದ ದೇಹವನ್ನು ಒಂದೊಂದೆ ಮೆಟ್ಟಿಲಿನಿಂದ ಇಳಿಸತೊಡಗಿದಳು.

"ನಾನೇನು ಬೀಳೋಕೆ ನಿನ್ನಾಗೆ ದಪ್ಪ ಇಲ್ಲ. ಬಿದ್ರೆ, ಕೈ ಕಾಲು ಮುರಿದು ಕೊಳ್ಳೋಕೆ ಅಪ್ಪನಷ್ಟು ತೆಳ್ಳಗೂ ಇಲ್ಲ" ಎನ್ನುತ್ತ ಅಲ್ಲೇ ಕುಳಿತು ತಂದೆಯ ಕಡೆ ಕೈ ತೋರಿ ನುಡಿದು ಹಿಂಬಾಗಿಲು ದಾಟಿ ಓಡಿದ. ಕಡೆಯ ಮೆಟ್ಟಿಲು ಇಳಿದ ಮಂಜಮ್ಮ "ನೋಡಿದ್ರೇನ್ರಿ ಅವ್ನ ಆಟನಾ? ಇತ್ತೀಚೆಗೆ ಬಹಳ ಹಠಕಲ್ತಿದ್ದಾನೆ. ನನ್ನ ಸೊಂಟದಲ್ಲಿರೋ ದುಡ್ಡನ್ನೂ ಹೊಡ್ಕೊಂಡು ಹೋಗ್ತಾನೆ" ಪ್ರೀತಿಯಿಂದಲೇ ಬೈದಳು.

"ನೀನೇಗೆ ಕರುಣೆ ಇಲ್ದೆ ನನ್ನ ಜೇಬಿನಿಂದ ದುಡ್ಡು ಹೊಡೆದೋ ಹಾಗೆ ನಿನ್ನ ಭಾವನೆ ರಕ್ತಗತವಾಗಿ ನಿನ್ಮಗನಿಗೆ ಬಂದ್ಬಿಟ್ಟಿದೆ. ಒಡ್ಡೀಮಗ ಯಂಗೆ ಬೆಳ್ದಿದ್ದಾನೆ!

ಮನ್ಮಥ ಆಗಿದ್ದಾನೆ. ಅವ್ನ ಹಣೆಬರ್ದಾಗೆ ಜಾಸ್ತಿ ಬುದ್ಧಿ ಕೊಟ್ಟಿದಿದ್ರೆ ಆ ಮಾತೇ ಬೇರೆ ಇತ್ತಿತ್ತು ಮಂಜೀ...... ಏನ್ಮಾಡೋದು? ಚಿಕ್ಕವನಿದ್ದಾಗ ಅಷ್ಟು ಗಮನ ಕೊಡ್ಲಿಕ್ಕೆ ಆಗ್ಲಿಲ್ಲ. ದೇವ್ರ ದಯೆಯಿಂದ ಆರೋಗ್ಯ ಚನ್ನಾಗಿದೆಯಲ್ಲ ಸಾಕು" ಎಂದು ಯಾವುದೋ ಕಾರಣಕ್ಕೆ ಸಡಿಲ ಬಿಟ್ಟು ಬೆಳೆಸಿದ್ದುದನ್ನು ನೆನೆದು ವ್ಯಸನದಿಂದ ನುಡಿದು ನಿಟ್ಟುಸಿರು ಬಿಟ್ಟರು.

"ಹೋಗ್ಲಿ ಬಿಡಿ ಯೋಚ್ನೆ ಏನೀಗ? ಅವ್ನಿಗೆ ಒಳ್ಳೆಕಡೆ ಹೆಣ್ಣು ನೋಡಿ ಮದುವೆ ಮಾಡಿದ್ರೆ ಹೇಗೆ? ವಯಸ್ಸೂ ಇಪ್ಪತ್ತೈದು ಆಗ್ತ ಬಂತು" ಎಂದು ತನ್ನ ಒಬ್ಬನೆ ಮಗನ ಮದುವೆ ಮಾಡುವ ಬಯಕೆಯನ್ನು ಹೇಳಿಕೊಂಡಳು.

"ಅದ್ಕೆ ಮಂಜೀ ನಿನಗೆ ಮಂಕುದೆಣ್ಣೆ ಅನ್ನೋದು. ಮದ್ವೆ ಮಾಡೋದು ದೊಡ್ದಲ್ಲ ಕಣೇ ಇವ್ನು ಹೆಂಡ್ತಿ ಮಕ್ಳನ್ನ ಸಾಕ್ತಾನಾ? ಅದೂ ಯೋಚಿಸೋದು ಬ್ಯಾಡ್ವ? ಇವ್ನಿಗೆ ನೋಡಿದ್ರೆ ಯಾವ ಕೆಲ್ಸನೂ ಬರಲ್ಲ. ಇದೇ ನನ್ ಚಿಂತೆಯಾಗಿದೆ'' ಎಂದು ಮರುಗಿದ.

"ಅಂಗಂತ ಬೆಳೆದ ಹುಡ್ಗನ್ನ ಅಂಗೇ ಬಿಟ್ರೆ, ಕೊನೆಗೆ ಇವ್ನು ಹೇಳ್ದೆ ಕೇಳ್ದೆ ಯಾವಳ್ನಾದ್ರೂ ಕಟ್ಕೊಂಡ್ರೋ...... ?'' ಎಂದು ತನ್ನ ಮಾತಿಗೆ ಪುಷ್ಟಿ ಕೊಡಲು ಪ್ರಯತ್ನಿಸಿದಳು.

ಆಶ್ಚರ್ಯದಿಂದ ಏನೋ ಕಂಡವರಂತೆ "ಹೌದುಕಣೇ ಮಂಜೀ, ನನ್ ತಲೆಗೆ ಹೋಗಲಿಲ್ಲದ್ದು ನಿನ್ ತಲೆಗೆ ಹೊಳೀತು. ನಾನು ಅದ್ರ ಬಗ್ಗೆ ಚಿಂತೆ ಮಾಡೇ ಇಲ್ಲ. ಈ ನನ್ಮಗ ಅದ್ನೇ ಮಾಡಿದ್ರೂ ಮಾಡ್ಬಹುದು. ನೋಡೋಕೆ ಮನ್ಮಥನಂಗೆ, ಎತ್ರ, ದಪ್ಪ ಬೇರೆ. ಯಾವಳಾದ್ರೂ ಮೋಡಿ ಮಾಡಿದ್ರೆ ಮುಗಿದೋಯ್ತು. ನಮ್ಗೂ ಇವ್ನ ಬಿಟ್ರೆ ಗತಿ ಇಲ್ಲ. ಈ ವಯಸ್ಸಿನ ಹುಮ್ಮಸ್ಸಿನಲ್ಲಿ ತಂದೆ ತಾಯಿಯರನ್ನೂ ಬಿಡೋಕ್ಕೆ ಹಿಂದೆ ಮುಂದೆ ನೋಡಲ್ಲ. ಇರ್ಲಿ ಈ ವರ್ಷ ಪರೀಕ್ಷೆ ಮುಗಿಲಿ ಮದ್ವೆ ಮಾಡೋಣ". ಎಂದರು. ಮಂಜಮ್ಮ ತಲೆ ತೂಗಿ 'ಹೂಂ ' ಗುಟ್ಟಿ ಸಮ್ಮತಿ ಸೂಚಿಸಿದಳು. "ಇರಿ,

ಮಾತಿಗೇನು ಬರ ಬೇಗ ತಿಂಡಿ ಮಾಡ್ತೀನಿ" ಎಂದು ದಷ್ಟಪುಷ್ಟ ದೇಹವನ್ನು ಹೊತ್ತು ಅಡಿಗೆ ಮನೆಯ ಕಡೆ ನಡೆದಳು.

ಮಂಜಮ್ಮ ಹಳ್ಳಿಯವಳು, ಅನಕ್ಷರಸ್ಥೆಯೂ ಆಗಿದ್ದರಿಂದಲೋ ಏನೋ ತನ್ನ ಸಂಸಾರದ ವಿಷಯದಲ್ಲಿ ತನಗೆ ಸರಿಯೆಂದು ತೋರಿದ್ದನ್ನು ಮಾಡುವುದರೊಂದಿಗೆ, ಗಂಡನಾಗಲಿ ಮಗನಾಗಲಿ ಹೇಳಿದ ಕೆಲಸವನ್ನು ಮಧ್ಯೆ ರಾತ್ರಿ ಇಂತಿಷ್ಟು ಹೊತ್ತಿಗೆ ಎಂದರೂ ಚಾಚೂ ತಪ್ಪದೆ ಮಾಡಿ ಮುಗಿಸುವ ನಿಪುಣೆ. ವೆಂಕಟಯ್ಯ ಆ ವಿಷಯದಲ್ಲಿ ತಾನು ಪುಣ್ಯಮಾಡಿರುವೆನೆಂದೇ ತಿಳಿದಿದ್ದ. ಇನ್ನು ಬಜಾರಿಯಂತ ಹೆಣ್ಣು ತಮಗೇನಾದರೂ ಸಿಕ್ಕಿದಿದ್ದರೆ, ಬಾಳು ನಾಯಿ ಪಾಡಾಗುತ್ತಿತ್ತು ಎಂಬುದನ್ನು ಅರಿತಿದ್ದರು. ಬಲು ಏಕಾಗ್ರ ಚಿತ್ತದ ವ್ಯಕ್ತಿಯಾಗಿದ್ದ ಅವರು ಆಲೋಚಿಸುತ್ತ ಕುಳಿತರೆ ಎಲ್ಲವನ್ನೂ ಮರೆಯುತ್ತಿದ್ದರು ಅವರು ಆಲೋಚನಾ ಮಗ್ನರಾಗಿದ್ದರು. ಸ್ಟೌವ್‌ನ ಸದ್ದು ಅಡಿಗೆ ಕೋಣೆಯಲ್ಲಿ ತುಂಬಿರುವಂತೆಯೆ, ತಿಂಡಿ ಮಾಡುವುದರಲ್ಲಿ ಮಗ್ನಳಾಗಿದ್ದಳು ಮಂಜಮ್ಮ. ಮನೆಯ ಹಿಂಬದಿಯಲ್ಲಿನ ಮಗನ ಕೂಗು ಮಾತ್ರ ಇಬ್ಬರಿಗೂ ಕೇಳುವಂತಿರಲಿಲ್ಲ. ಇಬ್ಬರೂ ಒಂದು ವಿಧದಲ್ಲಿ ಕಿವುಡರೇ ಆಗಿದ್ದರು.

ರಾಜು ಅತ್ತ ಇತ್ತ ನೋಡಿ ಪಂಚೆ ಪೋಕ್ಕೆ ಮಡಿಚಿ ಸಿಕ್ಕಿಸಿ, ' ಇನ್ನು ತನ್ನ ತಂದೆ ತಾಯಿಯರಿಗೆ ಸ್ವರ ಕೇಳುವುದಿಲ್ಲವೆಂದು , ನಿರ್ಧರಿಸಿದ. ಅತಿ ಪ್ರೇಮಾಂಧತೆಯಲ್ಲಿ ಆ ಮನೆಯವರಿಗೆ ತನ್ನ ಕೂಗು ಕೇಳಿಸುವುದೋ ಇಲ್ಲವೋ ಎಂದೂ ಸಹ ಗಮನಿಸದೆ ಎರಡೂ ಮನೆಯ ಮಧ್ಯದ ಕಾಂಪೌಂಡ್ ಬಳಿಗೆಹೋಗಿ " ಲಕ್ಷ್ಮಿ ಲಕ್ಷ್ಮಿ ಏಯ್ ಲಕ್ಷ್ಮಿ "ಕರೆದ ಮೆಲುದನಿಯಲ್ಲಿ.

ಹೃದಯದ ತುಂಬ ರಾಜನ ಮೂರ್ತಿ ತುಂಬಿಕೊಂಡಿದ್ದರಿಂದ ಓದುತ್ತ ಕುಳಿತ ಲಕ್ಷ್ಮಿಯ ಕಿವಿ ನಿಮಿರಿದವು. ಕಣ್ಣು ಒಂದು ಕಡೆ ಕೇಂದ್ರಿಕರಿಸಿ ಮತ್ತೊಮ್ಮೆ ಆಲಿಸಿದಳು. 'ಸಂಶಯವಿಲ್ಲ ರಾಜನದೆ! ಧ್ವನಿ. ಯಾಕೆ ಕರೆಯುತ್ತಿರಬಹುದು? ಎಂತಹ ಹುಚ್ಚು ಹುಡುಗನಾಗಿ ಬಿಟ್ಟ. ಸ್ವಲ್ಪವಾದ್ರೂ ಯೋಚಿಸುವುದಿಲ್ಲ. ಈ ವಿಷ್ಯ ಡ್ಯಾಡಿಗೆ ಗೊತ್ತಾದ್ರೆ ತೊಂದ್ರೆ ಇಲ್ಲ. ಮಮ್ಮಿಗೇನಾದ್ರೂ ಗೊತ್ತಾದ್ರೆ ಚರ್ಮ ಸುಲಿದೇ ಬಿಡ್ತಾಳೆ. ಈ ಕ್ಷಣವೇ

ಹೋಗಿ ವಿಚಾರಿಸದಿದ್ರೆ ಅವನು ದನಿ ಮತ್ತಷ್ಟು ಏರಿಸ್ಬಹುದು, ಆಗ ಮಮ್ಮಿಗೂ ಕೇಳಿದರೆ ಕಷ್ಟ ' ಎಂದುಕೊಂಡು ಎದ್ದು ಹೊರಟಳು.

ಅಷ್ಟರಲ್ಲಿ ಮತ್ತೊಮ್ಮೆ "ಲಕ್ಷ್ಮಿ ಲಕ್ಷ್ಮಿ " ಎಂದ.

ಮೂರನೆಯ ಬಾರಿಯೂ ಹಲ್ಲು ಕಚ್ಚಿ ಕೇಳಿದ ಸಾವಿತ್ರಿಗೆ ಮಾತ್ರ ಕೋಪ ತಡೆಯುವಂತಿರಲಿಲ್ಲ. ಮೂಗರಳಿಸಿ ಕಣ್ಣಲ್ಲಿ ರೋಷ ತುಂಬಿಕೊಂಡು ಬಿರುಗಾಳಿಯಂತೆ ತನ್ನ ರೂಮಿನ ಎದುರಿನಲ್ಲೇ ಹಾಯ್ದು ಹೋದದ್ದನ್ನು ಕಂಡು ಲಕ್ಷ್ಮಿ ಬಾಯಿ ಮೇಲೆ ಕೈ ಇಟ್ಟುಕೊಂಡಳು 'ವಿಷಯವೆಲ್ಲ ಎಲ್ಲಿ ಗೊತ್ತಾಗುವುದೋ' ಎನ್ನುವ ಭಯವೂ ಕಾಡಿತು. ಅಷ್ಟರಲ್ಲಿ ಮತ್ತೊಮ್ಮೆ "ಲಕ್ಷ್ಮಿ ಲಕ್ಷ್ಮಿ " ಎಂದು ಬಾಗಿಲ ಕಡೆ ನೋಡುತ್ತ ಕೂಗಿದರಾಜು. ಬಾಗಿಲ ಮರೆಯಿಂದ ರಣ ಹದ್ದಿನಂತೆ ಎರಗಿದ ಸಾವಿತ್ರಮ್ಮ " ಏಯ್ ಹುಡುಗನಿನಗೇನು ತಲೆ ಕೆಟ್ಟಿದೆಯಾ? ನಮ್ಮನೆ ಹುಡುಗಿ ಹೆಸ್ರು ಹಿಡಿದು ಕರೀತೀಯಲ್ಲ ಏನಾಗಿದೆ ನಿನಗೆ ? " ಕೋಪವನ್ನು ಒಮ್ಮೆಲೇ ಕಾರುವಂತೆ ಜೋರಾಗಿ ಕೂಗಿದಳು.

ಲಕ್ಷ್ಮಿಯ ಬದಲು ಇದ್ದಕ್ಕಿದ್ದಂತೆ ಪ್ರತ್ಯಕ್ಷಳಾದ ಸಾವಿತ್ರಿಯನ್ನು ನೋಡಿ "ಹ್ಞಾ ಬಂದ್ರಾ ನೋಡಿ ನಿಮ್ಮನೆಯಲ್ಲಿ ಅಮೃತಾಂಜನ್ ಇದೆಯಾ? ಇದ್ರೆ ಸ್ವಲ್ಪ ಕೊಡಿ. ಐಸ್ ತಿಂದು ಶೀತ ಆಗಿದೆ" ಎಂದು ಮೂಗು ತೀಡಿದ.

"ಏನೋ ಕೇಳಿದ್ರೆ, ಏನೋ ಹೇಳ್ತೀಏನೋ ?ನಿನಗೆ ಗ್ರಹಚಾರ ಕಾಡಿದೆಯೇನು?" ಗಯ್ಯಾಳಿಯಾಗಿದ್ದವಳ ಬಾಯಿ ಜೋರಾಯಿತು.

"ಹೊಯ್ ಏನಮ್ಮ ಬಾಯಿಗೆ ಬಂದಾಗೆ ಅಂತೀಯಲ್ಲಾ? ನಾನೇನ್ಮಾಡ್ದೆ? ನನಗೆ ನೆಗಡಿಯಾಗೈತೆ ಸೀನ ಬಾರ್ದ? " ಎಂದವನೇ 'ಅಕ್ಷೀ ' ಎಂದು ಧೀರ್ಘವಾಗಿ ತಲೆ ಹಾಕಿ ಸುಳ್ಳುಸೀನು ಹಾಕಿದ

ನನ್ಮಗಳ ಹೆಸ್ರು ಕೂಗಿದಲ್ದೆ ನನಗೇ ಜೋರ್ಮಾಡ್ತೀಯೇನೋ ಪೋಲೀಸ್ ಸ್ಟೇಷನ್ ಗೆ ಹೋಗಿ ಕಂಬಿ ಎಣಿಸ್ಬೇಕ ದ್ರೀತು ಮರ್ಯಾದೆಯಿಂದ ಹೋಗು"ದನಿ ಏರತೊಡಗಿತು.

ಆ ಬದಿಯಿಂದ ವೆಂಕಟಯ್ಯ, ಮಂಜಮ್ಮ ಗಾಬರಿಯಿಂದ "ಏನು? ಏನು?. " ಎಂದು ಬಾಯ್ಬಿಟ್ಟು ಪ್ರಶ್ನಿಸಿಕೊಳ್ಳುತ್ತಲೇ ಓಡೋಡಿ ಬಂದರು. ಇನ್ನೊಂದು ಕಡೆಯಿಂದ ಸಾವಿತ್ರಿಯ ಗಂಡ ರಮೇಶಪ್ಪ, ಲಕ್ಷ್ಮಿ ಬಂದರು. ಅವರು ಏನೂ ಅರಿಯದೆ ಮುಖ ಮುಖ ನೋಡಿಕೊಂಡರೆ, ಎಲ್ಲ ಗೊತ್ತಿದ್ದು ಏನೂ ಅರಿಯದವಳಂತೆ ಲಕ್ಷ್ಮಿ ನೋಡತೊಡಗಿದಳು.

ವೆಂಕಟಯ್ಯ ಮಂಜಮ್ಮನವರನ್ನು ನೋಡಿದ ತಕ್ಷಣವೇ ಸಾವಿತ್ರಮ್ಮ ಮತ್ತಷ್ಟು ರೋಷದಿಂದ "ನೋಡ್ರಿ ನಿಮ್ಮಗನ್ನಾ.. ಮಾನ ಮರ್ಯಾದೆ ಎಲ್ಲಾ ಬಿಟ್ಟವ್ನಂಗೆ ಕಾಣಿಸ್ತಾನೆ ಅವ್ನಿಗೆ ನೀವು ಬುದ್ಧಿ ಹೇಳ್ಬೇಕು. ಇಲ್ಲಾಂದ್ರೆ ನಾವೇ ಕಲಿಸ್ತೀವಿ. "

"ಯಾರು? ನಮ್ಮ ಹುಡ್ಗನೇ? ಏನ್ಮಾಡ್ದ ಹೇಳಿ ತಾಯಿ " ವೆಂಕಟಯ್ಯ ಮತ್ತಷ್ಟು ಸಮೀಪಕ್ಕೆ ಬಂದು ಸಮಾಧಾನವಾಗಿ ಕೇಳಿದರು

"ಇನ್ನೇನು ಮಾಡ್ಬೇಕು? ಹದ್ದುಬಸ್ತಿನಲ್ಲಿಡದ ನಿಮ್ಮುಡ್ಗ ಏನ್ಮಾಡಿದ್ರೂ ನಿಮಗೆ ಇಷ್ಟವೇ ಮಾನ ಮರ್ಯಾದೆಯಿಂದ ಬಾಳೋ ಮನೆಗೆ ಕೆಟ್ಟ ಹೆಸ್ರು ಬರೋ ಹಾಗೇ ಮಾಡ್ತಿ ಏನೋ ? " ತಾರಕ ಸ್ವರ ಏರುವುದರೊಂದಿಗೆ ನೋಟ ರಾಜನ ಕಡೆ ತಿರುಗಿತು

"ಅಂತದೇನು ಮಾಡಿದ್ದಾನೆ ಸ್ಪಷ್ಟವಾಗಿ ಹೇಳಿ ತಾಯಿ ನಾನು ಬುದ್ಧಿ ಕಲಿಸ್ತೀನಿ " ದೃಢ ನಿರ್ಧಾರದಿಂದ ಹೇಳಿದರು ವೆಂಕಟಯ್ಯ.

"ನೀವು ಕಲ್ಸೋದೇನು ? ಹೀಗೆ ಮಾಡಿದ್ರೆ ಹಲ್ಲೋ, ಕೈ ಕಾಲೋ ಮುರಿದು ಬೀರಿಯುನ್ರಿ ಬುದ್ಧಿ ಕಲಿಸ್ತಾರೆ. ನನ್ಮಗಳ ಹೆಸ್ರು ಹಿಡಿದು ಕೂಗೋದೇನ್ರಿ ನಿಮ್ಮಗ? ಹೇಳ್ರಿ ಬುದ್ಧಿ, ಅದ್ಯಾವತರ ಹೇಳ್ತೀರಿ ನಿಮ್ಮನೆಯ ಹೆಂಗ್ಸರ ಹೆಸ್ರನ್ನ ಪಕ್ಕದ್ಮನೆ ಗಂಡಸ್ರು ಕೂಗಿದ್ರೆ ಸುಮ್ನೆ ಇರ್ತೀರೇನ್ರಿ? "

ಸಾವಿತ್ರಮ್ಮಳ ವಾಕ್ಪಟುತ್ವ ವೆಂಕಟಯ್ಯನ ಬಾಯಿ ಮುಚ್ಚಿಸಿತು ಏನಾಡ ಬೇಕೆಂದು ತೋರದ ಒದ್ದಾಡುತ್ತಿದ್ದಂತೆ ರಾಜು "ನೋಡಪ್ಪ ನನಗೆ ನೆಗಡಿ ಆಗಿದೆ,ಇಲ್ಲಿ

ನಿಂತ್ಕೊಂಡು ಅಕ್ಷಿ . ಅಕ್ಷೀ . ಅಂದೆ. ಅಷ್ಟಕ್ಕೆ ಇವ್ರು ಬಂದು, ಏನೋ ತಲೆ ಕೆಟ್ಟಿದೆಯಾ ? ಅಪೇರಿ ಮಾಡ್ಬೇಕಾ ? ನನ್ಮಗಳ ಹೆಸ್ರು ಕರೀತಿಯಂತ, ಕಾಲ್ಕೆರೆದು ಜಗ್ಳಕ್ಕೆ ಬೀಳೋದೆ? " ಎಂದು ತಂದೆಯ ಕಡೆ ತಿರುಗಿ ನುಡಿದು ಮುಗಿಸಿ ಮತ್ತೆ ಸಾವಿತ್ರಮ್ಮನ ಕಡೆ ತಿರುಗಿ ಮೂಗು ಹಿಂಡಿ ಕಾಂಪೌಂಡಿಗೆ ಒರೆಸಿದಂತೆ ಮಾಡಿ "ಏನ್ರಿ. ನಿಮ್ಮ ಮಗಳು ತ್ರಿಲೋಕ ಸುಂದ್ರಿ ಅಂತಾ ತಿಳ್ಕೊಂಡ್ರಾ? ಇಂತವ್ರು ಎಷ್ಟು ಜನ ಬೇಕು ನಿಮಗೆ? ಮದುವೆ ಆಗ್ತೀನಿ ಅಂದ್ರೆ ಸಾಕು ಕ್ಯೂ ನಿಲ್ತಾರೆ ತಿಳ್ಕೊಳ್ಳಿ" ತಾನೂ ದಬಾಯಿಸಿದ. ತಾಯಿ ಮಂಜಮ್ಮ "ಹ್ಞಾ, ಅಷ್ಟೆ. ನಮ್ಮುಡ್ಗ ಯಾವ್ದರಲ್ಲಿ ಕಡಿಮೆ?" ಎದೆ ತಟ್ಟಿಕೊಂಡಳು.

ಸಾವಿತ್ರಮ್ಮ ಹಲ್ಲು ಕಡಿಯುತ್ತಿದ್ದಂತೆ, ಲಕ್ಷ್ಮಿ "ಹ್ಞೂ . ನೀನೆಲ್ಲಾದ್ರೂ ನನ್ಹೆಸ್ರು ಕರೀಬೇಕಿತ್ತು. ಈಗೇಕೆ ಆ ಮಾತು. ಹೋಗ್ಲಿ ಬಾ ಮಮ್ಮಿ. ಇಷ್ಟಕ್ಕೆಲ್ಲಾ ಎಂತಾ ಜಗಳಾ"– ರಾಜನನ್ನು ದುರುಗುಟ್ಟಿ ನೋಡುತ್ತ ನುಡಿದಳು.

ಪ್ರತಿಯಾಗಿ ರಮೇಶಪ್ಪ "ಹೌದು ಕಣೆ ಸಾವಿತ್ರಿ ಇಷ್ಟಕ್ಕೆಲ್ಲ ಎಂತಾ ಜಗಳ. ನೀವು ಹೋಗಿ ಸಾರ್ " ವೆಂಕಟಯ್ಯನವರಿಗೆ ಹೇಳಿ ಹೆಂಡತಿಯ ರಟ್ಟೆ ಹಿಡಿದೆಳೆದು, ಕರೆದು ಕೊಂಡು ಒಳಗೆ ನಡೆದ.

ತಪ್ಪು ಮಾಡಿದ್ದಲ್ಲದೆ ನಾಟಕದಿಂದ ಜಯವನ್ನೂ ಸಾಧಿಸಿದ ರಾಜು ಮಹಾ ಗಂಭೀರನಾಗಿ ತಂದೆ ತಾಯಿಯರನ್ನು ಹಿಂಬಾಲಿಸಿದ.

"ಅಲ್ಲಲೇ ರಾಜ ನಿನ್ಗೆ ಅಲ್ಲೇ ಜಾಗ ಇರೋದೇನೊ? ಬೇರೆಲ್ಲೂ ಜಾಗ ಸಿಗೋಲ್ವೆ?" ಕೇಳಿದ ವೆಂಕಟಯ್ಯ.

"ಮತ್ತೇನು? ಒಳಗೇ ಸೀನಿ ನಿನ್ನ ಕೋಟಿಗೆ ಒರೆಸ್ಬೇಕ? ಆಗ್ಲಿ ಬಿಡು ಅಂಗೇ ಮಾಡ್ತೀನಿ." ಎಂದು ತಂದೆಯ ಬಾಯ್ಮುಚ್ಚಿಸಿದ.

ಸಾವಿತ್ರಿಗೆ ಜಗಳದಲ್ಲಿ ತನ್ನ ಸೋಲಿಗೆ ಕಾರ್ಣಕಾರರಾದ ಗಂಡ ಮತ್ತು ಮಗಳ ಮೇಲೆಯೂ ಕೋಪವೇರಿತು. ತಡೆದುಕೊಳ್ಳದಿದ್ದರೆ ಮುಖರ್ತನವಾದೀತು ಎಂದು ಹಲ್ಲು ಕಚ್ಚಿ ಸಹಿಸಿಕೊಂಡಳು.

## ೮

ಪುರುಷೋತ್ತಮ ಸ್ಕೂಟರ್ ಏರಿ ಅತಿವೇಗದಿಂದ ರಸ್ತೆಗೆ ತಾನೊಬ್ಬನೆ ಎನ್ನುವಂತೆ ಓಡಾಡುವವರನ್ನು ಲೆಕ್ಕಿಸದೆ ರಸ್ತೆಯ ಒಂದು ಬದಿಯಿಂದ ಇನ್ನೊಂದು ಬದಿಗೆ ಹಾವಿನಂತೆ ರಸ್ತೆಯನ್ನು ಹಿಮ್ಮೆಟ್ಟಿಸಿ, ಬಸವನ ಮನೆಯ ಎದುರಿಗೆ ಬಂದವನೇ ಬ್ರೇಕ್ ಹಾಕಿ ನಿಲ್ಲಿಸಿದ. ಬಾಗಿಲಲ್ಲಿ ಯಾರೂ ಕಾಣದೆ, ಸ್ಕೂಟರ್ ಮೇಲೆಯೆ ಕಾಲೂರಿ ನಿಂತು "ಬಸ್ವಾ ಬಸ್ವಾ" ಕೂಗಿದ.

ಸ್ಕೂಟರಿನ ಸದ್ದಿನ ಹಿಂದೆಯೇ ಸ್ನೇಹಿತನ ದನಿ ಗುರ್ತಿಸಿದ ಬಸವ ಚಿಕ್ಕ ಬಾಗಿಲಿಗೆ ನಮಿಸುವಂತೆ ತಲೆ ಬಾಗಿಸಿ ಹೊರ ಬಂದು "ಓ ಹೋ ಏನ್ ಗುರು ಪ್ರತ್ಯಕ್ಷ ?" ಸಂತೋಷದಿಂದ ಪ್ರಶ್ನಿಸಿದ.

"ಏಯ್ ಬಾರಲೇ ಬಡ್ಡೀ ಮಗ್ನೇ. ಎರಡು ದಿನ ಎಲ್ಹೋಗಿದ್ದೋ? 'ಕಾಣೆಯಾಗಿದ್ದಾನೆಯಂತ' ಪೇಪರಿಗೆ ಹಾಕಿಸ್ಬೇಕೇನೋ?"

"ಈಗ ಎದುರಿಗೇ ಇದ್ದೀನಲ್ಲ ಗುರು. ಪೇಪರಿಗೆ ಹಾಕ್ಸೋ ದುಡ್ಡು ನನಗೇ ಕೊಟ್ಬಿಡು" ಎಂದು ತಮಾಷೆಯಾಗಿ ಮುಂದುವರಿಸಿದ "ಬರ್ತಿದ್ನಮ್ಮ ಏನೇನೋ ಕೆಲ್ಸ ಹಚ್ಕೊಂಡು ಬರ್ಲಿಕ್ಕೆ ಆಗ್ಲಿಲ್ಲ. ಏನ್ ಗುರು ಸಮಾಚಾರ?"

"ಏನೂ ಇಲ್ಲ! ನನ್ಮಗನೆ ನನಗಿಲ್ಲದ ಕೆಲ್ಸ ನಿನಗೇನೊ ಅಂತಾದ್ದು? ಹೇಳೊ"

"ಹೋಗ್ಲಿ ಬಿಡು ನಿನಗ್ಯಾಕೆ? ಯಾವ್ದೋ ಕೆಲ್ಸ ಹಚ್ಕೊಂಡು ಎರಡು ದಿನ ಊರ್ನಲ್ಲಿ ಇರ್ಲಿಲ್ಲ ನೀನು ಇಷ್ಟೊಂದು ಕಾಯ್ತಿಯಂತ ಗೊತ್ತಿದ್ದಿದ್ರೆ ನಾನು ಆ ಊರ್ನಲ್ಲಿ ಒಂದು ಕ್ಷಣವೂ ಉಳಿತಿರ್ಲಿಲ್ಲ"

"ಬಿಡಲೇ ಸಾಕು ಆಗಂತಲೇ ಹಿಂಗ್ಯಾ ಮುನ್ನೂರು ಕಿತ್ತೆ. ಈಗ ಮತ್ತೆಷ್ಟು ಕೀಳ್ಬೇಕಂತ ಮಾಡಿದ್ದೀಯಾ ?

'ನೋಡು ಗುರು ಅದು ನಮ್ಮಿಬ್ಬರ ಸ್ನೇಹದ ಕಾಣಿಕೆಯೆಂದು ಅವತ್ತು ನೀನೇ

ಹೇಳಿದ್ದೆ. ಆದ್ರೆಲ್ಲ ಇರ್ಲಿ ಗುರು ನಿನ್ನಿಂದ ನನಗೊಂದು ದೊಡ್ಡ ಉಪಕಾರ ಆಗ್ಬೇಕಿತ್ತು. ಅದು ನಿನ್ನ ಕೈನಲ್ಲಿ ಸಾಧ್ಯ. ನೀನು ನನ್ನ ಸ್ನೇಹಿತ ಅಂತ ಕೇಳ್ತಿದ್ದೀನಿ ಮಾಡ್ತೀಯಾ"? ದೀನನಾಗಿ ಬೇಡಿಕೊಂಡ."ಏನು ಹೇಳಮ್ಮ ಅದು? ಚಿಟಿಕೆ ಹೊಡೆಯೋದ್ರಲ್ಲಿ ಮುಗಿಸ್ತೀನಿ. ಗತ್ತಿನಿಂದ ಮುಖ ವಕ್ರ ಮಾಡಿಕೊಂಡು ನುಡಿದ.

"ಈ ಡಿಗ್ರಿ ಮುಗಿಯುತ್ತಿದ್ದಾಗೆ ನನಗೊಂದು ಕೆಲ್ಸ ಕೊಡಿಸ್ಲಿಕ್ಕೆ ನಿಮ್ ತಂದೆಗೆ ಹೇಳಲೋ . ನನ್ನ ತಮ್ಮಂದಿರೂ ಚಿಕ್ಕವ್ರು. ಅವ್ರನ್ನಾಗ್ರೂ ಒಳ್ಳೆ ದಾರಿಗೆ ತರ್ತೀನಿ. ಇದೊಂದು ಉಪಕಾರ ಮಾಡಿದ್ರೆ ಈ ಜನ್ಮದಲ್ಲೆಲ್ಲ ನಿನ್ ಎಂಜಲನ್ನೇ ತಿಂದ್ಕೊಂಡು ಬದುಕಿದ್ದೀನಿ ಅಂತ ಸಾರ್ತೀನಿ. ನಮ್ಮ ಮನೆಯಲ್ಲಿ ನಿನ್ನ ಫೋಟೋ ಇಟ್ಟು ಪೂಜೆ ಬೇಕಾದ್ರೂ ಮಾಡ್ತೀನಿ. '' ಅಂಗಲಾಚಿದ. ಮಾತು ಮುಗಿಯುವುದರೊಳಗೆ ಬಸವ ಮಾನಸಿಕವಾಗಿ ಪುರುಷೋತ್ತಮನ ಪಾದದಡಿ ಸೇರಿದ್ದ

ಹಾಸ್ಯ ಮಾಡುವಂತೆ ಜೋರಾಗಿ ನಗುತ್ತ ಸೀಟಿನ ಮೇಲೆ ಹಾರಿ ಕುಳಿತು ''ಏನು ಇದೊಂದು ದೊಡ್ಡ ಕೆಲಸನಾ ? ಅದೂ ನಿನ್ನಿಂದ ಹೇಳಿಸ್ಕೊಂಡು ನಾನು ಮಾಡ್ಬೇಕಾದ ಕೆಲ್ಸನಾ? ನಿನ್ನ ಯೋಗ್ಯತೆ ನನಗೊತ್ತಿಲ್ಲೇನೋ ಗೊತ್ತಿದ್ದೇ ನಮ್ಮ ತಂದೆಗೆ ಈ ಮಾತು ಹೇಳ್ಬಿಟ್ಟಿದ್ದೀನಿ. ನೀನಿನ್ನು ಚಿಂತೆ ಮಾಡ್ಬೇಡ ಧೈರ್ಯವಾಗಿರು. ನಾನು ಸತ್ಮೇಲ ಪೋಟೋ ಪೂಜೆ ಮಾಡುವಂತೆ, ಈಗ ಬೇಡ' ಎಂದು ಭುಜ ತಟ್ಟಿ .ಧೃಢವಾಗಿ ನುಡಿದ.

ಸಂತೋಷದಿಂದ ಹಿಗ್ಗಿ ಹೋದ ಬಸವ "ಒಳ್ಳೇದು ಗುರು ಕಾಲಿಗೆ?"ಆನಂದದ್ವೇಗದಿಂದ ನುಡಿದ "ಹುಚ್ಚ. ಅವೆಲ್ಲ ಬೇಡ ಸುಮ್ನಿರು" ವಿನಾಯಿತಿ ತೋರಿದ.

ಕ್ಷಣ ಹೊತ್ತಿನ ಮೌನ ಮುರಿದು " ಹ್ದಾ ಗುರು ನಿನಗೊಂದು ವಿಷ್ಯ ತಿಳಿಸ್ಬೇಕೆಂದು ತುಂಬಾ ಆತುರ ಪಡ್ತಿದ್ದೆ " ಎಂದು ಪುರುಷೋತ್ತಮನಲ್ಲಿ ಕಾತರ ಹುಡುಕಿದ

"ಯಾವ್ದೋ ಅದು? ಅಂತಾ ವಿಚಾರ? "

"ನೀನು ನಂಬ್ತೀಯೋ ಬಿಡ್ತೀಯೋ ಗೊತ್ತಿಲ್ಲ ಹೇಳ್ಲಾ? "

"ಹ್ಞೂ ಹೇಳಲೇ ಎಷ್ಟು ಕಾಯಿಸ್ತೀಯಾ " ತಾಳ್ಮೆಗೆಟ್ಟು ರೇಗಿದ.

"ನಿನ್ನ ವೈರಿ ರಾಜು ಗೊತ್ತಲ್ಲ? "

ರಾಜನನ್ನು ನೆನಪಿಸುತ್ತಿದ್ದಂತೆ ರೋಷದಿಂದ ಕುದಿದ ಪುರುಷೋತ್ತಮ "ಆ ಲೋಫರ್‌ನ್ನಾ ಮರೆಯಲಿಕ್ಕಾಗುತ್ತಾ ? " ಹಲ್ಲು ಮಸೆದ.

"ಹ್ಲಾ ಅವ್ನ ಮತ್ತೆ ಆ ನಾಗಿನ್! " ನಿಲ್ಲಿಸಿದ.

ಪುರುಷೋತ್ತಮನಲ್ಲಿ ಆಸಕ್ತಿ ಹಿಮ್ಮಡಿಗೊಂಡಿತು. ತೀಕ್ಷ್ಣವಾಗಿ ಮುಖ ದಿಟ್ಟಿಸುತ್ತ " ನಾಗಿನ್ ? " ಪ್ರಶ್ನಿಸಿದ.

"ಹ್ಞೂ. ಆದೇ ರಾಜುಗೆ ವಿರೋಧವಾಗಿ ಕ್ಯಾನ್‌ವಾಸ್ ಮಾಡ್ತೀನಂತ ನಿನ್ನತ್ರ ಬಂದಿದ್ಲಲ್ಲ ಲಕ್ಷ್ಮಿ. ಅವ್ರಿಬ್ರೂ ಲವ್ ಮಾಡ್ತಿದ್ದಾರಂತೆ" ವರದಿ ಒಪ್ಪಿಸಿದ.

"ಲವ್ವಾ? ಇಲ್ಲ, ಹೋಗಲೇ ಇಲ್ಲದ ಸುದ್ದಿಗಳ್ನೆಲ್ಲ ತರ್ಬೇಡ" ನಂಬದೆ ಸಂಪೂರ್ಣ ತಿರಸ್ಕರಿಸಿದ ಪುರುಷೋತ್ತಮ.

"ನನ್ನ ನಂಬು ಗುರು'

'ಇಲ್ಲ ಬಿಡಲೇ ಇಂತಾ ಸುದ್ದಿಗಳೆಲ್ಲ ಮೊದ್ಲು ನನ್ನಿಂದ ರಿಲೀಸ್ ಆಗ್ಬೇಕು. ಇದ್ದುದ್ರಲ್ಲೂ ಆ ಲಕ್ಷ್ಮಿ ಅಂತ್ಹ ಡೆಡ್ ಎಗೆನೆಸ್. ಇವ್ನೆಲ್ಲ ನನಗೆ ತಿಳಿಸ್ದೆ ಪ್ರಚಾರ ಮಾಡ್ಲಿಕ್ಕೆ ಹೋಗ್ಬೇಡ" ದರ್ಪದಿಂದ ಬಸವ ತಂದಿದ್ದ ನ್ಯೂಸ್ ತಳ್ಳಿ ಹಾಕಿದ.

'ನನ್ನಲ್ಲಿ ನಂಬಿಕೆ ಇಲ್ವೇನೋ ?'

"ಇದೆ. ಈ ವಿಷಯದಲ್ಲಿಲ್ಲ ಅದನ್ನ ಮರೆತ್ಬಿಡು ಬೇರೆ ಏನಾದ್ರೂ ಹೇಳು' ಎಂದ. ಮುಂದೆ ಪುರುಷೋತ್ತಮನ ಖಂಡನೆ ಬಸವನ ಬಾಯಿ ಮುಚ್ಚಿಸಿತು.

"ಹೋಗ್ಲಿ ಬಿಡು. ಮಾಡ್ಕೋರು ಅವ್ರು. ಖುಷಿ ಅವ್ರಿಗೆ. ನಾವೇಕೆ ಅದಕ್ಕೆ ತಲೆ ಕೆಡಿಸ್ಕೋಬೇಕು ? ಎಂದ.

ಪುರುಷೋತ್ತಮ "ಸಂ ನಾನು ಬರ್ಲಾ!" ಎಂದು ತಲೆ ಎತ್ತಿ ಮುಖ ನೋಡಿದ

ಹಾಗೇ ಬಸವನ ಮನೆಯಿಂದ ಹೊರಗೆ ಬಂದ ಹೆಣ್ಣಿನ ಮುಖವನ್ನೊ ದಿಟ್ಟಿಸಿದ. ಆ ಹೆಣ್ಣು ಆಗಲೇ ಓರೆಯಾಗಿ ಬೆನ್ನು ತಿರುಗಿಸಿ ನಡೆದು ಸ್ವಲ್ಪ ದೂರದಲ್ಲಿದ್ದ ತನ್ನ ಗುಡಿಸಲೊಳಗೆ ನುಸುಳಿದಳು. ಮರೆಯಾಗಲಾಗದ ನೆನಪಿನ ಆಕೃತಿಯದು.

"ಲೋ ಈಗ ನಿಮ್ಮನೆಯಿಂದ ಹೊರಗೋದಳಲ್ಲ ಅವ್ಳು ಸಾಕಮ್ಮ ಅಲ್ವಾ" ತಡೆಯಿಲ್ಲದೆ ಕೇಳಿದ.

"ಹೌದು ಗುರು. ನಿನಗೇಗೆ ಗೊತ್ತೋ ಅವ್ಳ ? ಅವ್ಳು ಯಾರು ಗೊತ್ತ? ನಮ್ಮತ್ತೆ ಮಗ್ಳು ಅವ್ಳ ಮದ್ವೆಯಾಗಿದ್ರೆ ನನಗೆ ಆಗ್ಬೇಕಿತ್ತು. ನಾನು ಓದಿದೋನು ಆಗ್ತೀನೋ ಇಲ್ವೋ ಅಂತಾ ಭಾವಿಸಿ ನಮ್ಮ ಸಿದ್ದಣ್ಣನಿಗೆ ಕೊಟ್ಟು ಮದುವೆ ಮಾಡಿದ್ರು. ಪಾಪ ಅವ್ನು ಬಿಲ್ಡಿಂಗ್ ಮೇಲಿಂದ ಬಿದ್ದು ಸತ್ತೋದ "

"ನನಗೂ ಗೊತ್ತು ಕಣೋ ಆ ವಿಷ್ಯ ನಮ್ಮ ಬಂಗ್ಲೆ ಕಟ್ಟಿಸ್ಬೇಕಾದ್ರೆ ಅಲ್ಲಿಗೆ ಕೆಲ್ಸಕ್ಕೆ ಬರ್ತಿದ್ಲು. ಮೇಸ್ತ್ರಿ ಹೇಳಿದ್ಮೇಲೆ ನಾನೇ ವಿಧವಾ ವೇತನಕ್ಕೆ ಅರ್ಜಿ ಬರ್ಕೊಂಡು ಹೋಗಿ ಸ್ಯಾಂಕ್ಷನ್ ಮಾಡ್ಸಿದ" ಎಂದು ಅಚ್ಚರಿ ಉಂಟು ಮಾಡಿದ.

"ಹ್ಞಾ! ಹೌದೇನು? ಇದೆಲ್ಲ ನನಗೆ ಗೊತ್ತೇ ಇಲ್ಲ ನೋಡು ಗುರು. ಈ ಕೆಲ್ಸ ಬೇರೆ ಮಾಡ್ತಿ ಏನು? ಸಂತೋಷ. ಆದ್ರೆ ಗುರೂ ನಾನು ಮದುವೆಯಾದ್ರೆ ಇವ್ಳನ್ನೆ ನಮ್ಮ ತಾಯಿಗೂ ಇವ್ಳನ್ನ ಕಂಡ್ರೆ ಪ್ರೀತಿ ಜಾಸ್ತಿ. ನನ್ನ ಕನಸಿನ ಕನ್ಯೆ ಇವ್ಳಿಗೂ ಒಂದು ದಾರಿ " ಮನೆಯ ಮನದ ವಿಷಯಗಳನ್ನೆಲ್ಲ ಬಹಿರಂಗ ಪಡಿಸಿದ.

"ಹ್ಞು ಆಗಮ್ಮ ಒಳ್ಳೆ ರಸಪೂರಿ ನನಗೂ ಇಷ್ಟಕಷ್ಟ ಆದಾಗೆಲ್ಲ ಬಂದು ಹೋಗ್ತೀನಿ" ಕಣ್ಣು ಮಿಟುಕಿಸಿ ನುಡಿದ.

"ಯಾಕೆ? "

ಯಾಕೆಂದ್ರೆ ತೆವಲು ತೀರಿಸ್ಕೊಳ್ಳೋಕೆ. ಒರೀ ಮಾತ್ನಾಡ್ತಿಯೋ ಹೊರತು ಅವ್ರಿಗೇನು ದುಡ್ಡು ಬಂಗಿದೆಯೋ ಇಲ್ವೋ ವಿಚಾರಿಸ್ಲೆ ಇಲ್ವಲ್ಲೋ. ಬಾ ವಿಚಾರ್ಸೋಣ" ಎಂದು ಸ್ಕೂಟರ್ ಇಳಿದು ಸ್ಟಾಂಡ್ ಹಾಕಿ ಹೊರಟೇ ಬಿಟ್ಟ. ಹೊರಡುವ ಮುನ್ನ ಜರ್ಸಿಯ

ಕಾಲರ್, ಕ್ರಾಪ್, ಕೂಲಿಂಗ್ ಗ್ಲಾಸ್ ಎಲ್ಲ ತಿದ್ದಿ ಸರಿಪಡಿಸಿಕೊಂಡ.

"ನಿನಗೆ ಹೋಗ್ಲಿಕ್ಕೆ ಇಷ್ಟ ಇಲ್ಲಾಂತ ತಿಳ್ಕೊಂಡು ಸುಮ್ನಿದ್ದೆ. ಇಲ್ಲಾಂದಿದ್ರೆ ನಾನೆ ಕರ್ಕೊಂಡು ಹೋಗ್ತಿದ್ದೆ ಗೊತ್ತಾ."

"ಸರಿ ಪರಿಚಯ ಮಾಡ್ಸೋ ಅಗತ್ಯವಿಲ್ಲ ಆದ್ರೂ ನೀನೇ ಇನ್ನೊಂದ್ಸಾರಿ ಮಾಡ್ಸು' ಎಂದ. ಇಬ್ಬರೂ ಕೂಡಿ ವಿಧುವೆ ಸಾಕವ್ವನ ಮನೆಗೆ ನಡೆದರು.

ಅಕ್ಕ ಪಕ್ಕ ಮನುಷ್ಯರಷ್ಟೆ ಎತ್ತರದ ಗುಡಿಸಲುಗಳ ಮಧ್ಯ ಚಿಕ್ಕ ಕಾಲುದಾರಿಯಲ್ಲಿ ಮುಜುಗರದಿಂದ ನಡೆದ ಪುರುಷೋತ್ತಮ. ಮುಂದಿದ್ದ ಬಸವ "ಅಜ್ಜೀ ... ಸಾಕವ್ವ " ಕೂಗಿ ಕರೆದ

"ಅಜ್ಜೀ ಇಲ್ಲ ಎತ್ಲಗೋ ಹೋಗ್ಯಾತೆ ಒಳ್ಗ್ ಮಾವ ಎಂದಳು" ಒಳಗಿನಿಂದಲೇ ಸಾಕವ್ವ

"ಏನೋ ಅಗ್ಲೇ ಮಾವ ಆಗ್ಬಿಟ್ಟಿದ್ದೀಯಾ" ಪಿಸುಗುಟ್ಟಿ ಪಕ್ಕೆ ತಿವಿದ ಪುರುಷೋತ್ತಮ.

ಅದಕ್ಕೆ ಬಸವ ಗಮನ ಕೊಡದೆ "ಬಾ ಒಳಗೆ' ಆದೇಶಿಸಿ ಮುಂದೆ ಹೋಗಿ ಈಚಲ ಚಾಪೆ ತಾನೆ ಹಾಸಿದ. ಪುರುಷೋತ್ತಮ ಪವಡಿಸುತ್ತಿದ್ದಂತೆ ಬಸವ ಒಳಗೆ ಹೋಗಿ ಮೆಲುದನಿಯಲ್ಲಿ "ಸಾಕವ್ವ ಅವತ್ತು ನಿನಗೆ ಅರ್ಜಿ ಬರೆದು ಕೊಟ್ಟು ಐವತ್ತು ರೂಪಾಯಿ ಬರೋಂಗೆ ಮಾಡಿದ್ನಲ್ಲ? ಅವ್ನು ನನ್ನ ಸ್ನೇಹಿತ ಬಂದಿದ್ದಾನೆ ಏನಾದ್ರೂ ಕೇಳುವ ಹುಚ್ಚು ಅವ್ನಿಗೆ. ಮುಖ ತೋರ್ಸಿ ಹೋಗ್ಬಿಡು" ಎಂದು ಹಿಂತಿರುಗಿ ಬಂದು ಅಡಿಗೆ ಮನೆಗೆ ಹತ್ತಿರವಾಗುವಂತೆ ಪುರುಷೋತ್ತಮನ ಬಲಕ್ಕೆ ಕುಳಿತ.

ಸುತ್ತಲೂ ಒಮ್ಮೆ ನೋಡಿದ ಪುರುಷೋತ್ತಮ, ಎದುರಿನ ಗೋಡೆಯ ಮೇಲೆ ಹೊಗೆಯಿಂದ ಮಸಿ ಬಳಿಸಿಕೊಂಡ ಫೋಟೋಗಳ ಸಾಲು, ಅವುಗಳ ಕೆಳಗೆ ಒಂದೆರಡು ದೇವರ ಕ್ಯಾಲೆಂಡರ್‌ಗಳು. ಅವು ಯಾವ ದೇವರೆಂದು ಪರೀಕ್ಷಿಸುವ ವ್ಯವಧಾನ ಅವನಲ್ಲಿ ಇರಲಿಲ್ಲ ಗಮನವೆಲ್ಲ ಒಳಗಿರುವ ಸಾಕವ್ವನ ಕಡೆಗೇ, ಅವನ ನೋಟವನ್ನೇ ಬೆನ್ನಟ್ಟಿದ ಬಸವನ ದೃಷ್ಟಿ ಹಿಂತಿರುಗಿ ಬಂದಿತು

"ಏನ್ ಗುರು. ಮನೆ ಆಳತೆ ಮಾಡೋ ತರಹ ಕಾಣಿಸ್ತಿಯಾ ? " ಕೇಳಿದ.

ಇಲ್ಲವೆಂದು ತಲೆ ಅಲ್ಲಾಡಿಸಿ " ನೋಡೋ ಬಸ್ವ ನಮ್ಮನೆಯಲ್ಲಿ ಫ್ಯಾನ್ ಹಾಕ್ಕೊಂಡ್ರೂ ಇಷ್ಟು ಕೂಲಾಗಿರಲ್ಲ ಇಲ್ಲಿ ಬಹಳ ಕೂಲಾಗಿದೆ. ಒಳ್ಳೆ ಏರ್ ಕೂಲ್ಡ್ ತರಹ ".

" ಮಳೆಗಾಲಕ್ಕೆ ಬಂದಿರು ಕಂಡೀಷನ್ನೂ ಆಗಿರುತ್ತೆ. ಹೊರಗೆ ಮಳೆ ನಿಂತ್ರೂ, ಇಲ್ಲಿ ಗುಡಿಸ್ಲ ಛಾವಣಿ ಕೂಡ ಮಳೆ ತರುತ್ತೆ " ಎಂದ.

ತಲೆತೂಗಿ ಅವರ ಕಷ್ಟ ಒಪ್ಪಿಕೊಂಡು " ಈಗ ಈ ಮನೆಯಲ್ಲಿ ಯಾರ್‍ಯಾರು ಇದ್ದಾರೆ ? " ಪುರುಷೋತ್ತಮ ಪ್ರಶ್ನಿಸಿದ.

" ಮೊದ್ಲು ತಾಯಿ ಮಗ ಇದ್ರು. ಮಗನ ಮದುವೆಯಾದ್ಮೇಲೆ ಸೊಸೇನೂ ಸೇರಿ ಮೂವರಾಗಿದ್ರು ಆಮೇಲೆ ಮನೆ ಯಜಮಾನ ತೀರ್ಕೊಂಡು, ಈಗ ಅತ್ತೆ ಸೊಸೆ ಇದ್ದಾರೆ ಅಜ್ಜಿಗೆ ವಯಸ್ಸಾಗಿಲ್ಲವಾದ್ರೂ, ಕಣ್ಣು ಸರಿಯಾಗಿ ಕಾಣ್ತಿಲ್ಲ. ರಾತ್ರಿ ಹೋತ್ನಲ್ಲಂತೂ ಕುರುಡೀನೆ. ಕಿವಿನೂ ಕಿವುಡು ಬೇಜಾರು ಕಳೆಯೋಕೆ ಅಜ್ಜಿ ಎಲ್ಲೋ ಹೋಗಿರ್ಬೇಕು " ಎಂದು ಮನೆತನದ ಸೂಕ್ಷ್ಮ ಪರಿಚಯ ಮಾಡಿದ. ಗದ್ದಕ್ಕೆ ಕೈ ಕೊಟ್ಟು ಕುಳಿತು ಕೇಳಿದ ಪುರುಷೋತ್ತಮನ ತಲೆ ಎಲ್ಲಾ ವಿಷಯಗಳನ್ನು ಟೇಪ್ ಮಾಡಿಕೊಂಡಿತು.

ಮಧ್ಯ ಮಧ್ಯ ದನಿ ಏರಿ ಇಳಿಯುತ್ತಿದ್ದರಿಂದ ಬಸವ ಹೇಳಿದ್ದು ಎಂದು ಗ್ರಹಿಸಿದ ಸಾಕಮ್ಮ, ಅವರ ಎದುರಿಗೆ ಹೋಗುವುದನ್ನು ನೆನೆದು ಬವಳಿ ಬಂದಂತಾಗಿ ಕ್ಷಣ ಹೊತ್ತು ನಿಂತು ಸಹಿಸಿ, ಅಡ್ಡಗೋಡೆಯಿಂದ ತಲೆ ಹೊರಗಾಕಿದಳು. ಪುರುಷೋತ್ತಮನ ಹದ್ದಿನ ಕಣ್ಣು ಅತ್ತ ಚುರುಕಾಗಿ ತಿರುಗಿದವು. ಘಟನೆಯ ಜ್ಞಾಪಕದಿಂದ ಬೆದರಿ, ಭಯಾವೃತಳಾಗಿ ಬೆವರುತ್ತ ನಿಂತ ಆವಳ ಮುಖದಲ್ಲಿ ಸೌಂದರ್ಯದ ಕಳೆ ಮತ್ತೆ ಕರೆದಂತಾಯಿತು "ಬನ್ನಿ, ಈ ತಿಂಗಳ ಹಣ ಬಂದಿದೆಯೇನ್ರಿ ? " ಅವಳನ್ನೇ ಉದ್ದೇಶಿಸಿ ಕೇಳಿದ. ನಮ್ರತೆಯ ತರಂಗ ಬೆರೆತ ಅವನ ದನಿಯು ಸಂದರ್ಶನ ರೂಪದಲ್ಲಿ ಪ್ರಶ್ನಿಸತೊಡಗಿತು.

ಬಾಯಿ ಒಣಗಿ ಹೋಗಿ ತಲೆ ಹಾಕಿ ಬರೀ ಉಸಿರಿನಲ್ಲಿಯೆ "ಹುಂ ಬಂತು ಐವತ್ತು" ಎಂದಳು.

"ನೋಡಿದ್ರಾ ನನ್ನ ಕೆಲಸನೇ ಹಾಗೆ ಬರೀ ಮಾತಲ್ಲ" ಎಂದು ಹೊಗಳಿಕೊಂಡು ಇರಿಯುವಂತೆ ದಿಟ್ಟಿಸಿದ.

"ಹೇಗೋ ಅತ್ತೆ ಸೊಸೆ ಇಬ್ರು ಜೀವನ ಮಾಡ್ತಿದ್ದಾರೆ. ಅಲ್ಲಿ ಇಲ್ಲಿ ತಿಂಗ್ಳಿಗೆ ನಾಲಕ್ಕು ದಿನ ಕೂಲಿ ಕೆಲಸ ಮಾಡಿದ್ರೆ ಕಷ್ಟ ಆಗ್ತಿರ್ಲಿಲ್ಲ ಹಾಗಾದ್ರೆ ಈ ಅಜ್ಜಿಗೂ ಯಾಕೆ ದುಡ್ಡು ಬರೋ ಹಾಗೆ ಮಾಡ್ಬಾರ್ದು" ತಟ್ಟನೆ ಜ್ಞಾಪಕ ಮಾಡಿಕೊಂಡು 'ವೃದ್ಧಾಪ್ಯ ವೇತನ ದ ಬಗ್ಗೆ ನುಡಿದ ಬಸವ

"ಅದನ್ನೂ ಯೋಚ್ನೆ ಮಾಡ್ತಿದ್ದೆ ನಾಳೆನೇ ಅದಕ್ಕೂ ಅರ್ಜಿ ಕೊಡ್ತೀನಿ. ಇವ್ರು ಕೂಲಿ ಕೆಲ್ಸಕ್ಕೆ ಹೋಗ್ದೇನೆ ಆರಾಮವಾಗಿರ್ಬಹುದು "

"ಹೌದು ಗುರು. ಅಲ್ಲಿ ಆಫೀಸ್‌ನಲ್ಲಿ ನನ್ ಮಾತು ಯಾರೂ ಕೇಳಲ್ಲ ಟೇಬಲ್ ಕೆಳಗಿಂದ ಕೈ ಚಾಚ್ತಾರೆ. ನೀನೇ ಅರ್ಜಿ ಕೊಟ್ಬಿಡೋ."

"ಅದ್ಯಾವನು ಕೈ ಚಾಚ್ತಾನೋ ನೋಡ್ತೀನಿ. ಕೈ ಚಾಚಿದ್ರೆ ಬರೆ ಎಳೆದ್ಬಿಡ್ತೀನಿ". ಆಕ್ರೋಶ, ಹೆಮ್ಮೆಯಿಂದ ನುಡಿದು ತನ್ನ ಕಾರ್ಯ, ಯೋಗ್ಯತೆ ಸಮರ್ಥಿಸಿಕೊಂಡ

"ಹೌದು ಗುರು ನಿನ್ನೊಬ್ನಿಗೇ ಆ ಯೋಗ್ಯತೆ ಇರೋದು. ನೀನು ಒರೆ ಎಳೆದು ಅವ್ರನ್ನ ಸಸ್ಪೆಂಡ್ ಮಾಡಿಸ್ಬಹುದು. ನಾನು ಹಾಗೆ ಮಾಡಿದ್ರೆ ನನ್ನ ಜೀವ ಸಹಿತ ಸುಟ್ಬಿಡ್ತಾರೆ ಹಾಗಾದ್ರೆ ನಾಳೆ ಇದೊಂದು ಕೆಲ್ಸ ಮಾಡಿ ಮುಗಿಸ್ಬಿಡೋಣ. ಸರಿ ಹೋಗೋಣ್ವ? " ಎಂದ ಬಸವ.

"ಹುಂ " ಎನ್ನುತ್ತ ಪುರುಷೋತ್ತಮ ಎದ್ದು ಹೊರಟ

ಸಾಕಷ್ಟು ಳಿಗೂ ಆ ಕರಿಯ ಮೋಡವೆ ರಾಜ ಎದ್ದು ಹೋದರೆ ಸಾಕೆನಿಸಿತ್ತು.

"ಬರ್ತೀನ್ರಿ. ದೇವ್ರು ನಿಮ್ಮಂತ ಬಡವ್ರಿಗೆ ನನ್ನ ಕೈಲಾದ ಸಹಾಯ ಮಾಡೋ ಅವಕಾಶಕೊಟ್ಟಿದ್ದಾನೆ. ಅದು ನನ್ನ ಪುಣ್ಯ" ಎಂದು ಬಲು ಸಾತ್ವಿಕನಂತೆ ನುಡಿದು ತನ್ನ ಯೋಜನೆಯಂತೆ ಸ್ಕೂಟರಿನ ಕೀ ಅಲ್ಲೇ ಬಿಟ್ಟು ಹೊರಟ ಬಸವನೂ ಗಮನಿಸದೆ ಮುನ್ನಡೆದ. ಸ್ಕೂಟರ್ ಬಳಿಗೆ ಒಟ್ಟಿಗೆ ನಡೆಯುತ್ತಿದ್ದಂತೆ ಜೇಬುಗಳನ್ನು ತಡಕಾಡ ತೊಡಗಿದ ಪುರುಷೋತ್ತಮ "ಓ ಕೀ ಅಲ್ಲೇ ಬಿಟ್ಟಂದೆ ಅಂತ ಕಾಣ್ಸುತ್ತೆ. ಇರು ಬಂದೆ" ಎಂದವನೇ ಬಸವನಿಗೆ ಹೋಗಲು ಅವಕಾಶ ನೀಡದೆ ತಾನೆ ಓಡಿದ. ಒಳಕ್ಕೆ ನುಗ್ಗಿ, ತಾನು ಕುಳಿತ ಜಾಗದಲ್ಲಿದ್ದ ಕೀಯನ್ನು ಎತ್ತಿಕೊಳ್ಳುತ್ತ "ಸಾಕಮ್ಮ ಇಲ್ಲಿ ಕೀ ಬಿಟ್ಟು ಹೋಗಿದ್ದೆ " ಎಂದ.

ಒಳಗಿದ್ದ ಸಾಕಮ್ಮ ಯೋಚನೆಯ ಗೂಡಿನಿಂದ ಹೊರ ಬಂದು ಬಾಗಿಲ ಬಳಿ ಬೆದರಿದ ಹಕ್ಕಿಯಾಗಿ ನಿಂತಳು. "ಬರ್ತೀನಿ ರಾತ್ರಿಗೆ. ಮುದುಕಿಗೆ ಹೊಟ್ಟೆ ತುಂಬ ಹಾಕಿ ಮಲಗ್ಸಿ, ಹಾಸಿಗೆ ರೆಡಿ ಮಾಡಿರು. ನನ್ನ ಮಾತು ಕೇಳ್ದಿದ್ರೆ ಅವತ್ತು ಅಲ್ಲಿ ಆಗಿದ್ದನ್ನ ಎಲ್ರಿಗೂ ಹೇಳ್ಬಿಟ್ಟೇನು ಹುಷಾರ್ " ಎಂದು ಕಠೋರವಾಗಿ ನುಡಿದು, ನಗುಮೊಗದಿಂದ ಸಮಾಧಾನವಾಗಿ 'ಬರ್ಲಾ? ' ಎನ್ನುತ್ತಿದ್ದಂತೆ ಗುಡಿಸಲ ಹೊರಗೆ ಬಸವ "ಲೋ ಕೀ ಸಿಕ್ತೇನೋ?" ಕೂಗಿ ಕೇಳಿದ.

"ಹೂಂ . ಸಿಕ್ತು ಸಿಕ್ತು ಬಂದೇ. ನನ್ನ ಗಂಡು ಆ ಕತ್ತಲು ಮನೆಯೊಳಗೆ ಬೇಗ ಕಾಣಿಸ್ಲೇ ಇಲ್ಲ" ರಸ್ತೆಗೆ ಒಂದೇ ಜಿಗಿತಕ್ಕೆ ಹಾರುತ್ತ ನುಡಿದ.

ಪುರುಷೋತ್ತಮನನ್ನು ಅತ್ತ ಕಳಿಸಿ, ತನ್ನ ಗುಡಿಸಲ ಕಡೆ ನೋಡುತ್ತ ಯಾರೂ ಇಲ್ಲದ್ದನ್ನು ನೋಡಿ ಮುಂದೆ ಸಾಗಿದ ಬಸವ ಸಾಕಮ್ಮನ ಮನೆಯೊಳಗೆ ಸೇರಿಕೊಂಡ. ಅವರಿವರ ಎದುರಿಗೆ ' ಸಾಕಮ್ಮ ' ಎನ್ನುವ ಬಸವ ಯಾರೂ ಇಲ್ಲದಿದ್ದರಿಂದ, ಪ್ರೀತಿಯಿಂದಲೇ "ಸಾಕೀ" ಎನ್ನುತ್ತ ಕೋಣೆಯ ಬಾಗಿಲ ಬಳಿಗೆ ಬಂದ. ಪುರುಷೋತ್ತಮನ 'ಹಾಸಿಗೆ ರೆಡಿ, ಎಲ್ಲಾ ಹೇಳ್ಬಿಡ್ತೀನಿ' ಎಂಬ ಬೆದರಿಕೆಯ ನುಡಿಯಲ್ಲಿ ಸಿಲುಕಿ ವಿಹ್ವಲಗೊಂಡು, ಗ್ರಹಣ ಹಿಡಿದವಳಂತೆ ಕುಳಿತಿದ್ದಳು. ಬಸವನ ಸ್ವರ ಕೇಳಿದ್ದರಿಂದ ಎದ್ದು ನಿಂತು ಮುಖದಲ್ಲಿ ಶೇಖರಗೊಂಡಿದ್ದ ದುಃಖದ ಛಾಯೆಯನ್ನು ಓಡಿಸಲು ಯತ್ನಿಸಿದಳು

ಪ್ರಶ್ನಾರ್ಥಕ ನೋಟದಿಂದ ನೋಡಿದ ಸಾಕಮ್ಮಳಿಗೆ, ಬಸವ ತುಂಬು ಹೃದಯದಿಂದ "ಸಾಕೀ ಈಗ ಬಂದಿದ್ನಲ್ಲ ಅವ್ನು ನಿಜವಾಗಿಯೂ ಹೇಳ್ಬೇಕಂದ್ರೆ ನಮ್ಮ ಶಾಲಿನ ದೇವ್ರು ನನಗೆ ಕೆಲ್ಸ ಕೊಡಿಸ್ತೊ ವಿಷ್ಯನ ಅವ್ರಪ್ಪನಿಗೆ ಆಗ್ಲೆ ಹೇಳ್ಬಿಟ್ಟಿದ್ದಾನೆ. ಇನ್ನ ನಾಲ್ಕೈದು ತಿಂಗ್ಳೊಳಗೆ ಕೆಲಸಕ್ಕೆ ಸೇರ್ಕೊಂಡ್ರೆ, ನಿನ್ನ ಮದ್ವೆನೂ ಆಗ್ಬಹುದು. ಸಾಕಿ ಮೊದಲನೇ ಸಾರಿಗೆ ನೀನು ನನ್ನ ಮದ್ವೆನೇ ಆಗ್ಬೇಕಿತ್ತು. ಅದೆಲ್ಲ ವಿಚಾರ್ಸದೆ ಮಾಡ್ಬಿಟ್ರು ವಿಧಿ ನೀನೆ ಅವ್ನ ಗಂಡ ಆಗ್ಬೇಕಂತಲೇ ಇಗ್ಬೇಕು ಸಿದ್ದಪ್ಪನ್ನ ಕೊಂದಿದ್ದು ಒಟ್ನಲ್ಲಿ ನಾನಂತು ನಿನ್ನ ಮದ್ವೆಆಗ್ತೀನಿ ನಿನಗಿಷ್ಟ ತಾನೇ? " ಪ್ರಶ್ನಿಸಿದ.

ಬಿಟ್ಟರೆ ಕೆಟ್ಟೇನು ಎಂದು ಚಿಂತಿಸಿ 'ಹೌದೆಂದು' ತಲೆ ಹಾಕಿದಳು. ಒಡನೆಯೇ ಮುಖ ಬಿಳಿಚಿಕೊಂಡಿತು. ಪುರುಷೋತ್ತಮನ ಉಗ್ರ ರೂಪದ ಕಟ್ಟೊತ್ತಾಯದ ನೆನಪಿನಿಂದ. ಹೊರಗೆ ತಾಯಿ "ಬಸ್ವಾ  ಬಸ್ವಾ " ಕೂಗಿ ಕರೆದಳು.

ಬಸವ "ಅವ್ವ ಕರೀತಾಳೆ ಹೋಗ್ತೀನಿ" ಎಂದು ಅಲ್ಲಿಂದ ಹೊರಟ ಮೇಲೆ ಮತ್ತೆ ಸಾಕಿ ಚಿಂತಿಸತೊಡಗಿದಳು.

'ಅವ್ನು ಹೇಳಿದಂತೆ ಸಿದ್ಧವ ಗ್ದಿದ್ರೆ ಏನಾಗಬಹುದು? ಎಲ್ಲರಿಗೂ ಹೇಳ್ಬಿಡ್ತಾನಂತೆ ಏನ್ಮಾಡೋದು? ಈ ಬಸವ ನೋಡಿದ್ರೆ ಮದುವೆಯಾಗ್ತೀನಂತ ಕುಳಿತಿದ್ದಾನೆ. ಇವ್ನಿಗೆನಾದ್ರೂ ಆ ಸಂಗತಿ ತಿಳಿದ್ರೆ ನನ್ನ ಕೈ ಬಿಡ್ಬಹುದೇನೋ? ' ಎಂದು ಚಿಂತಿಸಿದಳು ನಾನಾ ವಿಧದಲ್ಲಿ. ಕತ್ತಲೂ ಕವಿಯಲಾರಂಭಿಸಿತು. ಜೊತೆಯಲ್ಲಿ ಪುರುಷೋತ್ತಮ ಹೇಳಿದಂತೆ ಅವನ ಸಂಗದ ಸಮಯವೂ ಕಡಿಮೆಯಾಗತೊಡಗಿತು

## ೬

ಒಂದು ದಿನ ಕಾರಣಾಂತರದಿಂದ ಲಕ್ಷ್ಮಿ ಕಾಲೇಜಿಗೆ ಬರಲಿಲ್ಲವಾದ್ದರಿಂದ ರಾಜುಗೆ ದಿಕ್ಕು ತೋಚದಂತಾಗಿತ್ತು. ಎಂದಿನಂತೆ ಜೊತೆಗೂಡುವ ಜಾಗದಲ್ಲಿ

ಮರದಡಿಯಲ್ಲಿ ನಿಂತು ಕಾಯುತ್ತಿದ್ದ. ಕಾಲೇಜು ಆರಂಭವಾಗುವ ಸಮಯ ಬಿಟ್ಟು ತಮ್ಮದೆ ಆದ ವೇಳೆ ನಿಗದಿಪಡಿಸಿಕೊಂಡಿದ್ದರು. ಆದರೂ ಈ ದಿನ ಕಾಲೇಜಿಗೆ ಸರಿಯಾಗಿ ಸಮಯಕ್ಕೆ ಹೊರಟಿದ್ದಳು ಲಕ್ಷ್ಮಿ. ಕಾಯುತ್ತ ನಿಂತಿದ್ದ ರಾಜನಿಗೆ ದೂರದಲ್ಲಿ ಮೆಚ್ಚಿನ ಆಕೃತಿ ಕಾಣಿಸುತಿತ್ತು. ತಲೆ ತಗ್ಗಿಸಿ ವಯಸ್ಸಿಗನುಗುಣವಾಗಿ ಬಳುಕುವ ದೇಹವನ್ನು ಅರಿತು ಅತಿ ಹೆಚ್ಚು ಬಳುಕದಂತೆ ಹಿಡಿತದಲ್ಲಿಟ್ಟುಕೊಂಡು ನಡೆಯುವ ಬಿಂಕದ ನಡಿಗೆ. ರಸ್ತೆಯಲ್ಲಿ ಸುಳಿದಾಡುವ ಜನರನ್ನು ಲಕ್ಷಿಸದೆ ನೋಟದಲ್ಲೆ ಅವಳ ಸೌಂದರ್ಯವೆಲ್ಲವನ್ನು ಬರಿದು ಮಾಡುವಂತೆ ದಿಟ್ಟಿಸಿದ. ಆ ನೋಟದಲ್ಲಿ ಒಂದು ದಿನದ ವಿರಹ ವೇದನೆಯೂ ತುಂಬಿತ್ತು. ಅವನ ಸಮೀಪಕ್ಕೆ ಬಂದ ಲಕ್ಷ್ಮಿ ಒಮ್ಮೆ ಅವನೆಡೆಗೆ ಅಪರಿಚಿತ ನೋಟ ಎಸೆದು ಮತ್ತೆ ತನ್ನೆಡೆಗೆ ಸೆಳೆದುಕೊಂಡಳು. ಪ್ರೇಮಿಗಳ ಸ್ನಿಗ್ಧ ನಗುವಿರಲಿ, ಸ್ನೇಹದ ಭಾವವನ್ನೂ ಸಹ ತೋರಲಿಲ್ಲ. ಅವನನ್ನೂ ದಾಟಿ ಮುಂದೆ ನಡೆದಳು.

"ಹಾಯ್ ಲಕ್ಷ್ಮೀ ನೋಡಿದ್ರೂ ನೋಡ್ದಾಗೆ ಹೋಗ್ತೀಯಲ್ಲ. ಏಕೆ? ಓ ನೀನೇನು ತ್ರಿಲೋಕ ಸುಂದರಿಯಲ್ಲಾಂತ ಜರ್ಬಾನಲ್ಲಾ ಅದಕ್ಕಾ? ನಿನ್ನೆ ಪೂರ್ತಿ ಕಾಣಲೇ ಇಲ್ಲ. ನಾಮ ಯಾಕೆ ಹಾಗೆಂದೆಯಂತ ಗೊತ್ತಾ? ಪ್ಲೀಸ್ ನಿಲ್ಲು ಲಕ್ಷ್ಮಿ. ನಾನು ಒಂದೇ ಸಮನೆ ಮಾತಾಡ್ತ ಒರ್‍ತಿದ್ದೀನಿ. ನೀನು ಕಿವಿಗೆ ಹಾಕೊಳ್ದೆ ಹೋಗ್ತಿದ್ದೀಯ" ಅವಳನ್ನು ಹಿಂಬಾಲಿಸುತ್ತಲೇ ನುಡಿದ.

ತಟ್ಟನೆ ನಿಂತು "ಅದೇನು ಬೇಗ ಹೇಳು. ನನಗೆ ಟೈಮಿಲ್ಲ. ನೀನೇಕೆ ಮನೆಯತ್ರ ಹೆಸರೆಲ್ಲ ಹಿಡಿದು ಕೂಗೋದು? ಏನೇಳ್ಬೇಕೆಂದ್ರೂ ಹೇಗೂ ಇಲ್ಲೆ ಸಿಗ್ತಿದ್ದೆ. ಹೇಳ್ಬಹುದಿತ್ತಲ್ಲ " ನೇರವಾಗಿ ಮುಖ ನೋಡದೆ ಓರೆ ಕಂಗಳಿಂದ ನೋಡುತ್ತ ಅಸಹನೆಯಿಂದ ನುಡಿದಳು.

"ಹಾಗಲ್ಲ ಲಕ್ಷ್ಮಿ ನಿನ್ನೆ ಸ್ಪೆಷಲ್ ಕ್ಲಾಸ್ ಇತ್ತಂತೆ ಅದನ್ನೆ ಹೇಳ್ಬೇಕೊಂತ ಬಂದೆ. ಕೂಗಿದೆ. ನಿಮ್ ತಾಯಿ ಓಡಿ ಬಂದು ಪಟಾಕಿ ತರಹ ಚಟಪಟ ಅಂದ್ರು. ನಾನೇನು ಹೆದರ್‍ತೀನಾ . ? ಸುಮ್ನಿದ್ರೆ ಇಬ್ರ ಬಂಡವಾಳವೂ ಬಯಲಾಗುತ್ತೆಯಂತ ವಾಪ್ಸಿದೆ. ನಾನೀಗೆ ಮಾಡಿದೆಯಂತ ಮಾಡಿ ಬೇಜಾರಾಯ್ತಾ ?" ಮೂತಿ ಮುಂದೆ

ಗಂಟಲಿನಿಂದ ಕೇಳಿದ.

"ಮತ್ತೆ ಬೇಜಾರು ಆಗೋದಿಲ್ಲಾ? ಸ್ಪೆಷಲ್ ಕ್ಲಾಸಂತೆ? ರೆಗ್ಯುಲರ್ ಕ್ಲಾಸಿಗೇ ಹೋಗ್ದೇ ಇರೋವಾಗ? ಇನ್ನೊಂದ್ಸಾರಿ ಹೀಗೇನಾದ್ರೂ ಬಂದ್ರೆ ನನ್ನ ಮುಖನೇ ತೋರ್ಗ್ಸಲ್ಲ " ಎಚ್ಚರಿಕೆ ಇತ್ತಳು.

"ಸಾರಿ ಸಾರಿ. ಇನ್ನೊಂದ್ಸಾರಿ ನನ್ನಾಣೆ, ನಮ್ಮಪ್ಪ ಅಮ್ಮಾಣೆ ಮಾಡೊಲ್ಲ" ಸ್ವಲ್ಪ ತಡೆದು ನಾಲ್ಕೆಜ್ಜೆ ಹಾಕಿದ ನಂತರ "ಲಕ್ಷ್ಮಿ, ಕ್ಲಾಸಿಗೆ ಹೋಗ್ಲೇಬೇಕಾ?" ಅವಳ ಕೋಪ ಅರಿತು ಅನುಮಾನಿಸುತ್ತಲೇ ಕೇಳಿದ.

"ಏಕೆ? ಯಾವ್ದಾದ್ರೂ ಹೊಸ ಪಿಕ್ಚರ್ ಬಂದಿದೆಯಾ?" ಹುಸಿಕೋಪದ ಮುಖವಾಡ ಧರಿಸಿ ಕೇಳಿದಳಾದರೂ ತಕ್ಷಣವೆ ಹೃದಯದ ಒಲವೆಲ್ಲವನ್ನು ಕಣ್ಣಲ್ಲಿ ತುಂಬಿಕೊಂಡು ಮುಖ ನೋಡಿದಳು.

"ಬಂದಿದೆ ಹೋಗೋಣ್ವಾ?" ಆಸೆಯಿಂದಲೇ ಕೇಳಿದ

"ಪಿಕ್ಚರ್ ಬೇಡಪ್ಪ. ಅಕ್ಕಪಕ್ಕದವರೆಲ್ರೂ ನಮ್ ಕಡೇನೇ ನೋಡ್ತಾರೆ. ನನಗಂತೂ ಭಯ ಆಗುತ್ತೆ. ಇಂಟರ್‌ವಲ್ ಬಿಟ್ಟಾಗ, ಪಿಕ್ಚರ್ ಮುಗಿದಾಗೆಲ್ಲ ತಲೆ ತಗ್ಗಿಸ್ಬೇಕಾಗುತ್ತೆ ಇದೆಲ್ಲ ಕಷ್ಟ"

"ಸರಿ ಪಿಕ್ಚರ್‌ಗೆ ಹೋಗ್ದಿದ್ರೆ ಕ್ಲಾಸಿಗೆ ಹೋಗ್ಬೇಕು ಏನಂತೀಯ ಲಕ್ಷ್ಮಿ?" ನಿರಾಶೆ ಮೂಡಲಾರಂಭಿಸಿತು.

"ಕ್ಲಾಸೂ ಅಂದ್ರೆ ಭಯಂಕರ ಬೋರ್. ಹ್ಲಾ, ಬೀಚ್‌ಗೆ ಹೋಗೋಣ್ವಾ ರಾಜು ?". ಬಲು ದಿನದಿಂದ ಹೋಗಬೇಕೆಂಬ ಅನಿಸಿಕೆಯನ್ನು ಜ್ಞಾಪಿಸಿಕೊಂಡು ಹೊಳಪು ಕಣ್ಣುಗಳನ್ನು ಜಳಪಿಸುತ್ತ ಕೇಳಿದಳು. "ಹಾ ! ವೆರಿಗುಡ್ ಇಷ್ಟೆಲ್ಲಾ ತಲೆ ಇಲ್ಲದಿದ್ರೆ ಫಸ್ಟ್ ಕ್ಲಾಸ್ ಬರ್ಲಿಕ್ಕೆ ಸಾಧ್ಯ ಇರ್ತಿತ್ತಾ?" ಹೊಗಳಿ ಅವಳ ರಸಿಕ ಮನಸಿಕ್ಕೂ ಜಾಣತನಕ್ಕೂ ಸಂಬಂಧ ಕಲ್ಪಿಸಿದ.

ಅತ್ತ ಇತ್ತ ರಸ್ತೆಯ ಕಡೆ ನೋಡಿದ. ಹಿಂಬದಿಯಲ್ಲಿ ದೂರದಲ್ಲಿ ರಿಕ್ಷಾ ಬರುವುದು

ಕಾಣಿಸಿತು. ಅದೃಷ್ಟವಶಾತ್ ಖಾಲಿ ಇತ್ತು. "ಆಟೋ !" ಎಂದು ಕೂಗಿ ಕೈ ಮುಂದೆ ಮಾಡಿ ನಿಲ್ಲಿಸಿದ.

"ಎಲ್ಲಿಗೆ? " —ಡ್ರೈವರ್‌ನ ಪ್ರಶ್ನೆ.

"ಬೀಚ್‌ಗೆ"

"ಆಗಲ್ಲರೀ "

"ಯಾಕೆ? " ಸಿಕ್ಕ ಆಟೋದವನನ್ನು ಬಿಡದೆ ಕೇಳಿದ

"ದೂರ ಆಗುತ್ತೆ. ಇಬ್ಬರಿರೋದ್ರಿಂದ ಹತ್ತು ರೂಪಾಯಿ ಕೊಡೋದಾದ್ರೆ ಬರ್ತೀನಿ" ಮುಂದೆ ಹಣಕ್ಕೆ ಜಗಳ ಮಾಡಲು ಇಷ್ಟವಿಲ್ಲದೆ ಸ್ವಲ್ಪ ಹೆಚ್ಚಿನ ಬೆಲೆಯೇ ಕೇಳಿದ.

"ಆಗ್ಲಿ ನಡೀ" ಎಂದ ರಾಜ, ತಾನು ಮುಂದೆ ನಡೆದ.

ಆತಂಕದಿಂದ ಪರಿಚಯಸ್ಥರು ಯಾರಾದರೂ ನೋಡುವರೆಂದು ಬೆದರಿದ ಕಂಗಳಿಂದ ಸುತ್ತಲೂ ನೋಡುತ್ತಿದ್ದಂತೆ "ಬಾ ಲಕ್ಷ್ಮಿ ಬೇಗ " ಅವಳ ದೃಷ್ಟಿ ಮನಸ್ಸೆರಡನ್ನೂ ಇತ್ತ ಸೆಳೆದು, ಬಲಗೈ ಹಿಡಿದು ರಿಕ್ಷಾದೊಳಗೆ ತಾನು ಹೋಗಿ, ಲಕ್ಷ್ಮಿಯನ್ನೂ ಎಳೆದುಕೊಂಡ. ಸಮಾಧಾನ ತೃಪ್ತಿಯ ನಿಟ್ಟುಸಿರು ಬಿಡುತ್ತ ಮುಗುಳ್ನಗೆಯಿಂದ ಮುಖ ನೋಡಿದಳು. ರಾಜು ಕಣ್ಣು ಮಿಟುಕಿಸಿದ ಒಬ್ಬರನ್ನೊಬ್ಬರು ಒತ್ತಿ ಕುಳಿತರು. ಭೀತಿಯಿಂದ ಪಾರಾಗಲು ಅಂತಹ್ಹೇರ್ಯವಿಲ್ಲದೆ ತನ್ನ ಪ್ರಿಯತಮನ ತೋಳಲ್ಲಿ ಆಶ್ರಯ ಪಡೆಯುವಂತೆ ಬಳಸಿ "ಸ್ವಲ್ಪ ಫಾಸ್ಟಾಗಿ ಬಿಡ್ಲಿಕ್ಕೆ ಹೇಳು" ಮೆಲ್ಲಗೆ ಉಸುರಿದಳು

"ಡ್ರೈವರ್ ಇನ್ನಷ್ಟು ಜೋರಾಗಿ ಬಿಡಿ" ಹಿಂದಿನಿಂದ ಭುಜ ತಟ್ಟಿ ನುಡಿದ

ಅಂತಹ ಚಲುವೆ ತನಗೆ ದೊರಕಿಲ್ಲವೆಂಬ ಕಿಚ್ಚಿಗೋ, ಅವರೀರ್ವರ ಒಡನಾಟ ನೆನೆದು ಉಂಟಾದ ವ್ಯಥೆಗೋ, ಅಸಹನೆಯಿಂದಲೇ ಕಣ್ಣು ಕಿರಿದುಗೊಳಿಸಿ, ಮೂಗರಳಿಸಿ "ಇನ್ನೆಷ್ಟು ಜೋರಾಗಿ ಬಿಡ್ಬೇಕ್ರಿ? ನಿಮಗೇನೊ ಅವಸರವೆಂದ್ರೆ ನಮಗೂ ಅವಸರನಾ? ಹೆಚ್ಚು ಕಡಿಮೆಯಾಗಿ ಆಕ್ಸಿಡೆಂಟ್ ಆದ್ರೆ ನಿಮ್ಮ ಹತ್ತು ರೂಪಾಯಿ ಯಾತಕ್ಕೂ ಬರಲ್ಲ" ಅರ್ಧ ಮಾತು ಕೇಳುವಂತೆ ಗೊಣಗಿಕೊಂಡ

ಇಬ್ಬರೂ ಅವನ ಗೊಣಗಾಟಕ್ಕೆ ಕಿವಿಗೊಡುವ ಸ್ಥಿತಿಯಲ್ಲಿರಲಿಲ್ಲ. ಮತ್ತಷ್ಟು ಹೊಳಪು ಪಡೆದ ಲಕ್ಷ್ಮಿಯ ಕಣ್ಣು ಮಿನುಗುತ್ತಿದ್ದವು. ಕದಪುಗಳಿಗೆ ರಂಗೇರಿ ಕಾಂತಿಯುಕ್ತವಾಗಿ ಆಕರ್ಷಿಸುತ್ತಿದ್ದವು. ಗಾಜಿನಂತೆ ನುಣುಪಾದ ಕೋಮಲ ಕೆನ್ನೆಯನ್ನು ನಯವಾಗಿ ಸವರುತ್ತ ಹಿಂಡಿದ. "ಷ್ " ಎಂದು ಕಣ್ಣು ಹಿಗ್ಗಿಸಿ ಬೆಹರಿಕೆ ಹಾಕಿ ಡ್ರೈವರ್‌ನ ಇರುವಿಕೆಯನ್ನು ಕತ್ತು ಕೊಂಕಿಸಿ ಸೂಚಿಸಿ, ರಾಜನ ಕೈ ಕೊಡವಿದಳು.

ರಿಕ್ಷಾ ನಿಲ್ಲಿಸಿ "ಇಳೀರಿ " ಆದೇಶಿಸಿದ ಡ್ರೈವರ್.

ಸ್ವಲ್ಪ ದೂರ ನಡೆಯ ಬೇಕಾದುದರಿಂದ ಹಣ ಕೊಟ್ಟು ಒಂದೊಂದು ಕಡೆಯಿಂದ ಇಬ್ಬರೂ ಇಳಿದರು. ರಿಕ್ಷಾ ಸ್ಟಾರ್ಟ್ ಆಗಿ ಬಂದುದಕ್ಕಿಂತಲೂ ರಭಸದಿಂದ ಓಡಿತು. ಇಬ್ಬರೂ ಜೊತೆಗೂಡಿ ಬೀಚ್ ಕಡೆ ನಡೆದರು. ಬಿಸಿಲಿನ ತಾಪ ಏರಿದ್ದರೂ ಸ್ವೇಚ್ಛೆಯಾಗಿ ವಿಹರಿಸ ಬಯಸಿದ್ದ ಪ್ರೇಮಿಗಳು, ಹೊಸ ಜಾಗವನ್ನು ಕಂಡುಕೊಂಡಿದ್ದರಿಂದ ಶಿಖರಗೊಂಡ ಚೈತನ್ಯದ ಮುಂದೆ ಬಿಸಿಲು ಬೆಳದಿಂಗಳಂತೆ ತೋರಿತು. ಸಕ್ಕರೆಯಂತೆ ಬಿಳುಪಾದ ಮರಳು ರಾಶಿಯಲ್ಲಿ ವಿದ್ಯಾರ್ಥಿ ಜೀವನಕ್ಕೆ ಅವಶ್ಯಕವಾದ ನೋಟ್ ಬುಕ್ಕೊಂದು ಕೈಯಲ್ಲಿ ಹಿಡಿದು ದೂರಕ್ಕೆ ದೃಷ್ಟಿ ಬೀರಿದ ಲಕ್ಷ್ಮಿಯೂ ಮೌನದಿಂದ ತನ್ನಿಚ್ಛೆಯಂತೆ ವೀಕ್ಷಿಸುತ್ತಿದ್ದಳು. ದೂರಕ್ಕೆ ಪ್ರಶಾಂತವಾಗಿ, ಬಿಸಿಲ ಕಿರಣಗಳನ್ನು ಸೆಳೆದು ಸುಳಿ ಮಿಂಚಾಗಿ ಪರಿವರ್ತಿಸಿ ವಯ್ಯಾರದಿಂದ ನರ್ತಿಸುವ ಕಡಲು, ಹತ್ತಿರ ಬಂದಂತೆಲ್ಲ ತನ್ನ ವಾಸ್ತವತೆ ತೋರುವಂತೆ ಆರ್ಭಟಿಸುತಿತ್ತು. ತನ್ನೊಡಲ ಕ್ರೋಧವನ್ನು ತಣಿಸಲು ಅಲೆಗಳನ್ನು ಅಸ್ತ್ರವಾಗಿ ಮಾರ್ಪಡಿಸಿ ತೀರದ ಮುಖಕ್ಕೆ ರಾಚುತ್ತಿತ್ತು. ಕಡಲು ಕಡುಕೋಪದ ಹೊಡೆತ ತಿಂದೂ ತಿಂದು ದಡದ ಅಂಚು ಸಿಮೆಂಟ್ ರಸ್ತೆಯಂತೆ ಷ್ಟೆಡುಸಾಗಿತ್ತು. ಅಲ್ಲಲ್ಲಿ ನಕ್ಷತ್ರ ಮೀನುಗಳ ಒಣಗಿದ ತುಂಡುಗಳು, ಹುಳುಗಳ ಚಿಪ್ಪುಗಳು ಬಿದ್ದಿದ್ದವು.

ತುಸು ದೂರ ನಡೆದು, ಬಹಳ ಹೊತ್ತಿನ ಮೌನದ ನಂತರ ರಾಜು ನಿಂತು ಲಕ್ಷ್ಮಿಯ ಮುಖ ನೋಡಿದ. ಗಾಳಿಯ ರಭಸಕ್ಕೆ ಮುಖಕ್ಕೆ ಅಡ್ಡ ಬರುವ ಕೂದಲನ್ನು ಹಿಂದಕ್ಕೆ ತಳ್ಳಿ ಏನೋ ಹೇಳಲು ಹೊರಟಂತಿರುವ ಅವನ ಮುಖ ನೋಡಿ ಮಾದ

ಸ್ಮಿತದಿಂದ "ಏನು ಚಿಂತೆ? " ಕೇಳಿದಳು.

ಈ ಸಮುದ್ರ ಮಾಡೋ ಸದ್ದು ಕೇಳಿದರೆ ನಿನ್ನೆ ನಿಮ್ಮ ತಾಯಿ ಬಯ್ದಿದ್ರಲ್ಲ ಅದು ಜ್ಞಾಪಕ ಬರುತ್ತೆ. ನಿಮ್ ತಾಯಿಯ ಆರ್ಭಟ ಹಾಗಿತ್ತು. ನಾನು ಸ್ವಲ್ಪ ಹೆದರಿ ಹಿಂದೆ ಸರಿದಿದ್ರೆ ಬಹುಶಃ ನನ್ನ ಮಾನ ಮರ್ಯಾದೆ ಏನೂ ಉಳಿಸ್ತಿರ್ಲಿಲ್ವೋ ಏನೋ? " ಅರೆ ನಗೆಯಲ್ಲಿ ನುಡಿದ.

ಗೋರಾಗಿನಕ್ಕು "ಹೌದು. ನಮ್ ಮಮ್ಮಿ ಸ್ವಲ್ಪ ಹಾಗೇ, ನಮ್ಮ ಡ್ಯಾಡಿ ಕೋಲೆ ಬಸವನ ತರಹ ಯಾವಾಗ್ಲೂ ನಮ್ ಮಮ್ಮಿ ಹೇಳ್ದಾಗೆ ಮನೆಯಲ್ಲಿ ಎಲ್ಲ ನಡೆಯೋದು ನಾನಂತೂ ಡ್ಯಾಡಿ ಕಡೆಗೇನೆ ಮದುವೆಯಾದ ಹೊಸದ್ರಲ್ಲಿ ಮಮ್ಮಿ ಡ್ಯಾಡಿನ ಹತ್ರ ಸೇರಿಸ್ದಾಗೆ ಸಿಡಿಮಿಡಿಗೊಳ್ತಿದ್ರಂತೆ " ಎಂದು ಮನೆಯಲ್ಲಿ ಸ್ವತಃ ತಂದೆಯೆ ಮಗಳ ಎದುರಿಗೆ ಪತ್ನಿಗೆ ಅಣಕಿಸುವಂತೆ ಹಲವು ಬಾರಿ ಹೇಳಿದ್ದನ್ನು ರಾಜನೆದುರಿಗೆ ಹೇಳಿದಳು.

"ನೀನು ಮೊದ್ಲಿಗೆ ಸನ್ ಕಂಡ್ರೆ ಮೂಡ್ತಿದ್ದೆಯಲ್ಲ ಹಾಗೆ, ಅದಕ್ಕೆ ಏನೋ ಕ್ಲಾಸ್ ಹುಡುಗ್ರೆಲ್ಲ ನಿನಗೆ ನಾಗಿನ್ ನಾಗಿನ್. ಅನ್ನೋದು". ನೀನೂ ಸಹ ನಿನ್ ತಾಯಿಯ ಹಾಗೆ ಎಂದು ಪರೋಕ್ಷವಾಗಿ ಹೇಳಿದ್ದನ್ನು ಕೇಳಿ ನಾಚಿಕೆಯಿಂದ ತಲೆ ತಗ್ಗಿಸಿದಳು.

"ತಗೋ ಲಕ್ಷ್ಮಿ ಈ ಬುಕ್ ನಿನ್ ಬ್ಯಾಗಲಿಟ್ಕೋ" ಎಂದು ಪುಸ್ತಕ ಕೈಗಿತ್ತ. ರಾಜನ ಪುಸ್ತಕ ಅವನ ಕೈನಲ್ಲಿರೋದಕ್ಕಿಂತ ಲಕ್ಷ್ಮಿಯ ಬ್ಯಾಗ್‌ನಲ್ಲಿಯೆ ದಿನದ ಹೆಚ್ಚು ಸಮಯ ಕಳೆಯುತ್ತಿತ್ತು.

ರಾಜನ ಇಷ್ಟೆಯ ಹುಚ್ಚನ್ನು ಮುಗುಳ್ನಗೆಯಲ್ಲೇ ನೋಡುತ್ತ ನಿಂತಳು ಲಕ್ಷ್ಮಿ. ದೂರದಲ್ಲಿ ರಾಜು ಇನ್ನೂ ಓಡುತ್ತಲೇ ಇದ್ದ. ಅವನಿಗೆ ಸಂತೋಷ ತಡೆ ಹಿಡಿಯುವುದು ಕಷ್ಟವಾಗಿತ್ತು. ಲಕ್ಷ್ಮಿಯ ತಲೆಯೊಳಗೆ ಏನೋ ಯೋಚನೆಯೊಂದು ಹೊಳೆಯಿತು ಕಣ್ಣರಳಿಸಿ ಅಲ್ಲೇ ಕುಳಿತು, ಕಾಲ ಮೇಲೆ ಹಸಿಯಾದ ಮರಳನ್ನು ಎಳೆದುಕೊಂಡು ಬಲು ಆಸಕ್ತಿಯಿಂದ ಗೋಪುರ ನಿರ್ಮಿಸತೊಡಗಿದಳು. ಗೋಪುರ ಚನ್ನಾಗಿಯಿದ್ದು ಎಂದು

ತೃಪ್ತಿಯಾದ ನಂತರ ಅದರ ಸುತ್ತಲು ತರಂಗದ ಅಲೆಯಂತೆ ಅಂಕು ಡೊಂಕಾದಮೂರಿಂಚು ಎತ್ತರದ ಕಟ್ಟೆ ಕಟ್ಟಿ. ಇವೆರಡರ ಮಧ್ಯೆ ಚೌಕಾಕಾರದಲ್ಲಿ ನಾಲ್ಕಿಂಚು ಎತ್ತರದ ಕಟ್ಟೆ ಕಟ್ಟಿದಳು. ಅದರ ಸೌಂದರ್ಯ ಶೋಭೆಯನ್ನು ಒಮ್ಮೆ ದಿಟ್ಟಿಸಿ, ಎದ್ದುನಿಂತು ಇತ್ತಲೇ ಬರುತ್ತಿರುವ ರಾಜನನ್ನು ಉತ್ಸಾಹದಿಂದ "ರಾಜೂ ಇಲ್ಲಿ ಬೇಗ ಬಾ .." ಎಂದು ಎರಡೂ ಕೈ ಬೀಸಿ ಕರೆದಳು. ಸಾಗರದ ಅರ್ಭಟದಿಂದ ಕೂಗು ಕೇಳದಿದ್ದರೂ ಪ್ರೇಮಕಾಂತೆ ತನ್ನನ್ನು ಕರೆಯುವ ರೀತಿಗೆಶಕ್ತಿ ಹೆಚ್ಚಿಸಿಕೊಂಡು ಓಟದ ರಭಸ ಹೆಚ್ಚಿಸಿ, ತೇಗುತ್ತ ಬಂದು ಸೊಂಟದ ಮೇಲೆ ಕೈ ಇಟ್ಟು ನಿಂತು ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದ.

ಸ್ವಲ್ಪ ಲಜ್ಜೆಯಿಂದಲೆ "ರಾಜು ಇದೇನು ಗೊತ್ತೆ?"ಕೇಳಿದಳು.

"ಇಲ್ಲ" ಎಂದ.

"ಸರಿಯಾಗಿ ಯೋಚ್ನೆ ಮಾಡಿ ಹೇಳು ನೋಡೋಣ ನಾನು ನೀನು ಜೊತೆಯಲ್ಲಿ ಇರ್ಬೇಕಾದ್ರೆ,ಇದನ್ನ ನೋಡಿದ್ರೆ ಯಾವ ಯೋಚನೆ ಬರ್ಬಹುದು?"

"ಯೋಚನೆಯೇನೊ ಒಳ್ಳೇದೆ ಒರ್ತಾ ಇದೆ. ಆದ್ರೆ ಇದನ್ನ ನೋಡಿದ್ರೆ ಸಮಾಧಿನೆ ನೆನಪಿಗೆ ಬರುತ್ತೆ" ನಗುತರಲು ಪ್ರಯತ್ನಿಸಿದ.

ಅವನ ಮಾತಿನ್ನೂ ಕೊನೆಗೊಳ್ಳುತ್ತಿದಂತೆಯೇ"ಥೂ...ರಾಜು ಇಂತಾ ಮಾತು ಹೇಳೋದು?" ಎಂದು ಕೋಪ, ಬೇಸರದಿಂದ ಸಿಡಿದಳು.

"ಸಾರಿ ಲಕ್ಷ್ಮಿ ಸುಮ್ನೆ ಹಾಗೆಂದೆ ಅಷ್ಟೆ "ಹ್ಞಾ...ಏನಿದು?" ರಾಜಿಯಾಗುವವನಂತೆ, ಕೇಳಿದ ಮೇಲೆ ಲಕ್ಷ್ಮಿ ಮರಳಿ ತನ್ನ ಚೇತನ್ಯ ಸಂತೃಪ್ತಿ ತುಂಬಿಕೊಂಡಳು. ಮುಖ ಅರಳಿ ಕಂಗೊಳಿಸುವ ಹೂವಂತಾಯಿತು.

"ಬಾ ಇಲ್ಲಿ ಕೂತ್ಕೊ" ಎಂದು ಕೈ ಹಿಡಿದು ಜಗ್ಗಿ ಅವನ ಪಕ್ಕದಲ್ಲೆ ಒರಗಿ ಕುಳಿತಳು. "ಇದು ಇದೆಯಲ್ಲ" ಎಂದು ಗೋಪುರ ತೋರಿ ಮುಖ ನೋಡಿದಳು. ರಾಜ ಆಸಕ್ತಿ ಯಿಂದ "ಹ್ಞಾ..." ಎಂದ.

"ಇದು ನಮ್ಮಿಬ್ಬರ ಪ್ರೇಮ ಮಂದಿರ. ಇದರಲ್ಲಿಯೇ ನಾವ್ವ ಯಾವಾಗ್ಲೂ ಇರೋದು" ಸದಾಸ್ಮಿತದಿಂದ ನುಡಿದಳು

"ಓ...ಹೋ .." ಆಶ್ಚರ್ಯವ ಸೂಚಿಸಿ ತಲೆ ತೂಗಿದ.

"ಆಮೇಲೆ ಇದೇನಂದ್ರೆ, ಈಚೌಕಟ್ಟಿದೆಯಲ್ಲ ವಜ್ರದಕೋಟೆ. ನಮ್ಮ ಪ್ರೇಮ ಪ್ರೀತಿ ವಜ್ರದಷ್ಟೆ ಕಠಿಣ. ನಮ್ಮಿಬ್ಬರ ಮನಸ್ಸು ಹೃದಯ ಒಬ್ರಲ್ಲಿ ಒಬ್ಬರು ಬೆರೆತರೆ ಯಾರೂ ನಮ್ಮನ್ನೆ ಏನೂ ಮಾಡ್ಲಿಕ್ಕೆ ಆಗಲ್ಲ. ಇದು ಅಂತರ್ಯಕ್ಕೆ ಸಂಬಂಧಿಸಿದ್ದು" ಎಂದು ಗುಣವನ್ನು ವಿಶ್ಲೇಷಿಸಿ ವಕ್ರವಾಗಿದ್ದ ಕಟ್ಟೆಯ ಕಡೆ ಕೈ ಬೆರಳು ತೋರಿಸಿ "ಇದು ನಮ್ಮಿಬ್ಬರ ದೈಹಿಕ ಸಂಬಂಧಕ್ಕೆಸಂಬಂಧಿಸಿದ್ದು. ಪ್ರೇಮದ ಇನ್ನೊಂದು ಮುಖ. ನಮ್ಮಿಬ್ಬರನ್ನು ಬೇರೆ ಮಾಡವ್ರು ಮೊದಲು ಬಾಹ್ಯ ಬಂಧನವನ್ನು ಬಿಡಿಸಿ ಆಮೇಲೆ ಅಂತರ್ಯದ ಬಂಧನ ಛೇದಿಸ್ಬೇಕು ಕೊನೆಗೆ ಈ ಪ್ರೇಮ ಮಂದಿರಕ್ಕೆ ಪ್ರವೇಶಿಸ್ಬೇಕು. ಇದು ಸಾಧ್ಯನಾ ರಾಜು?" ಭಾವುಕದಿಂದ ನುಡಿದು ಕೇಳಿದಳು.

"ಇಲ್ಲ ಯಾವ ಬ್ರಹ್ಮನ ಮಗನಿಂದಲೂ ಸಾಧ್ಯವಿಲ್ಲ. "ಲಕ್ಷ್ಮಿ ಇದೆಲ್ಲ ನಿನಗೇಗೆ ಹೊಳೀತು?" ವಿಸ್ಮಯದಿಂದ ಕೇಳಿದ.

ತಲೆ ನೋಟ ಎರಡನ್ನೂ ತಗ್ಗಿಸಿ ಲಜ್ಜೆಯಿಂದ "ಎಲ್ಲ ನಿನ್ನ ಪ್ರೀತಿ ಕಲ್ಸಿದ್ದು ನನ್‌ದೇನು ಇಲ್ಲ ಇದ್ರಲ್ಲಿ"

"ಹೌದು ಲಕ್ಷ್ಮಿ ನನಗೂ ಒಂದೊದ್ಸಾರಿ ಇಂತಹ ಯೋಚ್ನೆ ಬರುತ್ತೆ ಹೇಳ್ಲಿಕ್ಕೆ ಬರಲ್ಲಅಷ್ಟೆ. ಆಗ ನಾನು ಕುಣಿದಾಡ್ತೀನಿ" ಎಂದ,

'ನಾನು ಹಾಡ್ತೀನಿ, ನೀನು ಕುಣಿದಾಡ್ತೀಯಾ ಅಷ್ಟೆ ವ್ಯತ್ಯಾಸ ಆದ್ರೆ ಗುರಿ ಒಂದೇ..., ಇದು ಇನ್ನೂ ಮುಗಿಲಿಲ್ಲ .ಈಪ್ರೇಮ ಮಂದಿರದಲ್ಲಿ ನಮ್ಮಿಬ್ಬರಿಗೆ ಮಾತ್ರ ಪ್ರವೇಶ. ನಮ್ಮಿಬ್ಬರ ಮಧ್ಯೆ ಯಾರೂ ಬರ್ಲಿಕ್ಕೆ ಸಾಧ್ಯವಿಲ್ಲ ರಾಜು" ಎಂದು ಆವೇಶ ದಿಂದ ತಲೆ ಅಲ್ಲಾಡಿಸಿ ನುಡಿದು ದನಿ ಸ್ವಲ್ಪ ತಗ್ಗಿಸಿ "ಈಪ್ರೇಮ ಮಂದಿರದಲ್ಲಿ ಇದು

ನೀನು, ಇದುನಾನು" ಎಂದು ಬಲಗೈಯ ಮಧ್ಯೆ ಬೆರಳು ರಾಜನೆಂದು ತೋರಿಸಿ ತುರು ಬೆರಳನ್ನು ತಾನೆಂದು ತೋರಿ, ಗೋಪುರದ ಒಳಗೆ ಎರಡೂ ಬೆರಳುಗಳನ್ನು ಇಟ್ಟು "ಯಾವತ್ತೂ ಹೀಗೆ ಇರ್ಬೇಕು" ಎಂದು ಉತ್ಕಂಠ ಪ್ರೇಮಭರಿತವಾಗಿ ನುಡಿದು ಹೀಗೆ ಇರೋಣ ಎಂದು ಆಸೆಯ ಕಂಗಳಿಂದ ರಾಜನ ಮುಖ, ಕಣ್ಣು ನೋಡುತ್ತ ಅವನಿಂದ ಪ್ರತಿಕ್ರಿಯೆ ಬಯಸಿ ಹಾಗೆ ಕುಳಿತಳು.

ರಾಜನ ಕಣ್ಣು ಕಿರಿದಾಗಿದ್ದವು, ಗೋಪುರದ ಕೆಳಗಿದ್ದ ಲಕ್ಷ್ಮಿಯ ಬೆರಳುಗಳನ್ನು ಒಮ್ಮೆ ನೋಡಿ ಮುಂದೆ ಬಾಗಿ ಆವೇಶದಿಂದ ಗೋಪುರದ ಮೇಲೆ ತನ್ನೆರಡು ಕೈಗಳನ್ನು ಅಪ್ಪಳಿಸಿದ. ಲಕ್ಷ್ಮಿಯ ಕೈಗಳು ಅಲ್ಲೇ ಇರುವಂತೆ ಒತ್ತಿ ಹಿಡಿದು ಮೊಳಕಾಲೂರಿ ಬಾಗಿ ನಿಂತ. ರಾಜನ ವರ್ತನೆಯಿಂದ ಲಕ್ಷ್ಮಿ ಬೆರಗಾಗಿ ಬೆದರಿ "ರಾಜೂ ಇದೇನ್ ಕೆಲ್ಸ ಮಾಡಿದೆ ?" ಉದ್ವೇಗದಿಂದ ಚೀತ್ಕರಿಸಿದಳು.

"ಹೌದು ಲಕ್ಷ್ಮಿ ನಾವು ಒಂದು ಪಕ್ಷ ಸತ್ರೂ ಹೀಗೆ ಒಟ್ಟಿಗೇ ಸಾಯ್ಬೇಕೂ..." ಪವಿತ್ರ ಪ್ರೇಮಿಯಾಗಿ ನುಡಿದ.

ಈರ್ವರ ನೋಟವು ಎಳೆ ಎಳೆಯಾಗಿ ಬೆಸೆದು, ಹೃದಯ ತುಂಬಿ ಮನಸ್ಸು ಗಳೆರಡು ಸ್ವೇಚ್ಛೆಯಾಗಿ ಜೋಡಿ ಹಕ್ಕಿಯಂತೆ ಹಾರಿದವು.

O O O

ಸತ್ಯನಾರಾಯಣನ ಪೂಜೆಗೆಂದು ಕರೆಯಲು ಬಂದಿದ್ದ ಲಕ್ಷ್ಮಿಯ ಗೆಳತಿ ಗೀತಾ ಮತ್ತು ಅವಳ ತಂಗಿ, ಗೇಟನ್ನು ತೆರೆದು ಕರೆ ಗಂಟೆಯನ್ನು ಒತ್ತಿದಳು. ಬಾಗಿಲು ತೆಗೆ ಯಲು ಬಂದ ಸಾವಿತ್ರಮ್ಮ "ಎಷ್ಟೊತ್ತೇ ಲಕ್ಷ್ಮಿ ಹೋಗೋದು ? ಬೇಗ ಬರ್ಲಿಕ್ಕೆ ಆಗಲ್ವಾ?" ತಡವಾದುದಕ್ಕೆ ರೇಗುತ್ತಲೇ ಬಾಗಿಲು ತೆರೆದಳು. ಬಾಗಿಲಲ್ಲಿ ನಿಂತವರನ್ನು ಕಂಡು ಬೆರಗಾಗಿ "ಓ .ನೀವಾಬನ್ನಿ. ನಾನು ಲಕ್ಷ್ಮಿಯಂತ ತಿಳ್ದಿದ್ದೆ.ಬನ್ನಿ ಕೂತ್ಕೊಳ್ಳಿ" ಎನ್ನುತ್ತ ಒಳಗೆ ಕರೆದೊಯ್ದಳು.

"ಪರವಾಗಿಲ್ಲ ಬಿಡಿ, ಕೂರ್ಲಿಕ್ಕೆ ಟೈಮಿಲ್ಲ. ಲಕ್ಷ್ಮಿ ಮನೆಯಲ್ಲಿಲ್ವ ?" ಕೇಳಿದಳು ಗೀತಾ.

"ಇಲ್ಲ ಕಾಲೇಜಿಗೆ ಹೋದವಳು ಇನ್ನೂ ಬಂದಿಲ್ಲ. ಹೇಳ್ಬಿಟ್ಟಾದ್ರೂ ಹೋಗಲ್ಲ ಅವ್ಳು. ನೀನು ಕಾಲೇಜಿಗೆ ಇವತ್ತು ಹೋಗ್ಲಿಲ್ವೇನು?" ಕೇಳಿದರು.

ಮಗಳು ಕಾಲೇಜಿಗೆ ಹೋಗಿದ್ದಾಳೆ ಎಂದು ಅವರು ಹೇಳಿದ್ದರಿಂದ ಅವರ ನಂಬಿಕೆಗೆ ಸರಿಯಾಗಿ ತಾನು ಸೃಷ್ಟಿ ಮಾಡಿ ಹೇಳುವುದೆಂದು ಚಿಂತಿಸಿ–"ಹ್ಞು ಹೋಗಿದ್ದೆ ಮನೆಯಲ್ಲಿ ಕೆಲಸ ಇದ್ದದ್ರಿಂದ ಬೇಗ ಬಂದೆ. ನೋಡಿ ನಮ್ಮನೆಯಲ್ಲಿ ಇವತ್ತು ಪೂಜೆ ಇದೆ ನೀವು ಬರ್ಬೇಕು.ನಾನು ಕ್ಲಾಸ್‌ನಲ್ಲಿಲಕ್ಷ್ಮಿಗೆ ಹೇಳ್ಬೇಕೆಂದಿದ್ದೆ ಅವಸರದಲ್ಲಿ ಮರ್ತೇ ಹೋಯ್ತು" ಎಂದು ತನ್ನನ್ನೇ ನಿಂದಿಸುವಂತೆ ನುಡಿದಳು.

"ಅವ್ಳೆನ್ನಾದ್ರೂ ಕಳ್ಸೋಣಾಂತ ಇದ್ದೆ, ಬರ್ಲಿಲ್ವಲ್ಲ... ನೋಡೋಣ ಬಂದ ತಕ್ಷಣ ಕಳಿಸ್ತೀನಿ. ನೀವು ಇನ್ನೂ ಯಾರಾರ ಮನೆಗೆ ಹೋಗ್ಬೇಕೊ ಹೋಗ್ಬನ್ನಿ" ಎಂದು ಸಾವಿತ್ರಮ್ಮ ಬೀಳ್ಕೊಟ್ಟರು

ರಭಸವಾಗಿ ಪುಸ್ತಕವೊಂದುಕೈಯಲ್ಲಿ ಹಿಡಿದು ಬೀರುತ್ತ ಬಂದ ರಾಜು ತಲೆಎತ್ತಿ ತಮ್ಮ ಮನೆಯ ಎದುರಿನಲ್ಲೆ ಬರುತ್ತಿದ್ದ ಕ್ಲಾಸ್‌ಮೇಟ್ ಕಂಡು "ಓ.. ಏನ್ರಿ ಇಷ್ಟು ದೂರ ಬಂದ್ರಿ? ಲಕ್ಷ್ಮಿ ಮನೆಗೆ ಬಂದಿದ್ರಾ? ಸಿಕ್ಕಿದ್ರಾ? ನೋಡಿ ಇದೇ ನಮ್ ಮನೆ. ಬನ್ನಿ ನಮ್ಮ ತಾಯಿ ಪರಿಚಯ ಮಾಡಿಸ್ತೀನಿ" ಎಂದು ನಿರರ್ಗಳವಾಗಿ ಹರಳು ಉರಿದಂತೆ ಮಾತನಾಡ ತೊಡಗಿದ.

"ಸರಿ ಇನ್ನೊಂದ್ಸಾರಿ ಬರ್ತೀನಿ. ಈಕೆ ನನ್ ಸಿಸ್ಟರ್ ಶಾಂತಿ" ಎನ್ನುತ್ತ ಅನು ಮೌನದಿಂದ ಅವನ ಕೈನಲ್ಲಿದ್ದ ಪುಸ್ತಕ ದಿಟ್ಟಿಸಿದಳು.

ಕಳವಳದಿಂದ ರಾಜು "ಓ ..ನೋಟ್ಸನ್ನೇ ನೋಡ್ತ ಇದ್ದೀರಾ? ನನಗಿವತ್ತು ಪ್ರಿನ್ಸಿಪಾಲ್ ಬಹಳ ಕೆಲ್ಸಕ್ಕೆ ಹಚ್ಚಿಬಿಟ್ಟಿದ್ರು. ಅದಕ್ಕೆ ಕ್ಲಾಸಿಗೆ ಬರ್ಲಿಲ್ಲ" ಎಂದು ಅವಳ ಶಂಕೆಗೂ ತನ್ನ ಸಮಾಧಾನಕ್ಕೂ ಒಂದೆಉಸಿರಿಗೆ ಹೇಳಿ "ಸರಿ ಹೋಗ್ಬನ್ನಿ, ಇನ್ನೊಮ್ಮೆ ಬಂದಾಗ ನಮ್ಮನೆಗೆ ಬನ್ನಿ" ಎನ್ನುತ್ತ ಸ್ವಲ್ಪ ದೂರದಲ್ಲಿ ಹಿಂದಿನಿಂದ ಬರುತ್ತಿರುವ ಲಕ್ಷ್ಮಿಯತ್ತ ನೋಡಿ ಜಾಗ ಖಾಲಿ ಮಾಡಿದ.

ದೂರದಿಂದಲೇ ಪರಸ್ಪರ ಮುಖ ಗುರ್ತಿಸಿದರೂ ಲಕ್ಷ್ಮಿ ತಲೆ ಎತ್ತಲಾರದವ ಳಂತಾಗಿದ್ದಳು.

"ಏಯ್ ಏನೇ ಲಕ್ಷ್ಮಿ ಕಾಲೇಜಿಗೆ ಹೋಗಿದ್ದೀಯಂತೆ ನಿನ್ ತಾಯಿಹೇಳಿದ್ರು. ನೀನು ನೋಡಿದ್ರೆ ಕಾಲೇಜಿಗೆ ಬಂದೇ ಇಲ್ಲ. ಎಲ್ಹೋಗಿದ್ದೆ?" ಎಂದಾಗ ಲಕ್ಷ್ಮಿಯ ಜಂಘಾಬಲವೇ ಉಡುಗಿ ಹೋಗಿ ಮುಖ ಬಿಳಿಚಿಕೊಂಡಿತು. ಕಂಪಿಸುವ ದನಿಯಿಂದ "ನಮ್‌ತಾಯಿಗೆ ಕಾಲೇಜಿಗೆ ಬಂದಿಲ್ಲ ಅಂತೇಳ್ಬಿಟ್ಟೇನೆ?"ಬಯಾರ್ತಳಾಗಿ ಕೇಳಿದಳು.

"ನಿನ್ ತಲೆ. ನಾನು ಹಾಗೇಳ್ಬಿಡ್ತಿನಾ? ಅದಿರ್ಲಿ ನೀನೆಲ್ಲಿ ಹೋಗಿದ್ದೆ ಮೊದ್ಲೇಳು. ಏನು ಸಮಾಚಾರ ಕಾಲೇಜಿಗೆ ತುಂಬಾ ಇರೆಗ್ಯುಲರ್ ಆಗ್ತಿದ್ದೀಯಲ್ಲಾ . ?" ಲಕ್ಷ್ಮಿಯ ಅದೋವದನದಿಂದ ಏನೇನೊ ಗ್ರಹಿಸಿ ತಿಳಿಯುವ ವಯಸ್ಸಿಗನುಣವಾದ ಆಸಕ್ತಿ ಯಿಂದ ಒತ್ತಾಯದಿಂದಲೆ ಕೇಳಿದಳು.

"ಸಧ್ಯ ಹೇಳ್ಲಿಲ್ಲವಲ್ಲ. ತುಂಬಾ ಥ್ಯಾಂಕ್ಸ್ ಕಣೇ ಗೀತಾ... ಫ್ರೆಂಡ್ಸ್ ಅಂದ್ರೆ ಹೀಗಿರ್ಬೇಕು" ಗೆಳತಿ ತನಗೆ ಜೀವದಾನ ಮಾಡಿದಂತೆನಿಸಿ ಶ್ಲಾಘಿಸಿದಳು.

"ಅದೆಲ್ಲ ಆಮೇಲೆ. ಈ ಪುಸ್ತಕದ ಬ್ಯಾಗ್ ತಗೊಂಡು ಎಲ್ಹೋಗಿದ್ದೆ ಅದನ್ನ ಮೊದ್ಲೇಳ್ತಿ ಇಲ್ವೋ...?" ಸ್ನೇಹಿತೆಯು ಅಂತರಂಗವನ್ನು ಹೊಕ್ಕು ನೋಡುವಂತೆ. ದಿಟ್ಟಿಸಿ, ಆಕೆಯ ಅಸಹಾಯಕತೆಗೆ ಮತ್ತೊಮ್ಮೆ ಬೆದರಿಕೆ ಹಾಕಿದಳು.

"ಅಯ್ಯೋ ಅದಾ? ನಾಳೆ ಕಾಲೇಜಿನಲ್ಲಿ ಸಿಗು ಎಲ್ಲಾ ಹೇಳ್ತೀನಿ. ಅದೇ ಒಂದು ಕತೆ" ಎಂದು ಏನೂ ಇಲ್ಲವೆಂಬಂತೆ ನುಡಿದು. 'ನಿನ್ನ ತಂಗಿ ಇಲ್ಲಿ ಇದ್ದಾಳೆ' ಎಂದು ಸೂಕ್ಷ್ಮವಾಗಿ ಸೂಚಿಸಿದಳು.ಗೀತಾಳನ್ನು ತಕ್ಷಣ ಗ್ರಹಿಸಿ "ಸರಿ, ಈಗ ನಮ್ಮನೆಯಲ್ಲಿ ಪೂಜೆ ಇದೆ ಬಾರೆ ಎಂದು ಕರೆದಳು.

"ನೀನೋಗ್ತಿರು ನಮ್ಮನೆಯಲ್ಲೂ ಪೂಜೆ ಮಾಡಿಸ್ಕೊಂಡು ನಿನ್ನ ಹಿಂದೇನೇ ಬಂದ್ಬಿಡ್ತೀನಿ" ಎಂದು ಅರ್ಥಗರ್ಭಿತವಾಗಿ ನುಡಿದು ಲಘುವಾಗಿ ನಗುವಿನ ಅಲೆಯೆ ಬ್ಬಿಸಿ, ಹೆದರಿಕೆಯೂದರೂ ಧೈರ್ಯ ತುಂಬಿಕೊಳ್ಳುತ್ತ ಮನೆಯತ್ತ ಹೆಜ್ಜೆ ಹಾಕಿದಳು.

ಹಲವು ಬಾರಿ ಬೀಚ್‌ಗೆ ಬಂದಿದ್ದ ರಾಜು ಲಕ್ಷ್ಮಿ ಆದಿನವೂ ರಿಕ್ಷಾವಲ್ಲಿ ಬಂದಿಳಿದರು. ಮರಳಿನ ರಾಶಿಯತ್ತನಡೆಯುತ್ತ ನಿರ್ಜನವಾದ ತಮ್ಮ ಸ್ಥಳಕ್ಕೆ ಬಂದರು. ಸ್ವಲ್ಪ ತಗ್ಗಿನಂತಿದ್ದ ಮರಳಿನ ರಾಶಿಯಲ್ಲಿ ಇನ್ಯಾರು ಬಂದು ಬ್ಯಾಗ್ ತೆಗೆದುಕೊಳ್ಳುವುದಿಲ್ಲ ಎಂಬ ಭಾವನೆಯಿಂದ ಹೆಗಲ ಮೇಲಿದ್ದ ಬ್ಯಾಗನ್ನು ಜಾರಿಸಿ 'ರಾಜು ಇವತ್ತಾದ್ರೂ ನೀರಲ್ಲಿ ಆಟ ಆಡೋಣ್ವಾ?" ಅತ್ಯಾಸೆಯಿಂದ ಕೇಳುತ್ತ ಹಿಂದಿನಿಂದ ಕೊರಳು ಬಳಸಿದಳು. ರಾಜು ಒಪ್ಪಿಗೆ ಇತ್ತ ನಂತರ ಸಾಕಷ್ಟು ಹೊತ್ತು ನೀರು ಎರಚಾಡಿ ಆನಂದಿಸಿದರು.

ಮತ್ತಷ್ಟೊತ್ತು ಒಟ್ಟಿಗೆ ತಿರುಗಾಡಿ, ಯಾರೂ ಕಾಣದ ಸುಖ ಸಂತೋಷ ಆ ಪ್ರದೇಶದಲ್ಲಿ ವಿಶೇಷವಾಗಿ ಕಂಡು ಕೊಳ್ಳುವಷ್ಟರಲ್ಲಿ ಸೂರ್ಯನ ಪ್ರಖರತೆ ಕಡಿಮೆಯಾಗುತಿತ್ತು.

"ಬಾ ಲಕ್ಷ್ಮಿ ಕೈ ಕಾಲು ತೊಳ್ಕೊಂಡು ಹೋಗೋಣ" ಎನ್ನುತ್ತ ರಾಜು ನೀರಿನ ಕಡೆ ನಡೆದ.

ಹಿಂಬಾಲಿಸಿದ ಲಕ್ಷ್ಮಿ "ರಾಜು ಇನ್ಮೇಲಿಂದ ಪದೇಪದೆ ಇಲ್ಲಿಗೆ ಬರೋದು ಬೇಡಾ"ಎಂದಳು.

"ಹಾಲ್‌ರೈಟ್. ನಾಳೆಯಾಗಾದ್ರೆ ಪಾರ್ಕ್?"

"ಪಾರ್ಕ್? ಅಲ್ಲಿಗಂತೂ ಮೊದ್ಲು ಬೇಡ. ನೋಡೋಣ ಬೇರೆ ಎಲ್ಲಿಗಾದ್ರೂ" ಎನ್ನುತ್ತ ಮುಖ ತೊಳೆದುಕೊಳ್ಳಲಾರಂಭಿಸಿದಳು.

ಜೊತೆಗೂಡಿ ಬ್ಯಾಗ್ ಇಟ್ಟಿದ್ದ ಜಾಗಕ್ಕೆ ಬಂದು ಜಾಗ ಪರೀಕ್ಷಿಸಿದರು. ಎಂದಿನಂತೆ ಇವರ ಬರುವನ್ನೆ ಕಾಯುತ್ತಿದ್ದ ವ್ಯಾನಿಟಿ ಬ್ಯಾಗ್ ನಾಪತ್ತೆ! "ರಾಜುಬ್ಯಾಗಿಲ್ಲ ಈಗೇನ್ಮಾಡೋದು?" ಉದ್ವೇಗದಿಂದ ಅಳುವಿನ ಎಳೆ ಸೇರಿಸಿ ಕೇಳಿದಳು. ರಾಜನ ಕಣ್ಣು ಚುರುಕಾಗಿ ಸುತ್ತಮುತ್ತ ನೋಟ ಹಾಯಿಸಿದ, ಬ್ಯಾಗಿನ ಸುಳಿವೆ ಇಲ್ಲ. "ಎಲ್ಲೋ ಹಾರೋಗಿರ್ಬೇಕು" ಎಂದು ನಗುತರಲು ಯತ್ನಿಸಿದ.

ಅನಾಹುತಕ್ಕೆ ಬೆದರಿದ ಲಕ್ಷ್ಮಿಯು ಗಂಟಲೊಣಗಿ ಕಷ್ಟಪಟ್ಟು ಎಂಜಲು ನುಂಗುತ್ತ " ಪ್ಲೀಸ್ ರಾಜು ತಮಾಷೆ ಮಾಡ್ಬೇಡ. ಮಮ್ಮಿ ಕೇಳಿದ್ರೆ ಏನೆಳೋದು? ಅವ್ರಿಗೇನಾ ದ್ರೂ ನಾವು ಇಲ್ಲಿಗೆ ಬರೋ ವಿಷ್ಯ ಗೊತ್ತಾದ್ರೆ ನನ್ನ ಸುಮ್ನೆ ಬಿಡೋದಿಲ್ಲ. ಈಗೇ ನ್ಮಾಡೋದು ರಾಜು?" ಕಂಪಿಸುವ ದನಿಯೊಂದಿಗೆ ತಡೆಯಿಲ್ಲದೆ ಕಣ್ಣೀರ ಕೋಡಿ ಹೊಡೆಯಿತು. ಲಕ್ಷ್ಮಿ ನಿಧಾನವಾಗಿ ಉಮ್ಮಳಿಸಲಾರಂಭಿಸಿದಳು.

ಮೆಲ್ಲಗೆ ಭುಜದ ಮೇಲೆ ಕೈ ಹಾಕಿ, ತನ್ನತ್ತ ಒತ್ತಿ " ಈ ವಿಷ್ಯಯದ ಬಗ್ಗೆ ನೀನು ಅನುಮಾನ ಇಟ್ಕೋಬೇಡ ಲಕ್ಷ್ಮಿ. ಆದಷ್ಟು ಬೇಗ ಇದು ಅವ್ರಿಗೆ ಗೊತ್ತಾದ್ರೆ ಒಳ್ಳೆಯದೆ. ಇಲ್ದಿದ್ರೆ ನೀನೊಂದು ಮಾತು ಹ್ಞೂ ಅನ್ನು ಸಾಕು.ಇವತ್ತೆ ನಿಮ್ಮ ತಂದೆ ತಾಯಿಗೆ ಹೇಳ್ತೀನಿ.ನಮ್ಮ ತಂದೆ ತಾಯಿಯುಪರಂತೂ ನನ್ನಿಷ್ಟದಂತೆ" ಸಮಾಧಾನ ಮಾಡಲೆತ್ನಿಸಿದ. ಅಂಗೈ ಭುಜದಿಂದ ನಡುವಿಗಿಳಿಯಿತು.

"ನನ್‌ಗೇನು ನಿನ್ನಲ್ಲಿ ಸಂಶಯವಿಲ್ಲ. ಬ್ಯಾಗ್ ಕಳೆದೋಯ್ತಲ್ಲ ಅದಕ್ಕೇನ್ಮಾಡೊ ೀದು?" ಸಧ್ಯದ ಕಷ್ಟ ನಿವಾರಣೆಯ ದಾರಿ ಕಾಣಲು ಬಯಸಿ ಕೇಳಿದಳು.

ಮೆಲ್ಲಗೆ ನಕ್ಕು "ಓ ಅದಕ್ಕೆ ಇಷ್ಟು ಹೆದರಿಕೆನಾ? ನಾನೇಳ್ದಾಗೆ ಕೇಳು.ಬಾ ಇಲ್ಲಿ ಹೇಳ್ತೀನಿ" ಎಂದು ಕಿವಿಯ ಬಳಿ ಮೆಲ್ಲಗೆ ಉಸಿರಿದ. ತಾತ್ಕಾಲಿಕ ಸಮಾಧಾನಕ್ಕೇನೋ ಒಳ್ಳೆಯ ಉಪಾಯ ಎನಿಸಿದ್ದರಿಂತ ಲಕ್ಷ್ಮಿಯ ಮುಖ ಸಮಾಧಾನದಿಂದ ಅರಳಿತು.



ಸಂಪೂರ್ಣ ಕತ್ತಲು ಆವರಿಸಿ ಬಿಟ್ಟಿತ್ತು. ತಾನು ಮಾಡಿರುವ ಅಪರಾಧಕ್ಕೆ ಅಂಜುತ್ತಲೇ ಹೆಜ್ಜೆ ಹಾಕಿದ ಬರಿಗೈಯಲ್ಲಿದ್ದ ಲಕ್ಷ್ಮಿಗೆ ಗೇಟಿಗೆ ಹೊರಗಿ ನಿಂತಿದ್ದ ತಾಯಿಯ ಆಕೃತಿ ಗೋಚರಿಸಿ ಕಸಿವಿಸಿಯಾಯಿತು. ತಲೆ ಸುತ್ತಿತು. ನೆಲ ಕುಸಿದಂತಾಗಿ ಎಲ್ಲೋ ತೇಲುತಿರುವಂತೆ ಭಾಸವಾಯಿತು.

ಮಗಳನ್ನು ಕಾಣುತ್ತಿದ್ದಂತೇ "ಬಾರೇ ...ಬಾ ಎಲ್ಲಿಗೆ ಹೋಗಿದ್ದೆ ಇಷ್ಟೊತ್ತು?"

ಕೆಕ್ಕರಿಸಿಕೊಂಡು ನೋಡುತ್ತ, ಗಡುಸಾಗಿ ಕೇಳಿದರು.

ಸಮಾಧಾನ, ಚೇತನ್ಯ ತುಂಬಿಕೊಂಡು "ಒಳಗೇಳ್ತೀನಿ ಬಾ ಮಮ್ಮಿ" ಎಂದು ತಾಯಿಗೆ ಕಾಯದೆ ಒಳ ನಡೆದಳು.

"ಹು.ಏನೇಳದು? ಎಲ್ಲಿಗೆ ಹೋಗಿದ್ದೆ?ಬ್ಯಾಗ್ ಏನಾಯ್ತು?" ಒಂಬಾಲಿಸುತ್ತಲೆ ಅವಸರದಿಂದ ಕೇಳಿದರು.

"ಬೆಳಿಗ್ಗೆ ಕಾಲೇಜಿಗೆ ಹೋಗ್ತಾ ಇರ್ಬೇಕಾದ್ರೆ ಮಮ್ಮಿ. ಕಾಲೇಜ್ ರೋಡಿನಲ್ಲಿ ಸೇತುವೆ ಪಕ್ಕದಲ್ಲಿ ದೊಡ್ಡದೊಂದು ಮರ ಇದೆಯಲ್ಲ... ಅದರ ಮರೆಯಲ್ಲಿ ಒಬ್ಬ ಹುಡ್ಗ ಬಚ್ಚಿಟ್ಕೊಂಡಿದ್ದ ಅಂತ ಕಾಣ್ಸುತ್ತೆ. ನಾನು ಅವನ್ನು ದಾಟ್ಕೊಂಡು ಹೋಗೋ ವಷ್ಟರಲ್ಲೇ ಹಿಂದಿನಿಂದ ಓಡಿ ಬಂದವ್ನೇ ಬ್ಯಾಗ್‌ಕಸ್ಕೊಂಡು ಹೋಗ್ಬಿಟ್ಟ. ನಾನೂ ಕೂಗಿಕೊಂಡೆ, ಜನಗಳು ಇದ್ರೆ ತಾನೆ? ಕಾಲೇಜಿಗೆ ಹಾಗೆ ಹೋದೆ. ಮನೆಗೆ ಬರೋಣ ಂದ್ರೆ ನಿನ್ನ ಹೆದರಿಕೆಯಿಂದ ಬರ್ಲಿಲ್ಲ. ಅದಕ್ಕೆ ಬೇರೆ ನೋಟ್ಸ್ ಬರೆದ್ರಾಗುತ್ತೆಯೆಂದು ಎಲ್ಲಾ ಫ್ರೆಂಡ್‌ಗೂ ಒಂದೊಂದು ವಾರ ಒಂದೊಂದು ನೋಟ್ಸ್‌ಗೆ ಹೇಳ್ಬಂದೆ ಮಮ್ಮಿ. ನಾನೇನ್ಮಾಡ್ಬೇಕಿತ್ತು ಮಮ್ಮಿ...? " ಎಂದು ಆಶ್ಚರ್ಯವನ್ನುಂಟು ಮಾಡುವಂತೆ ಸಾಕಷ್ಟು ನಾಟಕೀಯದಿಂದ ಹೇಳಿ, ತನ್ನ ಕಷ್ಟ ಪರಿಹಾರಕ್ಕೆ ಅವರನ್ನೆ ಕೇಳಿ ನಿಂತಳು. ತಾಯಿ ಅವಳ ಕಟ್ಟು ಕತೆಯನ್ನು ನಂಬಿದರು.

"ಸರಿ ಬಿಡು ನೀನು ಹೆದರಿಕೊಂಡು ಅಲ್ಲಿ ಇಲ್ಲಿ ಅಲೆದರೆ ನಾವು ಏನೂಂತ ತಿಳ್ಕೋಬೇಕು .ನಿನ್ ಡ್ಯಾಡಿ ಒಂದು ಗಂಟೆಯಿಂದ ಹುಡುಕ್ಲಿಕ್ಕೆ ಹೋದವ್ರು ಇನ್ನೂ ಬಂದಿಲ್ಲ. ಏನಾದ್ರೂ ಆದ್ರೆ ತಕ್ಷಣ ಮನೆಗೆ ಬರ್ಬೇಕೂಂತ ಗೊತ್ತಾಗಲ್ವ? ನಿನ್ ಬ್ಯಾಗ್ ಅಲ್ನೋಡು" ಮೂಲೆಯಲ್ಲಿದ್ದ ಟೀಪಾಯ್ ಕಡೆ ಕೈ ತೋರಿದಳು.

ತನ್ನಕಣ್ಣನ್ನೇ ನಂಬದಾದ ಲಕ್ಷ್ಮಿ "ಅರ್ರೆ! ಇದ್ಹೇಗೆ ಇಲ್ಲಿಗ್ಬಂತು ಮಮ್ಮಿ ನನ ಗಂತೂ ನಂಬ್ಲಿಕ್ಕೆ ಆಗ್ತನೇ ಇಲ್ಲ" ಆಶ್ಚರ್ಯದಿಂದ ನುಡಿಯುತ್ತ ಬಳಿಗೆ ಹೋಗಿ ಕೈಗೆತ್ತಿಕೊಂಡಳು.ಒಳಗೊಳಗೆ ಭಯವೂ ಮೂಡಲಾರಂಭಿಸಿ ಅವನ್ನು ಮರೆಮೊಚಲು

"ಸಧ್ಯ ಹೇಗಾದ್ರೂ ಆಗ್ಲಿ ಒಟ್ನಲ್ಲಿ ಸಿಗ್ತಲ್ಲ ಅಷ್ಟೆಸಾಕು" ಎಂದು ಸಮಾಧಾನ ಮಾಡಿಕೊಂಡು ಒಳಗಿನ ಪುಸ್ತಕಗಳನ್ನೆಲ್ಲ ಒಮ್ಮೆ ಪರಿಶೀಲಿಸಿ ತಾಯಿಯ ಕಡೆ ನೋಡಿದಳು."ಇದು ಬೀಚ್‌ನಲ್ಲಿ ಸಿಕ್ತಂತೆ" ಎಂದರು.

'ಬೀಚ್! ಯಾವ ಬೀಚ್? ಇದು ಅಲ್ಲಿಗೆ ಹೇಗೋಯ್ತು ಮಮ್ಮಿ"? ಏನೊಂದೂ ಅರಿಯದವಳಂತೆ ಕೇಳಿದಳು.

"ಅದೇ ನೋಡು ನಂಗೂ ಗೊತ್ತಾಗ್ತಿಲ್ಲ. ನಮ್ಮ ಮೀನಾಕ್ಷಿ ಇದ್ದಾಳಲ್ಲ...' ಎನ್ನುತ್ತಿದ್ದಂತೆ 'ಹೂ' ಗುಟ್ಟಿದಳು ಲಕ್ಷ್ಮಿ.

ಸಾವಿತ್ರಮ್ಮ ಮುಂದುವರಿಸಿದಳು. "ಅವ್ರು ಗಂಡ ಹೆಂಡ್ತಿ ಇಬ್ರೂ ಇವತ್ತು ಬೀಚ್‌ಗೆ ಹೋಗಿದ್ರಂತೆ. ಅಲ್ಲಿ ಕೂಳಿತಿರ್ಬೇಕಾದ್ರೆ ಇಬ್ರು ಸಣ್ಣ ಹುಡುಗ್ರು ಈ ಬ್ಯಾಗ್ ತಗೊಂಡು, 'ಬ್ಯಾಗ್ ಬೇಕಾ ಸ್ವಾಮೀ ಬ್ಯಾಗ್' ಅಂತ ಮಾರ್ತಿದ್ದನ್ನ ನೋಡಿದ್ರಂತೆ ಅವ್ರಿಗೆ ಸಂಶಯ ಬಂದು ಹ್ದೂ ಅಂತ ಇಸ್ಕೊಂಡು ಒಳಗೆಲ್ಲ ನೋಡಿದಾಗ ನಿನ್ನ ಐಡೆಂಟಿಫಿಕೇಷನ್ ಕಾರ್ಡ್ ಸಿಕ್ತಂತೆ. ಫೋಟೋ ನೋಡಿ ಗುರ್ತಿಸಿದ್ರು. ಅವ್ರಿಗೆ ಬಯ್ದು ಕಳ್ಸಿ ಬ್ಯಾಗನ್ನ ತಂದು ಕೊಟ್ಟೋದ್ರು" ನಡೆದುದೆಲ್ಲ ವಿವರಿಸಿದರು.

"ನೋಡ್ದ್ಯಾ ಮಮ್ಮಿ. ಒಬ್ಬ ಕದಿಯೋದು,ಇಬ್ರು ಮಾರೋದು. ಕಳ್ತನನೇನೊ ಕಲ್ತಿದ್ದಾರೆ ಪಾಪ ಹೇಗೆ ಮಾಡ್ಬೇಕು ಅನ್ನೋದು ಗೊತ್ತಿಲ್ಲ. ಅನುಭವಸ್ಥರಾಗಿದ್ದಿದ್ರೆ ಇದ್ರಲ್ಲಿರೋ ವಸ್ತುಗಳೆಲ್ಲ ತೆಗೆದೆಸೆದು ಬರೀ ಬ್ಯಾಗ್ ಮಾರ್ಬೇಕಿತ್ತು ಅಲ್ವಾ ಮಮ್ಮಿ...?" ಎಂದು ತನ್ನ ಸುಳ್ಳು ಮತ್ತಷ್ಟು ಬಲಿಷ್ಠಗೊಳಿಸಲು ಪ್ರಯತ್ನಿಸಿದಳು. "ಚಾ ಮಮ್ಮಿ ಸುಸ್ತಾಗ್ಬಿಟ್ಟಿದೆ, ಏನಾದ್ರೂ ಹೊಟ್ಟೆಗೆ ಹಾಕ್ಕೋಬೇಕು" ಎಂದು ತನ್ನ ರೂಮಿಗೆ ಬ್ಯಾಗ್‌ನೊಂದಿಗೆ ಹೋಗಿ ಟೇಬಲ್ ಮೇಲೆ ಎಸೆದು "ಆ ಹುಡುಗ್ರಿಗೆನಮ್ಮ ಪ್ಯಾದ್ರೂ ಕಳ್ತನ ಸ್ಕೂಲ್ನೇಲಿ ಅನುಭವ ಬೇಡ್ವಾ?" ಎಂದು ಹಿಗ್ಗಿನಿಂದ ಬಾಯ್ಬಿಟ್ಟು ನುಡಿದು. ತಕ್ಷಣ ಬಾಯಿ ಮುಚ್ಚಿಕೊಂಡು ಬಾಗಿಲ ಕಡೆ ನೋಡಿ ತನ್ನ ಭಯಕ್ಕೆ ತಾನೇ ನಕ್ಕಳು.

೧೦

ಕಾವಿ ಪಂಚೆ ಅದೇ ಬಣ್ಣದ ಟವಲ್ ಹೆಗಲ ಮೇಲೆ ಹೊದ್ದು, ಕೆಳಗಿಳಿದು ತಂದೆತಾಯಿಯ ರೂಮಿಗೆ ಬಂದು ತಾನು ಎದ್ದಿರುವಂತೆ ಸದ್ದು ಮಾಡಿ ಸೂಚನೆ ನೀಡಿದ ರಾಜು. ಮಂಚದ ಮೇಲೆ ಮುಸುಕೆಳೆದು ಮಲಗಿದ್ದರು ತಂದೆ,ತಾಯಿ. ಮಂಜಮ್ಮ ಹೊರಳಾಡಿ ಮಂಪರುಕವಿದ ಕಣ್ಣಿಂದ ನೋಡಿ ಮತ್ತೆ ಕಣ್ಣುಮುಚ್ಚಿದಳು.ನಿಧಾನವಾಗಿ ಮಬ್ಬುಗತ್ತಲು ಮರೆಯುತೊಡಗಿತು.

ಬಚ್ಚಲು ಕೋಣೆಗೆ ಹೋಗಿ ಅಂಡೆಯೊಳಗಿದ್ದ ತಣ್ಣೀರು ಸುರಿದುಕೊಳ್ಳಲಾರಂಬಿಸಿದ. ಒದ್ದೆಯಾದ ಮೈಯನ್ನು ಒರೆಸಿಕೊಳ್ಳದೆ ಹಾಗೆ ಕಾವಿ ಪಂಚೆ ಸುತ್ತಿಕೊಂಡು "ಓಂ" ನಾಮ ಜಪಿಸುತ್ತ ಬಲು ಭಯ,ಭಕ್ತಿಯಿಂದ ದೇವರ ಕೋಣೆಗೆ ಹೋಗಿ,ದೀಪಗಳನ್ನೆಲ್ಲ ಹಚ್ಚಿದ. ತೆರೆದ ಮೈ ಕೈಗೆಲ್ಲ ವಿಭೂತಿ ಪಟ್ಟೆ ಹೊಡೆದುಕೊಂಡು, ವಿಶಾಲ ಹಣೆಗೆ ಕುಂಕುಮ ಹಚ್ಚಿಕೊಂಡು, ಕಡೆಯದಾಗಿ ನಾಲ್ಕಾರು ಊದಿನಕಡ್ಡಿ ಹಚ್ಚಿ ಪೂಜಿಸಿ ದೇವರ ಎದುರಿಗಿದ್ದ ಮಣೆಯ ಮೇಲೆ ಕೈ ಮುಗಿದು ಕಣ್ಮುಚ್ಚಿ ಧ್ಯಾನಸಕ್ತನಾಗಿ ಕುಳಿತು "ಓಂ" ಮಂತ್ರ ಒಂದು ಬಿಟ್ಟು ಬೇರೇನು ಜಪಿಸದೆ ಧೀರ್ಘವಾಗಿ ಉಚ್ಚಾರ ಮಾಡುತ್ತ ನಿಧಾನವಾಗಿ ಉಸಿರೆಳೆಯುತ್ತ ಗಂಭೀರವದನದಿಂದ ಕುಳಿತ.

ಎದ್ದು ಆಕಳಿಸುತ್ತ ಹೊರಟ ಮಂಜಮ್ಮನ ಮೂಗಿಗೆ ಧೂಮದ ಸುವಾಸನೆ ಬಡಿದು ಅರ್ಧ ಆಕಳಿಕೆ ನಿಲ್ಲಿಸಿದರು. ಹಾಗೆ ಎರಡೆಜ್ಜೆ ಮುಂದೆ ನಡೆದು ಬಲಗಡೆಯ ಕೋಣೆಯ ಕಡೆ ತಿರುಗಿದರು. ಆಶ್ಚರ್ಯವಾಯಿತು. 'ನಾಸ್ತಿಕನಾದ ಇವನಿಗೆ ದೇವರ ಮೇಲೆ ಭಕ್ತಿ ಯಾವಾಗ ಹುಟ್ಟಿತೋ, ಸಧ್ಯ! ದೇವ್ರನ್ನ ನಂಬೋಗಾದ್ನಲ್ಲ ಅಷ್ಟೆ ಸಾಕು' ಎಂದು ತಕ್ಷಣ ಬಚ್ಚಲ ಕೋಣೆಗೆ ಹೋಗಿ ಬಾಯಿ, ಮುಖ, ಕೈಕಾಲು ತೊಳೆದುಕೊಂಡು ಸಡಗರದಿಂದ ಸೆರಗಿನಿಂದಲೇ ಮುಖ ಒರೆಸಿಕೊಳ್ಳುತ್ತ ಬಂದಾಗ ರಾಜ ಎದ್ದು ಎದುರಿಗೆಬಂದ. ಅತಿ ಹೆಚ್ಚು ಗಂಭೀರ ಮುಖಕ್ಕೆ ತಿಲಕದ ಶೋಭೆಯಿಂದಲೂ ಮಹಾ ಮೇಧಾವಿ ಭಕ್ತನ ಸಾಲಿಗೆ ಸೇರಿದ.

ತುಂಬಿದ ಹರ್ಷದಿಂದಲೆ ಮಂಜಮ್ಮ "ಪಾಪು ಈಗಾದ್ರೂ ನಿನಗೆ ದೇವ್ರು ಮೇಲೆ

ಭಕ್ತಿ ಹುಟ್ಟಿಲ್ಲ! ಅದೇನೊ ಪಾಪು ಇವತ್ತು ಇಷ್ಟು ಬೇಗನೆ ಎದ್ದು ಪೂಜೆ ಪುನಸ್ಕಾರ ಮಾಡ್ತಿದ್ದೀಯಲ್ಲ. ಓ...ಸ್ನಾನನೂ ಮಾಡ್ಬಿಟ್ಟಿದ್ದೀಯಾ... ತಣ್ಣೀರಿಂದ ಮಾಡ್ದೇನೋ?" ಸಂತೋಷವೆಲ್ಲ ಒಮ್ಮೆಗೆ ಮಾಯವಾಗಿ ಭಯ, ಆತಂಕದಿಂದ ಕೇಳಿದಳು.

ದಿವ್ಯ ಜ್ಞಾನಿಗಳಂತೆ ಮುಗುಳ್ನಗೆಯಿಂದ"ಹೌದಮ್ಮ ತಣ್ಣೀರಿಂದಲೇ ಮಾಡಿದ್ದು. ಇನ್ಮೇಲಿಂದ ತಣ್ಣೀರ್ನಲ್ಲೇ ಸ್ನಾನ ಮಾಡ್ತೀನಿ. ಈ ಕಾರ್ಯಕ್ಕೆ ಕೈ ಹಾಕಿದ ಮೇಲೆ ಬಿಸಿ ನೀರಿನ ಸ್ನಾನ ಸರಿಯಲ್ಲಮ್ಮ" ತಾಳ್ಮೆಯಿಂದ ನುಡಿದ,

"ಅಯ್ಯೋ ಪಾಪು ನಿನಗೆ ತಣ್ಣೀರು ಒಗ್ಗಲ್ಲ ಕಣೋ,ಎಲ್ಲಾದ್ರು ಹೆಚ್ಚು ಕಡಿಮೆ ಆದ್ರೆ.ಮೊದ್ಲು ತಲೆ ಒರೆಸಿಕೊಳ್ಳೋ..."

"ಯಾಕಮ್ಮ ಸುಮ್ನೆ ಕೂಗಾಡ್ತೀಯ. ಈ ಜೀವನವೇ ನಶ್ವರ. ಇವತ್ತು ಹುಟ್ಟಿದೋರು ನಾಳೆಇಲ್ಲ. ಸಂಸಾರಿಯಾಗಿ ಸಾಧಿಸಲಿಕ್ಕಾಗದನ್ನ ಸನ್ಯಾಸಿಯಾಗಿ ಸಾಧಿಸ್ತೀನಮ್ಮ.ಆಶೀರ್ವಾದ ಮಾಡುತಾಯಿ" ಕಾಲಿಗೆರಗಿ ನಮಸ್ಕರಿಸಿದ.

ಸತ್ಯವೇನೆಂದು ಈಗ ಅರಿತು ಮತ್ತಷ್ಟು ಸಂಕಟಕ್ಕೊಳಗಾದ ಮಂಜಮ್ಮ ಭುಜ ಹಿಡಿದು ಎತ್ತುತ್ತ "ಪಾಪೂ ..ನನ್‌ಕಂದಾ... ಯಾವ ಮಂತ್ರವಾದಿ ನಿನಗೆ ಮಂಕು ಬೂದಿ ಹಚ್ಚಿದ ಹೇಳೋ...? ಒಬ್ನೆ ಮಗ ಒಳ್ಳೇ ಕಡೆ ಹೆಣ್ಣು ತಂದು ಮದ್ವೆ ಮಾಡಿ ಮುತ್ತಿನಂತ ಮೊಮ್ಮಕ್ಳನ್ನ ಆಡಿಸಿಕೊಂಡಿರೋಣ ಅಂದ್ರೆ.ಏನೋ ಇದು?" ಕಣ್ತುಂಬಿ ನುಡಿದಳು.

"ಅಮ್ಮ ದಯವಿಟ್ಟು ಇನ್ಮೇಲಿಂದ ಈ ತರದ್ದು ಮಾತ್ನಾಡಬೇಡ. ನನಗೀಗ ಹೆಣ್ಣು ಅಂದ್ರೆ ಎಲ್ಲಾ ತಾಯಿ ಸಮಾನ. ನಾನು ಸನ್ಯಾಸಿ ಆಗ್ತೀನಮ್ಮಾ. ಪದೇಪದೇ ನನಗೆ ಒತ್ತಾಯ ಮಾಡಿ ನನ್ ಮನ್ಸನ್ನ ಹಾಳ್ ಮಾಡ್ಬೇಡಿ" ಧೃಡ ನಿರ್ಧಾರದಿಂದ ಹೇಳಿದ.

"ಅಯ್ಯೋ... ಅಯ್ಯಯ್ಯೋ ಕೇಳಿದ್ರೇನ್ರಿ ನಿಮ್ಮಗನ ಮಾತ್ನಾ..." ಅಬ್ಬರಿ

ಸುತ್ತಲೇ ಓಡಿಹೋಗಿ ಗಂಡನು ಹೊದ್ದಿದ್ದ ಬೆಡ್‌ಷೀಟ್ ಎಳೆದು "ನೋಡ್ರೀ ಪಾಪೂ ಆಡ ಆಟನ?"– ಕಂಬನಿ ತುಳುಕಿತು.

"ಏನು? ಏನಾಯ್ತು ಮಂಜಿ? ಏನ್ಮಾಡ್ತಾನೆ? ಯಾಕಂತೆ? ಚನ್ನಾಗೆ ಇದ್ನಲ್ಲೆ..." ತಟ್ಟನೆ ಎದ್ದು. ಮಂಚದಿಂದ ಕಾಲು ಇಳಿ ಬಿಟ್ಟು ಕುಳಿತು ಕೇಳಿದರು.

"ಅವ್ನು ಸನ್ಯಾಸಿ ಆಗ್ತಾನಂತ್ರಿ, ತಣ್ಣೀರು ಸ್ನಾನ, ಪೂಜೆ ಮಾಡಿ ಕುಂತಿದ್ದಾನೆ" ಕೈ ಚಾಚಿ ಅರ್ಧ ಮಾತು ಹೇಳಿ ಗೋಳೋ ಎಂದು ರೋಧಿಸ ತೊಡಗಿದಳು.

"ನನಗೇನು ಅರ್ಥ ಆಗಿಲ್ವೇ, ಸುಮ್ನಿರು ಅಳ್ಬೇಡ ಅದೇನು ನೋಡೋಣ ಬಾ" ಎನ್ನುತ್ತ ಕಣ್ಣು ಹೊಸಕಿಕೊಳ್ಳುತ್ತ ಟೀಪಾಯಿ ಮೇಲಿದ್ದ ಕನ್ನಡಕ ಹಾಕಿಕೊಂಡು ಹೊರಟರು.

ಹೊರಗೆ ಬಂದು,ಮಹಡಿಯಲ್ಲಿದ್ದ ಮಗನನ್ನು "ಪಾಪೂ ಪಾಪೂ .." ಕೂಗಿ ಕರೆದರು.ಮಹಡಿಯಲ್ಲಿಂದಲೆ ಮುಖ ತೋರಿಸಿ ಪ್ರಶ್ನಾರ್ಥಕ ನೋಟದಿಂದ ನೋಡಿದ.

"ಬಾ ಇಲ್ಲಿ. ಕೆಳಗೆ" ಆಜ್ಞೆ ಮಾಡಿದರು. ಕೆಳಗಿಳಿದು ಬಂದ ಮೇಲೆ "ಏನೋ ಇದು ನಿನ್ನ ಅವತಾರ?" ಕೇಳಿದರು.

"ನೋಡಿದ್ರೆ ನಿನಗೆ ಗೊತ್ತಾಗಲ್ವೇನಪ್ಪ. ಅಮ್ಮ ಅದೆಲ್ಲ ಹೇಳಿರ್ಬೇಕು" ಎಂದು ಗಂಭೀರದಿಂದ ನುಡಿದು ತಲೆ ತಗ್ಗಿಸಿದ.

"ಏನು ಸನ್ಯಾಸಿ ಆಗ್ತೀಯಾ! ? ಸನ್ಯಾಸಿಯಾಗೋದು ಅಷ್ಟು ಸುಲಭ ಅಂತ ತಿಳ್ಕೊಂಡ್ಯಾ? ನಿಜವಾದ ಸನ್ಯಾಸಿ ಆಗುವವನು ಸಂಸಾರದಲ್ಲಿ ಬಹಳಷ್ಟು ಪಳಗಿರ್ಬೇಕು. ನಿನ್ ಕೈಯಿಂದ ಮಾತ್ರ ಸಾಧ್ಯವಿಲ್ಲ. ಸಂಸಾರಿಯಾಗಿ ಗೆದ್ದಿದ್ದನ್ನ ಸನ್ಯಾಸಿಯಾಗಿ ಎರಡು ಜನ್ಮದಲ್ಲಿ ಗೆಲ್ಲಿಕ್ಕೆ ಸಾಧ್ಯ ಇಲ್ಲಾ ಅನ್ನೋದನ್ನ ನೆನಪಿನಲ್ಲಿಟ್ಕೋ" ಅವರಿಗೂ ಇಚ್ಛೆ ಇಲ್ಲದೆ ನುಡಿದರು.

"ನಾನು ಅಲ್ಲಿ ಸುಖ,ಸಂತೋಷವನ್ನು ಬಯಸಿ ಹೋಗ್ತಿಲ್ಲಪ್ಪ.ಜ್ಞಾನಭಿವೃದ್ಧಿಗೆ ಸಮಾಜ ಸುಧಾರಣೆಗೆ ಅಲ್ಲದೆ ಸಂಸಾರದಲ್ಲಿರುವಂತ ತೊಡಕುಗಳು ಅಲ್ಲಿಲ್ಲ"– ಗಂಭೀರ ನುಡಿ ತಂದೆ ತಾಯಿಯರ ಬಾಯಿಯನ್ನು ಮುಚ್ಚಿಸಿತು. ತಮ್ಮೊಡಲ ಕುಡಿ ತಮ್ಮಿಂದ ದೂರ ದೂರಕ್ಕೆ ಸರಿದಂತಾಗುತಿತ್ತು. ಮೆಟ್ಟಿಲೇರುತಿದ್ದ ಮಗನನ್ನು ಅದೋವದನ ದಿಂದ ನೋಡುತ್ತ ನಿಂತರು.' ಇದ್ದಕ್ಕಿದಂತೆ ಯಾಕೆ ಹೀಗೆ ಮಾಡ್ತಿದ್ದಾನೆ?' ಎಂಬ ಪ್ರಶ್ನೆ ಭೂತಾಕಾರವಾಗಿ ಇಬ್ಬರ ಮುಂದೆ ಬೆಳೆದು ನಿಂತಿತು.

ನಿತ್ಯದಂತೆ ಕ್ರಾಪ್, ಇನ್‌ಷರ್ಟ್, ಬೂಟ್ಸ್ ಹಾಕಿದರೂ ಮುಖಕ್ಕೆ ಹೊಸದಾಗಿ ತಿಲಕ ಮಾತ್ರ ಹಣೆಯಲ್ಲಿ ರಾರಾಜಿಸುತ್ತಿತ್ತು.ಅದು ಬಲು ಚನ್ನಾಗಿ ಮುಖಕ್ಕೆ ಹೊಂದಿ ಆಕರ್ಷಕನಾಗಿದ್ದ ಅವನಿಗೆ ಮೋಹಕಾತಿಲಕದಾತಿತ್ತು. ಕೈಯಲ್ಲಿ ನೋಟ್ ಬುಕ್ಕಿಡಿದು "ಅಮ್ಮಾ ಕಾಲೇಜಿಗೆ ಹೋಗ್ಬರ್ತೀನಿ" ಎಂದು ಕೂಗಿ ಬಾಗಿಲ ಬಳಿ ಬಂದಾಗ,ಒಡೋಡಿ ಬಂದ ತಾಯಿ "ಪಾಪೂ ತಿಂಡಿ ಆಯ್ತು ಕಣೋ,ತಿಂದ್ಬಿಟ್ಟು ಹೋಗು" ಎಂದಳು.

"ಇನ್ಮೇಲೆಂದ ತಿಂಡಿನೂ ಬೇಡಮ್ಮ ಬಿಟ್ಬಿಡ್ತೀನಿ. ನಿಮ್ಮಿಬ್ರಿಗೆ ಮಾಡ್ಕೊಳ್ಳಿ. ಸಧ್ಯಕ್ಕೆ ಎರಡು ಊಟ ಮಾಡ್ತೀನಿ ಸಾಕು. ಮಧ್ಯಾಹ್ನ ಒಂದು ರಾತ್ರಿಗೊಂದು ಬರ್ತೀನಮ್ಮ" ಎಂದು ಹೊರಟು ಹೋದ.

ಮಂಜಮ್ಮ ಕಣ್ತುಂಬಿ ಬಾಗಿಲ ಮರೆಯಲ್ಲಿ ನಿಂತ ಗಂಡನ ಕಡೆ ನೋಡಿದಳು. ಬಳಿ ಬಂದ ವೆಂಕಟಯ್ಯ "ಸಮಾಧಾನ ಮಾಡ್ಕೋ ಮಂಜೀ"– ತಲೆ ನೇವರಿಸಿ ಸಂತೈಸ ತೊಡಗಿದ ವೆಂಕಟಯ್ಯ.



ಜೊತೆಗೂಡಿ ಹೆಜ್ಜೆಯಾಕುತಿದ್ದ ರಾಜನ ಮುಖದಲ್ಲಿ ವಿಶೇಷ ಕಳೆಯನ್ನುಗುರ್ತಿಸಿದ ಲಕ್ಷ್ಮಿ "ಇದೇನ್ ರಾಜು ಹಣೆಯ ಮೇಲೆ ಮೋಹಕ ತಿಲಕ? ಯಾರಿಗೆ ಮೋಡಿ ಮಾಡ್ಬೇಕೂಂತ?" ಕೇಳಿದಳು ಲಕ್ಷ್ಮಿ.

"ಇನ್ಯಾರಿಗೆ? ನಿನಗೆ"– ಎಂದ ತುಂಟತನದಿಂದ,

"ನನಗೆ ಯಾವತ್ತೋ ಮೋಡಿಮಾಡಿ ಆಗಿದೆ. ಮತ್ತೆ ಯಾರಿಗಾದ್ರೂ ಮೋಡಿ ಮಾಡ್ತಿಯೇನೊ ಅಂತ" ಎದ್ದು ಮೆಲ್ಲಗೆ ನಕ್ಕಳು.

"ಇವತ್ತು ಮನೆಯಲ್ಲಿ ಏನ್ಮಾಡ್ದೆ ಗೊತ್ತಾ ಲಕ್ಷ್ಮಿ?" ಅವಳಲ್ಲಿ ಆಸಕ್ತಿ ಮೂಡಿಸುತ್ತ ಕೇಳಿದ.

"ಏನ್ಮಾಡ್ದೆ?"– ತವಕದಿಂದಲೆ ಕೇಳಿದಳು ಮುಖ ನೋಡುತ್ತ.

ಬೆಳಿಗ್ಗೆ ಮಾಡಿದ್ದೆಲ್ಲವನ್ನು ಕಣ್ಣಿಗೆ ಕಟ್ಟುವಂತೆ ಹೇಳಿ ಮುಗಿಸಿದ ಮೇಲೆ ಹೊಟ್ಟೆ ಹಿಡಿದು ನಗುತ್ತಿದ್ದ ಲಕ್ಷ್ಮಿ ನಗುವಿನಲ್ಲಿಯೇ "ಹುಂ ಆಮೇಲೆ?" ಪ್ರಶ್ನಿಸಿದಳು.

"ಆಮೇಲೆ ಇನ್ನೇನು? ತಿಂಡಿ ಬೇಡಾಂತಲೇನೋ ಅಂದ್ಬಿಟ್ಟೆ. ಆದ್ರೆ ಈಹೊಟ್ಟೆ ಕೇಳ್ಬೇಕಲ್ಲ? ನೋಡು ಲಕ್ಷ್ಮಿ ನಮ್ಮಿಬ್ರ ಮದ್ವೆ ಸುಲಭವಾಗಿ ಆಗ್ಬೇಕಾದ್ರೆ ಇದೆಲ್ಲಾ ಮಾಡ್ಬೇಕಾಗುತ್ತೆ. ಅದಕ್ಕೆ ನನ್ನದಲ್ಲಿದ್ದೂ ನಮ್ಮಪ್ಪನ ದುಡ್ಡನ್ನಾ ಖರ್ಚು ಮಾಡ್ಬೇಕಾಗುತ್ತೆ. ಬಾ ಹೋಟ್ಲಿಗೆ ಹೋಗಿ ತಿಂಡಿ ತಿಂದ್ಕೊಂಡು ಕಾಲೇಜಿಗೆ ಹೋಗೋಣ" ಎಂದ.

"ನನಗೆ ತಿಂಡಿ ಬೇಡಾ ನೀನು ತಗೋ, ಸಂದರ್ಭ ಬಂದ್ರೆ ನಾನು ಹೀಗೆ ಮನೆಯಲ್ಲಿ ಒಮ್ಮೆ ನಾಟ್ಕ ಆಡ್ಬಿಡ್ತೀನಿ" ನಗು ಸೇರಿಸಿ ನುಡಿದಳು.

"ನಾಟಕ ನೋಡುವವರಿದ್ರೆ ಮಾಡು. ಆದ್ರೆ ಮಾಡ್ತಿರೋದು ನಾಟ್ಕ ಅಂತ ನೆನಪಿಟ್ಕೊ, ಮತ್ತೆ ನನ್ನನ್ನು ಮರೆತ್ಬಿಟ್ಟೀಯಾ .." ಎಂದು ನಗೆಯುಬ್ಬುಗ್ಗ ಚಿಮ್ಮಿಸಿ ಕ್ಯಾಂಟಿನ್‌ಗೆ ಕರೆದೊಯ್ದ.

ಸಾಕಷ್ಟು ಜನರ ಮುಂದೆ ಮುಜುಗರದಿಂದ ಕುಳಿತಿದ್ದ ಲಕ್ಷ್ಮಿ ನಿಧಾನವಾಗಿ ತಲೆ ಎತ್ತಿ ದೋಸೆ ತಿನ್ನುತಿದ್ದ ರಾಜುಗೆ ಮೆಲು ದನಿಯಲ್ಲಿ "ನೋಡು ರಾಜೂ ಎಲ್ರೂ ನಮ್ಮನ್ನೆ ಹೇಗೆ ನೋಡ್ತಾರೆ. ಅದಕ್ಕೆ ನಾನು ಸೀರೆ ಉಟ್ಕೊಳ್ಳೋದು ಕಲಿತೀನಿ, ಆಗ ಯಾರಿಗೂ ಅಷ್ಟು ಅನುಮಾನ ಬರೋದಿಲ್ಲ.ಬಂದ್ರೂ ನೋಡ್ಕೊಳ್ಳಿ ಸೆರಗು ಮೈತುಂಬ ಹೊದ್ಕೊಂಡ್ಬಿಡ್ತೀನಿ"

ಎಲ್ಲವನ್ನು ಕಿವಿ ಗೊಟ್ಟು ಕೇಳಿ, ಏನೋ ಯೋಚಿಸಿ "ಹ್ಞಾ...ಹ್ಞಾ .. ನೀನು ಸೀರೆ ತೊಟ್ಕೊಂಡು ಬಾ ಕೈ ಹಿಡ್ಕೊಂಡು ಓಡಾಡಿದ್ರೂ ಯಾರೂ ಕೇಳ್ಬಾರ್ದು ಹಾಗೆ ನಾನು ಮಾಡ್ತೀನಿ" ಎಂದು ಕೈ ತೊಳೆದುಕೊಂಡ. ಮಾಣಿ ಬಿಲ್ಲು, ಬೈಟೂ ಕಾಫಿ ಯನ್ನು ತಂದಿಟ್ಟು ಹೋದ ನಂತರ ಇಬ್ಬರೂ ಕೈಗೆ ಕಾಫಿ ತೆಗೆದುಕೊಂಡು ಹೀರ ತೊಡಗಿದರು.



ಮರೆಯಲ್ಲಿದ್ದ ಸೌಂದರ್ಯ ಬೆಳಕಿಗೆ ಬಂದಂತೆ ಆತ ಇಂತ ಉಡುಪಿನಲ್ಲಿ ದೇಪದ ಸೌಂದರ್ಯ ಅಡಗಿದ್ದ ಲಕ್ಷ್ಮಿಯ ರೂಪ ಬಿಳಿ ಸೀರೆಯ ಸೊಬಗಿನಿಂದ ನಾಲ್ಕು ಪಟ್ಟು ಹೆಚ್ಚಿತ್ತು. ಹೂವನ್ನೇ ಮುಡಿಯದವಳು ತಲೆ ತುಂಬ ಮಲ್ಲಿಗೆ ಮುಡಿದದ್ದು ಹೆಚ್ಚಿನ ಕಳೆ ತಂದಿತು. ಕಡಲ ತೀರದ ಗಾಳಿಗೆ ಸೆರಗು ಧ್ವಜದಂತೆ ಬಡಿವರೆ ಮುಂಗು ರುಳು ನರ್ತಿಸುತ್ತಿತ್ತು. ಸ್ವಲ್ಪ ದೂರ ಸಾಗಿದ ನಂತರ "ರಾಜು ನಾನು ಸೀರೆ ತೊಟ್ಕೊಂಡು ಬದಲಾಗಿದ್ದೀನಿ. ಅದರ ಬಗ್ಗೆ ಏನೂ ಹೇಳ್ಲಿಲ್ಲವಲ್ಲ? ಚನ್ನಾಗಿ ಕಾಣ್ಸುತ್ತ?" ಸಂಕೋಚದಿಂದಲೇ ಮಾತು ಆರಂಭಿಸಿದಳು.

ಮುಖ ನೋಡುತ್ತ "ಅದೇಲಕ್ಷ್ಮಿ ಯಾವ ಮಾತಿನಲ್ಲಿ ಹೊಗಳ್ಬೇಕೊ ಗೊತ್ತಾ ಗ್ತಿಲ್ಲ. ನೋಡ್ದ ನೋಡ್ದಾ ಗಾಳಿ ನಿನ್ನ ಸೆರಗನ್ನು ಹೇಗೆ ಜಗ್ತಾ ಇದೆ. ಅದಕ್ಕೂ ಕೂಡ ನಿನ್ ಮೇಲೆ ಪ್ರೀತಿ, ಎಷ್ಟೊಂದು ಮೋಹ. ಹುಷಾರ್ ಲಕ್ಷ್ಮಿ" ಹುಬ್ಬಾರಿಸಿ ಕೆಣಕು ವಂತೆ ನುಡಿದ.

"ಥೂ... ಏನೇನೋ ಅಂದು ನನಗೆ ನಾಚ್ಕೆ ಬರೋಗೆ ಮಾಡ್ತೀಯಾ..."ಎಂದ ವಳೇತನ್ನ ವದನಾರವಿಂದವನ್ನು ಕೋಮಲ ಕೈ ಗಳಿಂದ ಮುಚ್ಚಿಕೊಂಡು ಬೆನ್ನು ತಿರು ಗಿಸಿ ನಿಂತಳು.

ಮತ್ತಷ್ಟು ಹತ್ತಿರ ಬಂದ ರಾಜು ಮೆಲು ದನಿಯಿಂದ "ಹಾಗೇ ನಿಂತಿರು ಲಕ್ಷ್ಮಿ ಕಣ್ಬಿಡಬೇಡ ನಾನೇಳುವವರೆಗೂ" ಎಂದ. "ಏಕೆ?" ಕೈ ತೆಗೆಯದೆ ಕೇಳಿದಳು.

"ಈಗ ಗೊತ್ತಾಗುತ್ತೆ ಇರು" ಎನ್ನುತ್ತ ಜೇಬಿನಿಂದ ಕರಿಮಣಿ ಸರ ತೆಗೆದು ಅವಳ ಮುಖದತ್ತ ಹಿಡಿದು "ಹೂ...ಈಗ ಕೈತೆಗೆದು ನೋಡು"

ಕೈಯನ್ನು ನಿಧಾನವಾಗಿ ಪಕ್ಕಕ್ಕೆ ಸರಿಸಿ ಹೂವಿನಂತೆ ಅರಳಿದ ಮುಖದಲ್ಲಿ ಆಶ್ಚರ್ಯದ ಗೆರೆ ಮೂಡಿಸಿ"ಅರೆ, ಏನಿದು? ಮಾಂಗಲ್ಯ ಸರ ಇದ್ದಾಗೆ ಇದೆ! ಆಶ್ಚರ್ಯ ವ್ಯಕ್ತ ಪಡಿಸಿದಳು.

"ಹೌದು ನಿನ್ನೆ ಪೇಟೆಯಲ್ಲಿ ಫುಟ್ ಪಾತ್‌ನಲ್ಲಿ ಹೋಗ್ಬೇಕಾದ್ರೆ ಮಾರ್‍ತಿದ್ರು.ಏಳು ರೂಪಾಯಿ ಅಂದ ಚೌಕಾಸಿ ಮಾಡದೆ ತಂದೆ.ಇದನ್ನು ಕಟ್ಕೊಂಡು, ಇನ್ನೂ ಧೈರ್ಯದಿಂದ ಕೈ ಹಿಡ್ಕೊಂಡು ತಿರುಗಾಡ್ಬಹುದು. ನನ್ನ ಅಪ್ಪ ಅಮ್ಮ ನಿನ್ನ ಮಮ್ಮಿ,ಡ್ಯಾಡಿ ನೋಡಿದ್ರೂ ಚಿಂತೆ ಇಲ್ಲ. ನಮಗೆ ಬಾಯ್ಬಿಟ್ಟು ಹೇಳೋದು ತಪ್ಪುತ್ತೆ, ಬಾ ಲಕ್ಷ್ಮಿ ಇವನ್ನ ಕಟ್ಬಿಡ್ತೀನಿ ಒಟ್ಟಿಗೆ ಓಡಾಡ್ಬೇಕಾದ್ರೆ ಕಟ್ಕೊಳ್ಳೋದು ಮನೆಗೆ ಹೋಗ್ಬೇಕಾದ್ರೆ ಬಿಚ್ಚಿ ಬ್ಯಾಗಳೊಗೆ ಇಟ್ಕೊ" ಎನ್ನುತ್ತಲೇ ಸಮುದ್ರಕ್ಕೆ ಅಭಿಮುಖವಾಗಿ ಮದುವೆ ಮಂಟಪದಲ್ಲಿ ಕೂರುವ ವರನಂತೆ ಕುಳಿತು"ಕುತ್ಕೊ ಲಕ್ಷ್ಮಿ ತಾಳಿ ಕಟ್ಬಿಸ್ತೀನಿ.ಸಮುದ್ರ ಮಂಗಳ ವಾದ್ಯ ನುಡಿಸ್ತಿದೆ"

"ಕೂರ್‍ತೀನಿ ಸ್ವಲ್ಪ ತಾಳು ಯಾವ ಕಡೆ ಹೆಣ್ಣು ಕೂರೋದು?" ನಾಚುತ್ತಲೇ ಸಂಶಯ ಮುಂದಿಟ್ಟಳು.

"ಹೌದಲ್ಲಾ...ಯಾವ ಕಡೆ? ಎಡಕ್ಕಿರ್ಬೇಕು" ಅನುಮಾನದಿಂದಲೇ ಎಡಕ್ಕಿರಬೇಕೆಂದು ಸೂಚಿಸಿದ,

"ಅಲ್ಲ ಬಲಕ್ಕಿರ್ಬೇಕು" ತಾನು ಕಂಡಂತೆ ನುಡಿದಳು.

"ಲಕ್ಷ್ಮಿ ಹೀಗೆ ಮಾಡೋಣ. ನೀನು ಯಾವ್ದಾದ್ರೂ ಮದುವೆಗೆ ಹೋಗಿದ್ದಾ? ಹೋಗಿದ್ರೆ ಯಾವ ಕಡೆ ಕೂರೋದು ಬೇಗ ಜ್ಞಾಪಿಸ್ಕೊ" ಅವಸರ ಪಡಿಸಿದ.

"ನಾನು ಯಾವ ಮದ್ವೆಗೂ ಹೋಗಿಲ್ಲ. ಏನ್ಮಾಡೋದು?"ಕೇಳಿದಳು.

"ಸಿನಿಮಾದಲ್ಲಿ ನೋಡಿದ್ದೀಯಲ್ಲ .ಜ್ಞಾಪಿಸ್ಕೊ"ಎಂದ."ಜ್ಞಾಪಿಸ್ಕೋ ಬಹುದು ರಾಜು ಕನ್‌ಫ್ಯೂಸ್ ಆಗುತ್ತೆ. ಎಡಕ್ಕೆ ಎಂದಾಗ ಬಲಕ್ಕೆ ಅನ್ಸುತ್ತೆ, ಬಲಕ್ಕೆ ಎಂದಾಗ ಎಡಕ್ಕೆ ಅನ್ಸುತ್ತೆ" ಎಂದಳು.

"ಹೌದು ನನಗೂ ಹಾಗೇ ಅನ್ಸುತ್ತೆ. ಯಾಕೋ ಮುಹೂರ್ತ ಸರಿಯಾಗಿಲ್ಲ. ಹೋಗ್ಲಿ ಎದುರಿಗೆ ಕೂತ್ಬಿಡು ಮುಹೂರ್ತ ಸರಿಯಾಗುತ್ತೆ"ಕೈ ಹಿಡಿದು ಕೂರಿಸಿಕೊಂಡ. ಮುಗುಳ್ನಗುತ್ತ ಕುಳಿತ ಲಕ್ಷ್ಮಿಯನ್ನೊಮ್ಮೆ ನೋಡಿ"ಇದೇನ್ ಲಕ್ಷ್ಮಿ ನೀನು ಗಂಡಸಿನ ತರಹ ಕುತಿದ್ದೀಯಿಲ್ಲ.ಒಂದು ಕಾಲು ಹೀಗೆ ಮಡಚಿ ಕೂರ್ಬೇಕು"ಎಂದು ತೋರಿಸಿದ.

ಬಾಯಿ ಬಿಟ್ಟು ಲಘುವಾಗಿ ನಗುತ್ತ ಎಡಕಾಲನ್ನು ಒಂಟಿಯ ಡುಬ್ಬದಂತೆ ಮಾಡಿ ಕುಳಿತು ತಲೆ ತಗ್ಗಿಸಿ ಮಿನುಗುವ ಕಂಗಳಿಂದ ದಿಟ್ಟಿಸುತ್ತದ್ದಳು.ಇಬ್ಬರ ನಡುವೆ ಇದ್ದ ಸರವನ್ನು ಕೈಗೆತ್ತಿಕೊಂಡ.ರಾಜು ತಾನೇಯೆ "ಹಾಂ...ಹೂ .. ಮಾಂಗಲ್ಯಂ .. ಕಲ್ಯಾಣಂ...ಜೀವನಂ" ಎಂದು ಏನೇನೊ ಹೇಳಿ ಲಕ್ಷ್ಮಿ ಒಡ್ಡಿದ ಕೊರಳಿಗೆ ತಾಳಿ ಬಿಗಿಯುತಿದ್ದಂತೆ, ಪ್ರೋತ್ಸಾಹದಾಯಕವಾಗಿ ಓಡೋಡಿ ಬಂದ ದೊಡ್ಡ ಅಲೆಯೊಂದು ದಡಕ್ಕೆ 'ಪಟಾರ್' ಎಂದು ಹೊಡೆಯಿತು . ಮೇಲಕ್ಕೆ ಎಗರಿ ಚಿಮ್ಮಿದ ನೀರಿನ ಹನಿಗಳು ಇಬ್ಬರ ಮೇಲೂ ಒಂದು ಬಿದ್ದವು. ಬೆಚ್ಚಿ ಮೈ ನಡುಗಿಸಿದ ಲಕ್ಷ್ಮಿಗೆ "ಹೆದರ್ಬೇಡ ಲಕ್ಷ್ಮಿ,ಸಮುದ್ರ ಅಕ್ಷತೆ ಹಾಕಿತು" ಎಂದು ನಗೆ ತರಿಸಿ ಪರಿಸರದ ಮುಂದೆ ನಕಲು ದಂಪತಿಗಳಾಗಿ ಮೆರೆದರು.

೧೧

ತಮ್ಮ ರಘು ಬಂದಿದ್ದು ಸಾವಿತ್ರಿಗೆ ಹಿಡಿಸಲಾರದ ಸಂತೋಷ ತಂದಿತು. ಸಾಧಾರಣ ಸ್ಫುರದ್ರೂಪಿ, ಎತ್ತರಕ್ಕೆ ಸ್ವಲ್ಪ ತೆಳು ಎನ್ನುವ ಮೈಕಟ್ಟು.ಬಿಳಿ ವರ್ಣದ ಮುಖಕ್ಕೆ ಪೊದೆಯಂತ ಕೂದಲಿನ ಕ್ರಾಪು, ಕಣ್ಣಿಗೊಂದು ಹೈ ಪವರ್‌ನ ಕನ್ನಡಕ.ಸಾವಿತ್ರಿಗೆ ಬೇಸರ ತಂದಿದ್ದು ಆ ಸಮಯದಲ್ಲಿ ಲಕ್ಷ್ಮಿ ಮನೆಗಿನ್ನೂ ಬಾರದಿರುವುದು. ಸಡಗರದಿಂದಲೇ ಕಾಫಿ ಮಾಡಲಾರಂಭಿದಳು. ಹಾಲ್‌ನಲ್ಲಿ ಸೋಫಾಕ್ಕೊರಗಿ ಕುಳಿತ ರಘು 'ಲಕ್ಷ್ಮಿ ಈಗ ಹೇಗೆ ಬೆಳೆದಿರ್ಬಹುದು? ನಾನಂತೂ ತುಂಬಾ ದಿನಗಳೇ ಆಯ್ತು, ಇಲ್ಲಿಗೆ

ಬಂದು ಹೋಗಿ'ಎಂದುಕೊಳ್ಳುತ್ತ ಎದುರಿಗಿದ್ದ ಫೋಟೊ ನೋಡತೊಡಗಿದ. ತಂದೆ ತಾಯಿಯರ ಹಿಂಭಾಗದ ಮಧ್ಯದಲ್ಲಿ ನಿಂತು ತೆಗೆಸಿದ ಫೋಟೊ ಸುಮಾರು ನಾಲ್ಕು ವರ್ಷದಷ್ಟು ಹಳೆಯದಾದ ಭಾವ ಚಿತ್ರ.ಕಡೆಯ ಬಾರಿ ನೋಡಿದ್ದಕ್ಕೂ,ಭಾವ ಚಿತ್ರದಲ್ಲಿದ್ದದ್ದಕ್ಕೂ ಹೋಲಿಸಿ ನೋಡಿದ.ಅಷ್ಟೇನು ವ್ಯತ್ಯಾಸವಿದ್ದಿರಲಿಲ್ಲ. ಮ್ಯಾಕ್ಸಿ ತೊಟ್ಟಿದ್ದಳು. ಅದರಲ್ಲಿನ ಅವಳ ಮುಖ ಭಾವದಿಂದಲೇ ಈಗಿನ ಚಿತ್ರ ರೂಪವನ್ನು ಕಲ್ಪಿಸಿಕೊಳ್ಳಲು ಪ್ರಯತ್ನಿಸಿದ.ಅವಳಿಗಾಗಿ ಕಾಯ್ದು ಬೇಸರದಿಂದ ಎದ್ದು ಅವಳ ಕೊರಡಿಗೆ ಹೋಗಿ ಸೂಕ್ಷ್ಮವಾಗಿ ಗಮನಿಸಿದ. ಕಿಟಕಿ ಬದಿಯ ಟೇಬಲ್ ಮೇಲೆ ಜೋಡಿಸಿದ ಪುಸ್ತಕಗಳು.ಪಕ್ಕದಲ್ಲಿ ಗಾಡ್ರೇಜ್ ಛೇರ್, ಮೆತ್ತನೆ ದಿಂಬಿನ ಆಸನ. ಇನ್ನೊಂದು ಬದಿಗೆ ಮಂಚ. ಬಾಗಿಲ ಹಿಂಭಾಗದಲ್ಲಿ ಹ್ಯಾಂಗರ್‌ಗೆ ನೇತು ಬಿದ್ದ ಮ್ಯಾಕ್ಸಿ, ಪಂಜಾಬಿ ಡ್ರೆಸ್‌ಗಳ ಸಾಲು ಬಟ್ಟೆ.ನೋಡಿ ಮುಗಳ್ನಕ್ಕು'ಇವ್ಳು ಒಳ್ಳೆ ಸೊಗಸುಗಾತಿಯಾಗಿದ್ದಾಳೆ' ಎಂದು ಕೊಂಡ.

ಅಷ್ಟರಲ್ಲಿ ಹಾಲ್‌ನಿಂದ "ರಘೂ..." ಕರೆದಳು ಸಾವಿತ್ರಿ.

ಲಕ್ಷ್ಮಿಯ ಕೋಣೆಯನ್ನು ಅವಲೋಕಿಸುತ್ತಿದ್ದ ರಘು"ಬಂದೆ ಅಕ್ಕಾ" ಯೋಚನೆಗೆ ಕಡಿವಾಣ ಹಾಕಿ ಹಾಲ್‌ಗೆ ಬಂದ. ಅಕ್ಕಾ ಕೇಳುವ ಮೊದಲೇ "ಸುಮ್ನೆ ಒಂದ್ಸಾರಿ ಲಕ್ಷ್ಮಿಯ ರೂಮ್ ನೋಡ್ದೆ" ಎಂದು ಸೋಫಾಕ್ಕೊರಗಿದ. ಬಲ ಪಕ್ಕಕ್ಕೆ ಸಾವಿತ್ರಿ ಕುಳಿತಳು.

"ಏನನಸ್ತು?" ಔಪಚಾರಿಕವಾಗಿ ಕೇಳಿದಳು.

"ಚನ್ನಾಗಿದೆ. ಅಕ್ಕ ಅವ್ಳು ನನ್ನ ಮದುವೆಯಾಗ್ತಾಳೆ?"ಸಂಶಯದಿಂದ ಕೇಳುತ್ತ ಕಾಫಿ ಕೈಗೆತ್ತಿಕೊಂಡ.

ನಗುಮೊಗದಿಂದ "ಏಕೆ ಅನುಮಾನ? ನಿನಗೆ ಕೊಡುದೇನ್ನಾರಿಗೆ ಕೊಡ್ಬೇಕು? ಕೈತುಂಬ ಸಂಬಳ ತಗಳ್ತೀಯ ನಿನ್ನಂತವ್ನ ಮದುವೆಯಾಗದೆ ಇನ್ನಾರನ್ನ ಆಗ್ತಾಳೇಳು? ಪರೀಕ್ಷೆ ಮುಗೀತಿದ್ದಾಗೆ ಮದುವೆ ಮಾಡಿದ್ರಾಯ್ತು. ನಾನೂ ನಿಮ್ ಭಾವಂಗೆ ಹೇಳಿ

ದ್ದೀನಿ. ದೂರದ ಸಂಬಂಧ ಹೇಗೋ ಏನೋ ನನಗಿಚ್ಚೆ ಇಲ್ಲ."

"ನೀನೇನೋ ಹೇಳ್ತಿ. ಭಾವ ಏನಂದ್ರು? ಅವ್ರೇನಂದ್ಲು?" ಕೇಳಿದ. ತುಂಡು ಕೋಪದಿಂದ–"ಅವ್ರನ್ನ ಒಪ್ಪಿಸೋ ಜವಾಬ್ದಾರಿ ನಂದು. ನೀನ್ಯಾಕೆ ಯೋಚ್ನೆ ಮಾಡ್ತಿಯಾ? ಅವ್ರು ಮಾತ್ರ ರಾತ್ರಿ ಹತ್ತು ಗಂಟೆಗೇ ಬರೋದು. ಈಗ ಮೂರ್‍ನಾಲ್ಕು ತಿಂಗ್ಳಿಂದ ಕೆಲಸ ಬೇರೆ ಜಾಸ್ತಿಯಾಗಿದೆ. ಅದೋ ಗೇಟ್ ತೆಗೆದ ಸದ್ದಾಯ್ತು.ಲಕ್ಷ್ಮಿ ಬಂದ್ಲು ಅಂತ ಕಾಣ್ಸುತ್ತೆ"ಎದ್ದು ಹೋಗಿ ಬಾಗಿಲು ತೆರೆದು ಅಲ್ಲೇ ನಿಂತಳು.

ರಾಜು ಕಟ್ಟಿದ ಸರ ಬಿಚ್ಚಿ ಮೊದ್ಲೇನೆ ಬ್ಯಾಗಲ್ಲಿ ಹಾಕಿ,ತಾಯಿ ಕೇಳುವ ಪ್ರಶ್ನೆಗೆ ಉತ್ತರ ಸಿದ್ಧಮಾಡಿಕೊಂಡು ಸಮೀಪಕ್ಕೆ ಬಂದಳು.

ರಘು ಲಕ್ಷ್ಮಿಯನ್ನು ನಾನಾ ವಿಧದಲ್ಲಿ ಕಲ್ಪಿಸಿಕೊಂಡನು. ಹಿಮ್ಮಡಿ ಎತ್ತರದ ಚಪ್ಪಲಿ ರೂಮಿನಲ್ಲಿ ಕಂಡ ಅವಳ ಉಡುಪಿಗನುಗುಣವಾಗಿ ಮ್ಯಾಕ್ಸಿ, ಪಂಜಾಬಿ ಡ್ರೆಸ್‌ಧಾರಿಣಿಯಾಗಿ ತನ್ನ ಎದುರಿಗೆ ಬಂದಂತಾಯಿತು. ಮನಃ ಚಕ್ಷುವಿನ ಮೇಲಿನ ಪೂರ್ಣ ಚಿತ್ರವನ್ನು ವೀಕ್ಷಿಸಲು ಬಿಡದಂತೆ ಅಕ್ಕ ಸಾವಿತ್ರಿ– "ಲಕ್ಷ್ಮಿ ಇಷ್ಟೊತ್ತೇನೆ? ದಿನವೂ ಏನಾದ್ರು ಒಂದು ಕಾರಣ ಹೇಳ್ತಿಯಲ್ಲ..." ಎಂದು ತಾವೇ ಮೊದಲು ನುಡಿದರು. ಪ್ರತಿದಿನದಂತೆ ಈ ದಿನ ತಾಯಿಯ ನುಡಿಯಲ್ಲಿ ಗಡುಸುತನ ಕಾಣದ ಲಕ್ಷ್ಮಿ "ನನ್ ಫ್ರೆಂಡ್ ಮನೆಗೆ ಹೋಗಿದ್ದೆ ಮಮ್ಮಿ ಅಲ್ಲಿ..." ಎನ್ನುತ್ತಿದ್ದಂತೆ "ಸಾಕು,ಸಾಕು... ಬಾ ಯಾರು ಬಂದಿದ್ದಾರೆ ನೋಡು" ಆಶ್ಚರ್ಯವನ್ನುಂಟು ಮಾಡುವಂತೆ ನುಡಿದು ಹಿಂದೆ ಸರಿದಳು. ತಾಯಿಯನ್ನೆ ಹಿಂಬಾಲಿಸಿದ ಲಕ್ಷ್ಮಿ ಹುಬ್ಬು ಕಲೆ ಹಾಕಿ "ಯಾರಿರಬಹುದು?" ಎಂದು ಕೊಳ್ಳುತ್ತ ಕುತೂಹಲದಿಂದ ಒಳಗಡಿಇಟ್ಟಳು.

ರಘುವಿನ ಯೋಚನೆಯಲ್ಲಿ ಭ್ರಮ ನಿರಸನವಾದರೂ ಕಲ್ಪನೆಗೆ ಹತ್ತು ಪಟ್ಟು ಮೀರಿದ ಚಲುವಿಗೆ ಬೆರಗಾದ. ಬಿಳಿ ಸೀರೆಧಾರಿಣಿ, ತಲೆಯಲ್ಲಿ ಮಲ್ಲಿಗೆ ಹೂ ಹಣೆಯಲ್ಲಿ ಕುಂಕುಮ, ರಂಗೇರಿದ ಕದಪುಗಳು, ಪುಟ್ಟ ಚಂದುಟಿ,ವಿಶಾಲನಯನ ದಂಗಾಗಿ ಕೂತ ರಘು. 'ಒಳ್ಳೆ ರಂಭೆ ಇದ್ದಾಗೆ ಇದ್ದಾಳೆ' ಎಂದುಕೊಂಡು ಮುಗುಳ್ನಗುವನ್ನು ಮುಖದಲ್ಲಿ ಎಳೆದು ತಂದ ಅವನ ಆಲೋಚನೆಗಳೆಲ್ಲವನ್ನು ಬದಲಾಯಿಸಿದ ಲಕ್ಷ್ಮಿ

ಅವನನ್ನು ಗುರ್ತಿಸಿದರೂ ಅಪರಿಚಿತನನ್ನು ನೋಡಿದಂತೆ ದಿಟ್ಟಿಸಿದಳು.

ಬಿಳಿ ಪಂಜೆ, ತೆಳು ಫ್ರೇಮಿನ ಕನ್ನಡಕ ಧರಿಸಿದ್ದ ಅವನನ್ನು ಶೂನ್ಯ ಭಾವದಿಂದ ನೋಡಿ ಅಲ್ಲಿಂದ ಹೊರಡುತಿದ್ದಂತೆ "ನನ್ನ ಗುರುತುಸಿಗಲಿಲ್ವ ಲಕ್ಷ್ಮಿ?" ತಾನೆ ಕೇಳಿದ ರಘು.

ಆಕೆ ನಿರ್ಭಾವ ತೋರಿದ್ದರಿಂದ ಸಾವಿತ್ರಿಯೆ "ಲಕ್ಷ್ಮಿ ಇವ್ನು ರಘು ಕಣೇ,ಸ್ವಲ್ಪ ಬದ್ಲಾಗಿದ್ದಾನೆ ಅಷ್ಟೆ."ಎಂದಳು,

"ಓ...ಗೊತ್ತು" ಎಂದು ತಾಯಿಯ ಮುಖ ನೋಡಿ, ನುಡಿದು ಅಲ್ಲಿಂದ ತಪ್ಪಿಸಿಕೊಂಡಳು.

"ಏನಕ್ಕ ಲಕ್ಷ್ಮಿ ಮಾತೆ ಕಡಿಮೆ ಮಾಡ್ಬಿಟ್ಟಿದ್ದಾಳೆ.ಹೋದ್ಸಾರಿ ಬಂದಾಗ ಹರಳು ಉರಿದಾಗೆ ಮಾತ್ನಾಡ್ತಿದ್ಲು" ಆಶ್ಚರ್ಯ ತೋರಿದ.

"ಆಗ ಏಕೆ? ಎರಡು ದಿನ ಇರು ಸಾಕು. ಹರಳು ಉರಿದಾಗೆ ಮಾತ್ನಾಡೋಳು ಆಮೇಲೆ ನಿನ್ನನ್ನೆ ಉರಿಸ್ತಾಳೆ" ಎಂದಾಗ ಇಬ್ಬರೂ ಕೂಡಿ ನಕ್ಕರು.

ಪೂರ್ಣ ವೇದನಾಪರಳಾಗಿ ಟೇಬಲ್ ಮೇಲೆ ಎರಡೂ ಕೈಊರಿ ಕುಳಿತ ಲಕ್ಷ್ಮಿ. ಎದುರಿನಲ್ಲಿದ್ದ ಪುಸ್ತಕದಲ್ಲಿನ ಎರಡು ಸಾಲೂ ತಲೆಗೆ ಅತ್ತಲಿಲ್ಲ 'ರಘು ಯಾತಕ್ಕೆ ಬಂದಿದ್ದಾನೆ ಅನ್ನೊದು ಚೆನ್ನಾಗಿ ಗೊತ್ತು. ಹಾಗಾದ್ರೆ ನನ್ನ ರಾಜನ ಪ್ರೇಮದ ಗತಿ? ಇದಕ್ಕಿದ್ದಾಗೆ ಮಧ್ಯೆ ಇವ್ನೆಲಿಂದ ಬಂದ ಒಂದು ಕಡೆ ಪ್ರೇಮದ ಸಾಕಾರಮೂರ್ತಿ ರಾಜನೆ ಸರ್ವಸ್ವ, ಆಕರ್ಷಣೆಯ ಸೆಳೆತ ಇನ್ನೊಂದೆಡೆ ದುಡಿಮೆಗಾರನಿಗೆ ಹೃದಯ ಹೀನ ದೇಹ ಅರ್ಪಣೆ. ಇಬ್ಬರ ಯೋಚನೆಯಲ್ಲಿ ರಾಜನ ಪ್ರೇಮವೆ ಪ್ರಭುತ್ವ ಸ್ಥಾಪಿಸಿದ್ದು.

ತಲೆ ಬಾಗಿಸಿ ಬಾಗಿಲಿಗೆ ಬೆನ್ನು ತೋರಿ ಕುಳಿತಿದ್ದಳು. ರಘು ರೂಮಿನ ಬಾಗಿಲಿಗೆ ಬಂದು ನಿಂತು "ಮೇ ಐಗೆಟಿನ್ ಮೇಡಂ?" ಮುಗುಳ್ನಗೆಯಲ್ಲಿ ಕೇಳಿದ.

ತಲೆ ಎತ್ತಿ ಕಣ್ಣಂಚಿನಿಂದ ಗಮನಿಸಿ,ಏನೂ ಹೇಳದೆ ತಲೆ ತಗ್ಗಿಸಿ,ಪುಸ್ತಕದ ಮೇಲೆ ನೋಟ ಹರಿಸಿದಳು. "ಯಾವ್ದೊ ಒಂದು ಗಾದೆ ಇದೆ. ಅದು ನನಗೆ ಬರಲ್ಲ. ಮೌನವಾಗಿದ್ರೆ ಒಪ್ಪಿಗೆಯಂತ ಭಾವಿಸ್ಕೊಂಡು ಒಳಗೆ ಬಂದಿದ್ದೀನಿ. ತಪ್ಪಿಲ್ಲ ತಾನೆ?" ಅದಕ್ಕೂ ಮೌನವಾಗಿದ್ದರಿಂದ "ಸರಿ ಮೌನವಾಗಿದ್ದೀರಿ, ನಾನು ಬಂದಿರೋದೇ ಸರೀ ಅಂತ ತಿಳ್ಕೊಳ್ಳಾ?" ಎನ್ನುತ್ತ ಮಂಚದ ಬದಿಗೆ ಕುಳಿತ.

'ನನ್ನನ್ನು ರಾಜುವನ್ನು ಅಗಲಿಸಲಿಕ್ಕೆ ಬಂದಿರುವುದು ಸರಿಯೇ?' ಬಂದ ಚಿಂತಿಸಿ"ನೀವು ತಪ್ಪನ್ನೆ ಅರಿಯದವರು. ಅದಕ್ಕೆ .." ನಿಲ್ಲಿಸಿ ಮುಖದಿಟ್ಟಿಸಿ ಬೇರೆ ಕಡೆ ದೃಷ್ಟಿ ಬದಲಿಸಿದಳು. ಮರಳಿ ಓದುವ ಯತ್ನ ಮಾಡಿದಳು.

"ನನ್ನ ಅದೃಷ್ಟ ಇಷ್ಟೊತ್ತಿಗಾದ್ರೂ ಒಂದು ಮಾತ್ನಾಡಿದ್ರಲ್ಲ. ಏನ್ಮಾಡೋದು ಲಕ್ಷ್ಮೀ.ಅಕ್ಕನತ್ರ ಆಡೋ ಮಾತುಗಳೆಲ್ಲ ಮುಗಿದ್ವು"

"ನಾನೇನು ಮಾತ್ನಾಡ್ಬೇಕು?" ಅಸಹನೆಯು ಉಂಡೆಯಾಗಿ ಕೇಳಿದಳು.

"ವಿಶೇಷ ಏನಾದ್ರೂ ಹೇಳಿ ಕೇಳ್ತೀನಿ"

"ನೋಡಿ ನೀವು ಯಾರು ಅಂತ ನನಗೊತ್ತಿಲ್ಲ.ಪ್ಲೀಸ್ ಇಲ್ಲಿಂದ ಹೊರಟೋಗಿ

ತಲೆಹಾರಿಸಿ ಜೋರಾಗಿ ನಕ್ಕ ರಘು "ಕತೆ,ಏನೇಳಿದ್ರೂ ಕೇಳ್ತೀನಿ ಲಕ್ಷ್ಮೀ.ಇಂತಾ ಸುಳ್ಳೇಳಿದ್ರೆ ಕೇಳೊಲ್ಲ. ಯಾಕಂದ್ರೆ ನಾನು ಕಡೆ ಸಾರಿಬಂದಾಗ ನಿನಗೆ ಹದಿನೈದು ವರ್ಷ ನಡೀತಿತ್ತು. ಇನ್ನ ಐದಾರು ವರ್ಷಕ್ಕೆ ಮರೆತು ಬಿಡುವಂತ ವ್ಯಕ್ತಿಯೂ ನಾನಲ್ಲ. ನಿನ್ನ ತಲೆನೂ ಅಂತವಲ್ಲ ಅಂತ ತಿಳ್ಕೋತಿನಿ" ಎಂದ.

ಅಪಮಾನ ಹೊಂದಿದ ಮುಖ ಭಾವ ತೋರಿ"ನೋಡ್ರಿ ಅದೆಲ್ಲ ನನಗೊತ್ತಿಲ್ಲ. ಅನಾವಶ್ಯಕವಾಗಿ ಮಾತುಬೇಡ, ನನಗೆ ಎಕ್ಸಾಮ್ ಹತ್ರ ಬರ್‍ತಿದೆ..."

"ನೀನು ಚೆನ್ನಾಗಿ ಓದ್ಬೇಕು ಲಕ್ಷ್ಮೀ.ಮತ್ತೆ ಬರ್‍ತೀನಿ" ಎಂದೆದ್ದು ನಡೆದ. 'ಮತ್ತೇಕೆ ಬರ್‍ತಿಯು?' ಎಂದು ಕೇಳ ಬೇಕೆನಿಸಿದರೂ ಕೇಳಲಾಗಲಿಲ್ಲ. ಅವನತ್ತ

ಹೋಗುತಿದ್ದಂತೆ ಹಾಯೆನಿಸಿತು. ಕಣ್ಮುಚ್ಚಿ ಕುರ್ಚಿಗೆ ಹೊರಗಿ ನೆಮ್ಮದಿಯ ಉಸಿರು ಬಿಟ್ಟಳು.

ರಘು ಹೊರಗೆ ಬರುತಿದ್ದಂತೆ ಗಂಡನಿಗೆ ಅವನು ಬಂದಿರುವ ವಿಷಯ ತಿಳಿಸಿ ಆ ಕಡೆಗೆ ಕರೆದು ತರುತಿದ್ದಳು. ಅಷ್ಟರಲ್ಲೇ ಅವನೆದುರಿಗೆ ಬಂದಿದ್ದರಿಂದ ರಮೇಶಪ್ಪ "ಓ...ರಘೂ ಬಾರಯ್ಯ. ಏನು ಸಮಾಚಾರ?" ಸಂತೋಷ ತೋರಿ ಕರೆದರು.

"ಏನಿಲ್ಲ ಭಾವ. ರಜ ಹಾಕಿ ಬಂದಿದ್ದೀನಿ. ಅಕ್ಕ ಹತ್ತು ಗಂಟೆಗೆ ಬರೋದು ಅಂದಿದ್ಲು. ನೀವು ಬೇಗನೇ ಬಂದಾಗಾಯ್ತು"

"ಹೌದಪ್ಪ. ತಲೆ ಕೆಟ್ಟು ಸಾಕಾಗಿ ಹೋಗುತ್ತೆ.ಅವ್ನಾರೋ ಆಫೀಸರ್ ಬಂದು ಗೋಳೋಯ್ಕಳ್ತಾನೆ. ಅದಿರ್ಲಿ ಏನು ಇದ್ದಕ್ಕಿದ್ದಾಗೆ ಪ್ರತ್ಯಕ್ಷ ?

"ಮತ್ತಿನೇಕೆ?ಅಲ್ಲಿ ಒಬ್ನೆ ಅಲ್ವ?ಇನ್ನೂ ಎಷ್ಟು ದಿನ ಅಂತ ರೂಮ್ ಮಾಡ್ಕೊಂಡು ಇರೋಕಾಗುತ್ತೆ? ಸರಿ ಬಂದಿದ್ದಾನಲ್ಲ, ಅವ್ನೇನು ಈಗ್ಲೆ ಹೊರಟು ಹೋಗಲ್ಲ ಬೇಕಾದಷ್ಟು ಮಾತ್ನಾಡಿವಿರಂತೆ ಮೊದ್ಲು ಊಟ ಮಾಡ್ಬನ್ನಿ. ಲಕ್ಷ್ಮಿ ಊಟಕ್ಕೆ ಬಾರೆ" ಕೂಗಿ ಅಡುಗೆ ಮನೆಗೆ ಹೋಗಿ ಡೈನಿಂಗ್ ಟೇಬಲ್ ಮೇಲೆ ನಾಲ್ಕು ತಟ್ಟೆ ಹಾಕಿದಳು.

ಎರಡು ತುತ್ತು ತಿಂದು ಕೈ ತೊಳೆದು ಹೊರಟಳು. ಲಕ್ಷ್ಮಿ "ಯಾಕೆ? ಊಟ ಮಾಡೆ ಲಕ್ಷ್ಮಿ" ಅಧಿಕಾರ ವಾಣಿಯಿಂದ ನುಡಿದಳು ಸಾವಿತ್ರಿ.

"ನನಗೆ ಸಾಕು ಮಮ್ಮಿ" ಎಂದು ಬಿರುಗಾಳಿಯಂತೆ ನಡೆದಳು.

ಅವಳು ಅತ್ತ ಹೋದ ಮೇಲೆ ಸಾವಿತ್ರಿ "ನೋಡಿದ್ರಾ ಆಗ್ಲೇ ರಘು ಅಂದ್ರೆ ಹೇಗೆ ನಾಚ್ಕೋತಾಳೆ" ಎಂದಳು. ರಘು ಖುಷಿಪಟ್ಟ.

"ಹೌದು ನಿನ್ನ ಪ್ರಕಾರ ಸಿಟ್ಟು, ಸೆಡವು ಮಾಡಿದ್ರೆ ನಾಚಿಕೆಯಂತಲೇನಾ? ಹಾಗಾದ್ರೆ ನನಗೆ ತುಂಬಾ ನಾಚಿಕೆ ಎಂದಾಗಾಯ್ತು" ವ್ಯಂಗ್ಯವಾಗಿ ನುಡಿದ ರಮೇಶಪ್ಪ

ಹೆಂಡತಿಯನ್ನು ಚುಡಾಯಿಸಿದ.ಮೂವಾರು ಜೋರಾಗಿ ನಕ್ಕರು. ಸಾವಿತ್ರಿ ನಿಜವಾದ ನಾಚಿಕೆಯಿಂದಲೇ ತಲೆ ತಗ್ಗಿಸಿದಳು. ಊಟದ ಮಧ್ಯೆ ಮಾತಿಗೆ ಬರಲಿಲ್ಲವಾದ್ದರಿಂದ ಮಿತಿಮೀರಿ ತಿಂದರು.

O O O

ರಾತ್ರಿಯಿಡಿ ನಿದ್ರೆ ಇಲ್ಲದೆ ಹೊರಳಾಡಿದ ಲಕ್ಷ್ಮಿಗೆ ಹೊಳೆದದ್ದು ರಾಜನ ಸನ್ಯಾಸಿ ನಾಟಕ. ಹೊರಗಡೆ ಹಕ್ಕಿಗಳ ಕಿಂಚರ ಬೆಳಗಾಗುವುದೆಂದು ಸೂಚನೆ ಕೊಟ್ಟವು ಪೂರ್ಣ ಕತ್ತಲಿನಲ್ಲಿ ಬೆಳಕು ಸೇರಿಕೊಳ್ಳತೊಡಗಿತು.ತಕ್ಷಣ ಎದ್ದು ನಿಂತು ನಿಶ್ಚಯಿಸಿಯೇ ಹೊರ ಟಳು. ಬಾತ್ ರೂಮಿಗೆ ಹೋಗಿ ನೈಟ್ ಡ್ರೆಸ್ ತೆಗೆಯದೆ ಷಾವರ್‌ಗೆ ಮುಖ ಒಡ್ಡಿ ಮೆಲ್ಲಗೆ ತಿರುಪನ್ನು ತಿರುವಿದಳು.ಕೆಲವೇ ಹನಿ ದೇಹದ ಮೇಲೆ ಬಿದ್ದ ಕೂಡಲೇ "ಹಾಯ್" ಎಂದು ಉದ್ಗಾರ ತೆಗೆದು ನಡುಗಿ ನಿಲ್ಲಿಸಿದಳು. ಕಡೆಗೆ ಕಣ್ಮುಚ್ಚಿ "ರಾಜು ನೀನೇ ಗತಿ ......" ಎಂದು ಜೋರಾಗಿ ತಿರುಗಿಸಿದಳು ದೇಹವನ್ನು ದಂಡಿಸಿದ ಕೆಲಸ ಮುಗಿದ ಮೇಲೆ ತಲೆ ಕೂದಲನ್ನು ಹಿಂಡಿ ನೀರು ತೆಗೆದು ಹಿಂದಕ್ಕೆ ಹರಡಿ ಕೊಂಡು, ಒದ್ದೆ ದೇಹದಲ್ಲಿ ನಡುಗುತ್ತಲೇ ತಮ್ಮ ಮನೆಯಲ್ಲಿದ್ದ ಗಣಪತಿ ಫೋಟೊಗೆ 'ಕೈಮುಗಿದಳು. `ತಾನು ಮಾಡಿದ ಕಾರ್ಯ ಸಾಲದು' ಎಂದು ಚಿಂತಿಸಿ, ಕೂಡಲೆ ದೀಪಹಚ್ಚಿ ನಾಮ ಹಚ್ಚಿಕೊಂಡಳು.ಬಟ್ಟೆಯ ತುಂಡು ಹಾಸಿ ಅದರ ಮೇಲೆ ಕೈಮುಗಿ ದು ಕಣ್ಮುಚ್ಚಿಕೊಂಡು ಕುಳಿತಳು. ನಡುಕ ಕಡಿಮೆಯಾಗ ತೊಡಗಿತು.

ಆಕಸ್ಮಿಕವಾಗಿ ಬಂದ ಸಾವಿತ್ರಿ, ಮಗಳನ್ನು ನೋಡಿ ಧಿಗ್ಭ್ರಮೆಗೊಂಡಳಾದಳು. ಒದ್ದೆ ಉಡುಪಿನಲ್ಲಿ ಕೈಮುಗಿದು ಕಣ್ಮುಚ್ಚಿ ಕುಳಿತಿದ್ದಳು ಲಕ್ಷ್ಮಿ.ಸುತ್ತಲೂ ದೇಹದಿಂದ ನೀರು ಬಸಿದು ತೇವವಾಗಿತ್ತು.ಸಾವಿತ್ರಿಯ ಕೋಪ ನೆತ್ತಿಗೆ ಅಡರಿತು"ಏಯ್ ಲಕ್ಷ್ಮಿ ಏನ್ಮಾಡ್ತ ಇದ್ದೀಯೆ?" ಅರ್ಭಟಿಸುತ್ತ ಭುಜ ಅಲ್ಲಾಡಿಸಿ ಕೂಗಿದಳು.

ಲಕ್ಷ್ಮಿಯೂ ಇದೇ ಸಮಯ ಕಾಯುತ್ತಿದ್ದಳು ತನ್ನ ಮನೋಭಾವನೆಯನ್ನು ತೋರಲಿಕ್ಕೆ.ಭುಜ ಕೊಸರಿ ಎದ್ದು ನಿಂತಳು.ರಮೇಶಪ್ಪ,ರಘು ಅವರಿಗೆ ಪ್ರತ್ಯೇಕವಾಗಿ ಕರೆಯುವ ಅವಶ್ಯಕತೆ ಇರಲಿಲ್ಲ. ಸಾವಿತ್ರಿಯ ಬಾಯಿಯ ಗದ್ದಲಕ್ಕೆ "ಏನಾಯಿತೊ?"

ಎಂದುಕೊಳ್ಳುತ್ತ ಒಬ್ಬರ ಹಿಂದೆ ಒಬ್ಬರು ಓಡಿ ಬಂದರು.

"ಏನೇ ದೆವ್ವ ನಿಂತಾಗಿ ನಿಂತಲ್ಲ. ಮನುಷ್ಯರನ್ನ ಮದುವೆಯಾಗದೆ ದೇವ್ರನ್ನ ಪ್ರತ್ಯಕ್ಷ ಮಾಡ್ಕೊಂಡು ಅವ್ನನ್ನ ಮದುವೆ ಮಾಡ್ಕೊಳೋಣಾಂತ ಇದ್ದೀ ಏನೇ?" ಎಂದು ತಿವಿದಳು. ಲಕ್ಷ್ಮಿಯ ಮದುವೆಯಲ್ಲಿನ ಅನಾಸಕ್ತಿ ಸಾವಿತ್ರಿಗೆ ಅರಿವಾಗಿತ್ತು.

"ಛೇ...ಇದೇನೆ ಸಾವಿತ್ರಿ? ಅದೇನು ಸರಿಯಾಗಿ ಯೋಚ್ನೆ ಮಾಡಿ ವಿಚಾರ್ಸೆ. ಹೀಗ್ಮಾಡಿದ್ರೆ ಹೇಳೊ ವಿಷ್ಯನೂ ಮುಚ್ಚಿಡ್ತಾಳೆ" ಪ್ರಥಮ ಬಾರಿಗೆ ಹೆಂಡತಿಯ ಮೇಲೆ ರೇಗಿದ ರಮೇಶಪ್ಪ.

"ನೀವೇ ಬಿಡ್ಸಿಕೊಳ್ಳಿ ಹೊಲ್ದಿರೋ ಅವ್ಳ ಬಾಯಿನಾ?" ವ್ಯಂಗ್ಯವಾಗಿ ನುಡಿದು ಹಿಂದೆ ಸರಿದಳು.

"ಸರಿಬಿಡು.ಲಕ್ಷ್ಮಿ ಬಾಇಲ್ಲಿ.ಅದೇನೂಂತ ಸ್ಪಷ್ಟವಾಗಿ ಹೇಳು ಹೆದರ್ಕೋಬೇಡ" ಎಂದು ತಲೆ ಸವರುತ್ತ ಧೈರ್ಯ ತುಂಬಿದನು.

ಸಾಕಷ್ಟು ಹೊತ್ತು ನೆನೆದ ಬಟ್ಟೆಯ ಮೇಲಿಂದಲೇ ರೋಮಾಂಚನಗೊಳಿಸುವ ಅಂಗ ಸೌಂದರ್ಯವನ್ನು ನೋಡಿ ಇನ್ನು ತಾನಲ್ಲಿರುವುದು ಶ್ರೇಯಸ್ಕರವಲ್ಲವೆಂದು ತೀರ್ಮಾನಿಸಿ ರಘು ಅಲ್ಲಿಂದ ಜಾಗ ಖಾಲಿ ಮಾಡಿ ಹೊರ ಬಾಗಿಲಲ್ಲಿ ಮರೆಯಾಗಿ ನಿಂತು ಕಿವಿ ಚುರುಕುಗೊಳಿಸಿದ ಲಕ್ಷ್ಮಿ ಹೇಳುವ ಮಾತಿಗಾಗಿ.

"ನಾನು ಪ್ರತಿದಿನವೂ ಸ್ವಲ್ಪ ಲೇಟಾಗಿ ಯಾಕೆ ಬರ್ತಿದ್ನೆನಂದ್ರೆ ಡ್ಯಾಡಿ .. ನನ್ ಫ್ರೆಂಡ್ ಮನೆಗೆ ಹೋಗ್ತಿರ್ಲಿಲ್ಲ. ಕಾಲೇಜ್ ಫಂಕ್ಷನ್ನಿಗೂ ಹೋಗ್ತಿರ್ಲಿಲ್ಲ..." ಎನ್ನುತ್ತಿದ್ದಂತೆ ಮಧ್ಯದಲ್ಲಿಯೇ ತಡೆದು "ಮತ್ತೆಲ್ಲಿಗೆ ಹೋಗ್ತಿದ್ದೆ ಬೊಗಳೆ..." ಮತ್ತಷ್ಟು ದನಿ ಏರಿಸಿದಳು ಸಾವಿತ್ರಿ.

"ಅವಳೇ ಹೇಳ್ತಿರ್ಬೇಕಾದ್ರೆ ನೀನೇಕೆ ಮಧ್ಯ ಬಾಯಾಕಿ ಕೂಗಾಡ್ತಿಯೋ ಸ್ವಲ್ಪ ಸಮಾಧಾನ ಮಾಡ್ಕೊಳೇ ಸಾವಿತ್ರಿ" ರಮೇಶಪ್ಪ ಸಮಾಧಾನ ಚಿತ್ತದಿಂದ ಉಪದೇಶಿಸಿ

"ನೀನು ಮುಂದೇಳಮ್ಮ" ಎಂದರು.

"ಕಾಲೇಜಿಂದ ಬರ್ಬೇಕಾದ್ರೆ ರಂಗಮಂದಿರ ಇದೆಯಲ್ಲ ಡ್ಯಾಡಿ, ಅಲ್ಲಿ ಪ್ರತಿ ದಿನ ಸನ್ಯಾಸಿನಿ ಒಬ್ರು ಉಪನ್ಯಾಸ ಮಾಡ್ತಿದ್ರು. ಅದನ್ನ ಕೇಳಿ ಕೇಳಿ ನಾನೂ ಸನ್ಯಾಸಿನಿ ಯಾಗ್ಬೇಕು ಅಂತ ತೀರ್ಮಾನ ಮಾಡಿದ್ದೀನಿ ಡ್ಯಾಡಿ ಅಷ್ಟೆ" ಎಂದು ತನಗೆ ಮದುವೆ ಯಲ್ಲಿ ಆಸಕ್ತಿ ಇಲ್ಲವೆಂದು ತೋರಿದಳು.

"ಓ...ಓ... ಇವ್ಳು ಸನ್ಯಾಸಿನಿ ಆದಾಗೆ, ಅವ್ಳಾರೋ ಹೇಳಿದ್ಲು ಅಂತ ಕೇಳ್ದೆ. ನಾಳೆ ಸನ್ಯಾಸಿನಿ ಆದ್ಮೇಲೆ ಯಾರಾದ್ರೂ ಗಂಡ ಹೆಂಡ್ತಿ ಕೈಹಿಡ್ಕೊಂಡು ಓಡಾಡೋದು ನೋಡಿದ್ರೆ ಆಗ ಇದೇ ಬೇಕು ಅನ್ನುವವಳೆ ನೀನು. ನೋಡೆ ಲಕ್ಷ್ಮಿ ಇಲ್ಲಿ ಕೇಳು ನಿನ್ನ ಕೈಲಿ ಅದೆಲ್ಲ ಆಗಲ್ಲ. ಚೊಕ್ಕವಾಗಿ ಸಂಸಾರ ಮಾಡೋದು ಕಲಿ.ಬೇಕಾದ್ರೆ ಪೂಜೆ ಪುನಸ್ಕಾರ ಜಾಸ್ತಿ ಮಾಡ್ಕೊ. ನಾನಾಕಿದ ಗೆರೆ ಹೇಗೆ ದಾಟ್ತೀಯೋ ನಾನು ನೋಡ್ತೀನಿ. ಈ ಆಟ ನನ್ನತ್ರ ನಡೆಯಲ್ಲ ಅನ್ನೋದು ಚನ್ನಾಗಿ ನೆನಪಿಟ್ಕೊ..." ಎಂದು ಒಂದೇ ಸಮನೆ ಆವೇಶದಿಂದ ಒದರಿ ಹೊರ ನಡೆದಳು.

ಅವಳತ್ತ ಹೋಗುತ್ತಿದ್ದಂತೆ ವಾತ್ಸಲ್ಯದಿಂದಲೇ "ಹೌದು ಲಕ್ಷ್ಮಿ ನಿಮ್ಮಮ್ಮ ಹೇಳೋದು ಸರಿ. ನೀನ್ಯಾಕೆ ಹೀಗೆ? ಮಾಡ್ತಿಯಾ ಅನ್ನೊದು ನನಗೆ ಚನ್ನಾಗಿ ಗೊತ್ತು. ನೋಡು ಲಕ್ಷ್ಮಿ ಈವಯಸ್ಸಿದೆಯಲ್ಲ ಮಹಾ ಕೆಟ್ಟದು.ನಿನಗಂತ ಅಲ್ಲ ಎಲ್ಲರಿಗೂ ಅಷ್ಟೆ ಏನು ಒಳ್ಳೆ ಮಾತನ್ನ ಕೇಳಿದ್ರೂ ಅವನ್ನ ಸಾಧಿಸಲೇ ಬೇಕು ಅನ್ನೊ ಹಠ ಬರುತ್ತೆ. ಇದು ಬಾಲಿಶವಷ್ಟೆ. ಒಬ್ಬ ಮಾತುಗಾರ ತನ್ನ ಒಳ್ಳೆಯ ಮಾತಿನಿಂದ ನಂಬಿಸಿದಂತೆ. ಈತರಹದ ಮಾತುಗಳ್ನ ನಂಬಿದವರು ಮೋಸ ಹೋಗಬಹುದು.ಅವಕ್ಕೆಲ್ಲ ಕಠಿಣ ಶ್ರಮ ವ್ರತ ಬೇಕು. ನೋಡ್ತಾ ಇರು ಎರಡು ದಿನ ಕಳೆದ್ಮೇಲೆ ಅದೇನು ಸನ್ಯಾಸಿನಿಯ ದಿವ್ಯ ವಾಣಿ ಎಂದೆಯೊ ಅದರ ಆ`ಬ್ಬರ ಎಲ್ಲ ಇಳಿದ್ಮೇಲೆ ನೀನು ಮೊದ್ಲಿನ ಸ್ಥಿತಿಗೆ ಖಂಡಿತ ಬರ್ತೀಯಾ, ನನಗೆ ನಂಬಿಕೆ ಇದೆ. ಹೋಗು ಬಟ್ಟೆ ಬದಲಾಯಿಸು, ಇದನ್ನೆಲ್ಲ ತಲೆಗೆ ಹಚ್ಕೊಳ್ಳದೆ ವಿದ್ಯಾಭ್ಯಾಸದ ಕಡೆಗೆ ಗಮನ ಕೊಡು" ಎಂದು ಪ್ರೀತಿಯಿಂದ ಪುಸಲಾಯಿಸಿ ಮಣಿಸಿದರು. ಲಕ್ಷ್ಮಿಗೂ ಕೇಳದೆ ವಿಧಿ ಇರಲಿಲ್ಲ. ಮುಂದೆ ಮಾತನಾಡಲು

ಅವಕಾಶ ಕೊಡದೆ ಕಳುಹಿಸಿದರು.

೧೨

ಎರಡ್ಮೂರು ತಿಂಗಳುಗಳಿಂದ ಪುರುಷೋತ್ತಮ ಇತ್ತ ಬರಲಾರಂಭಿಸಿದ. ಸೂರ್ಯ ಮುಳುಗುತಿದ್ದಂತೆ ಗುಡಿಸಲುಗಳಿರುವ ಭಾಗದಲ್ಲಿ ಹತ್ತು ಗಂಟೆ ದಾಟಿತೆಂದರೆ ನರಪಿಳ್ಳೆಯೂ ಎಚ್ಚರಗೊಳ್ಳದಂತೆ ಬಿದ್ದುಕೊಂಡಿರುತಿದ್ದರು. ಕಷ್ಟದ ದುಡಿಮೆ ಮೈಹಣ್ಣಾಗಿಸಿ ನಿದ್ರಾಲೋಕಕ್ಕೆ ಹಾಗೇ ಸೆಳೆಯುತ್ತಿದ್ದರಿಂದ,ಬುಡ್ಡಿ ದೀಪದ ಎಣ್ಣೆಯ ಖರ್ಚು ಉಳಿಸಿ ಒಗ್ಗರಣೆಗೆ ಬಳಸುತಿದ್ದರು. ಅವರಿಗೆ ನಿಜವಾಗಿಯೂ ಆರ್ಥಿಕವಾಗಿ ಲಾಭವಾದರೆ, ಪುರುಷೋತ್ತಮನಿಗೆ ಹೆಣ್ಣಿನ ಸಂಗದಿಂದ ಲಾಭವಾಗಿತ್ತು. ಬೀದಿ ದೀಪಗಳೇ ಕೆಟ್ಟುಹೋಗಿ ಎಲೆಕ್ಟ್ರಿಕ್ ಆಫೀಸಿನವರು ಅತ್ತ ಗಮನ ಕೊಡದಿದ್ದದ್ದು ಪುರಷೋತ್ತಮನಿಗೆ ವರದಾನವಾಗಿತ್ತು. ಯೌವನ ಚಿಮ್ಮುವ ದೇಹದಲ್ಲಿ ರುಚಿ ಕಂಡವನು ಸರಿಯಾಗಿ ಹತ್ತುಗಂಟೆಯ ನಂತರ ಬಂದು ಹೋಗತೊಡಗಿದ. ಎಂದಿನಂತೆ ಮುಖ್ಯ ರಸ್ತೆಯ ತಿರುವಿನಲ್ಲಿ ಕೈಯಲ್ಲಿದ್ದ ಸಿಗರೇಟು ಎಸೆದು ಕಲ್ಲು ಮಣ್ಣಿನ ರಸ್ತೆಗಿಳಿದು ಪಂಚೆಯನ್ನು ಮಡಿಚಿ ಕಟ್ಟಿದ, ಬಸವನ ಮನೆಯ ಎದುರಿಗೆ ಬಂದಾಗ ಆ ಕಡೆ ದೃಷ್ಟಿ ಹಾಕಿದ. ಹೊರಗಡೆ ಕಟ್ಟೆಯ ಮೇಲೆ ಕೈ ತಲೆದಿಂಬಿನ ಮೇಲಿಟ್ಟು ಸುಖ ನಿದ್ರೆಯಲ್ಲಿ ಬಸವ ಮಲಗಿದ್ದು ಅಸ್ಪಷ್ಟವಾಗಿ ಗೋಚರಿಸಿತು. ಚಪ್ಪಲಿಯ ಸದ್ದಾಗದಂತೆ ಕಾಲು ಎತ್ತಿಟ್ಟು ಮುಂದೆ ಸಾಗಿದ.

ಬಾಗಿಲು ನೂಕಿದ, ತೆರೆಯಲಿಲ್ಲ.'ಆಕೆಗೆ ಎಷ್ಟು ಹೇಳಿದ್ರೂ ಬಾಗಿಲು ಭದ್ರವಾಗಿ ಹಾಕ್ತಾಳೆ' ಎಂದು ರೊಚ್ಚಿನಿಂದ ಹಲ್ಲು ಮಸೆದು ಬಾಗಿಲು ತಟ್ಟಿದ.ನಿದ್ರೆಯಿಲ್ದೆ ಹೊರಳಾಡುತ್ತ ಮಲಗಿದ್ದ ಸಾಕಮ್ಮಳಿಗೆ ಬಾಗಿಲು ತೆರೆಯದಿದ್ದರೆ ರಂಪ ಮಾಡುವನೆನ್ನುವ ಭೀತಿ. ಮನಸ್ಸಿಲ್ಲದೆ ಮಲಗಿ ಅನುಭವಿಸಿದ ಸುಖಕ್ಕಿಂತ ನೋವೆ ಹೆಚ್ಚಿತ್ತು. ಬಾಗಿಲು ಬಡಿತ ಹೆಚ್ಚುತ್ತ ಹೋಯಿತು. ಹೆದರಿ ಕಂಗೆಟ್ಟು ಎದ್ದು ಬಂದು ಬಾಗಿಲು ತೆರೆದಳು. ಕತ್ತಲಲ್ಲಿ ಕಿಡಿ ಕಾರುವ ಅವನ ಕಣ್ಣು, ಉಕ್ಕುವ ಕೋಪವನ್ನು ಬಿಗಿದ ಕೆನ್ನೆಲುಬು. ಬುಸುಗುಟ್ಟುವ ಉಸಿರಿನಲ್ಲಿ ಕುಡಿತದ ಗಮಗಮ. ಮಗಳೆಯ ಕಡೆ ನೋಡಿದ ಮುದುಕಿ ಬಡಿದು ಏಳಿಸಿದರೂ ಎಚ್ಚರಗೊಳ್ಳದಂತೆ ಗೊರಕೆ ಹೊಡೆಯುತಿದ್ದಳು. ಬಾಗಿಲು ಮುಚ್ಚುವಂತೆ ಸೂಚಿಸಿ ಅವಳು ಮಲಗುವ ಅಡಿಗೆ ಕೋಣೆಗೆ ನಡೆದ. ಹಿಂದಿನಿಂದಲೇ ಬಂದಳು ಸಾಕಮ್ಮ. ದೀಪದ ಮಿಣಿಮಿಣಿ ಬೆಳಕಿಗೆ ಮುಖ ದೇಹದ ಅಂಗಾಗಗಳಲ್ಲಿನ

ಕುಂದು ಕೊರತೆಗಳೆಲ್ಲ ನಿವಾರಣೆಯಾಗಿ ಅವನಲ್ಲಿ ಕಾಮದ ಕಿಚ್ಚನ್ನು ಬೆಳಗಿಸಿದಳು.

ಉಮ್ಮಳಿಸುವ ದುಃಖದಿಂದ ಕಾಲಿಡಿದು ಕಣ್ಣೀರು ತಂದು "ನಿಮ್ ದಮ್ಮಯ್ಯ ಅಂತೀನಿ ,ಪದೇಪದೆ ಹಿಂಗ್ ಬಂದು ತೊಂದ್ರೆ ಕೊಡ್ಬೇಡಿ" ಪರಿಪರಿಯಾಗಿ ಕೇಳಿ ಕೊಂಡಳು.

ವಿಕಾರ ನಗೆ ಹಾರಿಸಿದ ಪುರುಷೋತ್ತಮ"ಏನೇ ನಾನು ಬರ್ಬಾರ್ದ? ನಾನು ಬರ್ಬಾರ್ದ ಅನ್ನೋದಾದ್ರೆ ನೀನು ಕುರೂಪಿ ಆಗ್ಬೇಕು. ಅಗ್ನಿಯೇನೆ ನಿನ್ನ ಮುಖಕ್ಕೆ ಬೆಂಕಿ ಹಾಕಿ ಸುಡ್ಬೇಕು,ಸುಡಿಸಿಕೊಳ್ತೀನಿ ಅಂದ್ರೆ ಇವತ್ತೆ ಕೊನೆ" ನ್ಯಾಯ ತಿಳಿ ಹೇಳು ವಂತೆ ನುಡಿದ.

ಕೋಡಿ ಹೊಡೆದ ಕಣ್ಣೀರಿನಿಂದ ಮೂಕ ವೇದನೆ ಅನುಭವಿಸುತ್ತ ಇಲ್ಲವೆಂದು ತಲೆ ಅಲ್ಲಾಡಿಸಿದಳು.

"ಅಂಗೆ ಜಾಣೆ...ಬಾ ಮತ್ತೆ..." ಎಂದು ಕರೆದ. ಬಲಹೀನ ಹಿಡಿತದೊಳಗೆ ಸಿಲುಕಿದಳು. ಅವನಲ್ಲಿನ ಬಯಕೆಯ ಬೆಂಕಿ, ಅಗ್ನಿಯಾಗಿ ಸುಡ ತೊಡಗಿತವಳ ಚೆಲುವ ಮೊಗವ.

ಪುರುಷೋತ್ತಮ ಪಂಚೆ, ಜರ್ಸಿ ತೊಟ್ಟು ಹೊರಬಿದ್ದ ನಂತರ ಬಿಕ್ಕಿ ಬಸವಳಿದ ಸಾಕಮ್ಮ ಇನ್ನು ಈ ಜನ್ಮವೆ ಸಾಕೆಂದು ತೀರ್ಮಾನಿಸಿದಳು.ಬಸವನ ಪ್ರೇಮದನುಡಿಗಳು ಬದುಕಿಸುವ ಆಸೆ ತೋರಿಸಿದರೂ ಅವನಿಗೆ ಮುಂದೆ ಸಿಗಬಹುದಾದ ಕೆಲ್ಸಕ್ಕೆ ತೊಂದರೆ ಯಾದೀತೆಂಬ ಯೋಚನೆ ಹಿಮ್ಮೆಟ್ಟಿಸಿತು. ಜೊತೆಯಲ್ಲಿ ಪುರುಷೋತ್ತಮನು ಕಾಮ ರೂಪಿ ರಾಕ್ಷಸನಾಗಿ ಕಂಡ. ಅವನಂತೂ ಬಿಡಲಾರದ ಭೂತ.ಅವನಿಗೆ ಸೋಲುವುದಕ್ಕಿಂತ ಸಾವೇ ಮೇಲು. ಅಷ್ಟಗೋಡೆ ಮೇಲಿನ ಮುರುಕಲು ಟ್ರಂಕ್ ಕೆಳಗಿಳಿಸಿದಳು. ಮಾನ ಮುಚ್ಚುವ ವಸ್ತ್ರ ಕೊರಳ ಬಿಗಿವ ಅಸ್ತ್ರವಾಯಿತು. ಮದುವೆಗೆ ಮುಂಚೆ ಗುಡಿಸಲಿಗೆ ಹಾಕಿಸಿದ್ದ ಹೊಸ ಬಿದಿರು ಹೆಣ ತೂಗಲು ಆಸರೆಯಾಯಿತು. ಕೊರಳಿಗೆ ಉರುಳಿನ ಮಾಲೆ ಹಾಕಿಕೊಂಡು ಅಡಿಯಲ್ಲಿದ್ದ ಟ್ರಂಕಿನಿಂದ ಜಿಮ್ಮಿದಳು. ನಾಲಿಗೆ ಹೊರ ಚಾಚು

ವುದರೆ ಇಂದಿಗೆ ಪ್ರಾಣ ಪಕ್ಷಿ ಸಂತೋಷದಿಂದ ದೇಹದಿಂದ ಹೊರ ಹಾರಿತು.

O O O

ಪುರುಷೋತ್ತಮನನ್ನು ಬೆಳಿಗ್ಗೆ ಎಂಟು ಗಂಟೆಗೆ ಹುಡುಕಿಕೊಂಡು ಬಂದ ಬಸವನು ದುಃಖಿಸಿ ತನ್ನ ಕಳೆ ಹೀನವಾದ ಮುಖ ತಗ್ಗಿಸಿ ಕುಳಿತಿದ್ದ. ತನ್ನ ರೂಮಿಗೆ ಸ್ನಾನ ಮಾಡಿ ತಲೆ ಕೊಡವಿಕೊಳ್ಳುತ್ತ ಬಂದು "ಏನೋ ಬಸ್ವ ಇಷ್ಟೊತ್ತಿಗೆ ಬಂದ್ಬಿಟ್ಟೆ?" ಕೇಳಿದ.

ತಲೆ ಎತ್ತಿ ಸ್ವಲ್ಪ ಹೊತ್ತು ಮುಖನೋಡಿ ಮನಸ್ಸು ಕಲ್ಲಾಗಿಸಿ"ಅವತ್ತು ನಾನು ಮದುವೆ ಆಗ್ತೀನಿ ಅಂದಿದ್ದೆನಲ್ಲ, ಅವ್ಳು ಹೋಗ್ಬಿಟ್ಲು ಕಣೋ" ಕಣ್ಣಲ್ಲಿ ನೀರಾಡಿತು.

"ಹೋಗ್ಬಿಟ್ಲು? ಎಲ್ಲಿಗೆ? ಹೋದ್ರೆ ಬರ್ತಾಳೆ ಬಿಡು"ಎನ್ನುತ್ತ ಅವನ ಒಲ ಪಕ್ಕಕ್ಕೆ ಕುಳಿತ.

"ಅವ್ಳು ಮತ್ತೆ ಬರೋ ಆಗಿಲ್ಲ ಕಣೋ, ಸತ್ಹೋದ್ಲು " ಎಂದು ಮುಖ ಮುಚ್ಚಿಕೊಂಡ.

"ಸತೋದ್ಲು? ಯಾಕೆ?" ಆಶ್ಚರ್ಯ,ಪ್ರಶ್ನಾರ್ಥಕ ಒಮ್ಮೆಲೆ ವ್ಯಕ್ತಪಡಿಸಿ ಕೇಳಿದ ಬಸವನು ಇಲ್ಲಿಗೇ ಬಂದಿದ್ದರಿಂದ'ಆಕೆ ಸಾಯುವವಳು ನನ್ನನ್ನೇನಾದ್ರೂ ಸಿಕ್ಕಿಸಿದ್ದಾಳೆಯೊ ಎಂದು ಕಳವಳಗೊಂಡ.

"ಯಾಕಂತೆ ಗೊತ್ತಿಲ್ಲ.ನೇಣು ಹಾಕ್ಕೊಂಡಿದ್ದಾಳೆ. ಅದ್ನ ನೋಡೊಕಾಗ್ದೆ ಬಂದೆ. ಜನಗಳೇನೊ ಯಾವನ್ನೋ ಕಟ್ಕೊಂಡು ಹೆಚ್ಚು ಕಮ್ಮಿ ಆಗಿರ್ಬೇಕು ಅಂತಾರೆ, ಆದ್ರೆ ನನ್ ಮನ್ಸು ಒಪ್ಪಿಲ್ಲ ಕಣೋ. ನಿಜವಾಗಿ ಆಕೆ ಅಂತವ್ಳಲ್ಲ. ಅವ್ಳ ಕಷ್ಟ ಏನಿತ್ತೋ ಏನೋ ಯಾರೂ ಅವನ್ನ ಯೋಚ್ನೆ ಮಾಡೋಲ್ಲ. ಆಕೆಗೆ ಏನೇನೊ ಅಂದು ನಾಲಿಗೆ ತೀಟೆ ತೀರಿಸ್ಕೊಳ್ತಿದ್ದಾರೆ. ನಾನು ಬಹಳ ಆಸೆ ಇಟ್ಕೊಂಡಿದ್ದೆ ಕಣೋ..." ಕಣ್ತುಂಬಿದ ನೀರನ್ನು ರೆಪ್ಪೆ ಪಟಪಟನೆ ಬಡಿದ ಇಂಗಿಸಿದ.

"ಪಾಪ ಸಾಯ್ಬೊರ್ದಿತ್ತು. ಜನಗಳ ಬಾಯಿನೆ ಹಾಗೆ, ನಿನ್ನನ್ನಾದ್ರೂ ಆಕೆ ಅರ್ಥ ಮಾಡ್ಕೋಳೋದು ಬೇಡ್ವ? ಹೋಗ್ಲಿ ಬಿಡು ಸುಮ್ನೆ ಸಾಯ್ಲಿಕ್ಕೆ ಅವ್ಳಿಗೇನು ಹುಚ್ಚಾ? ಗಂಡಿಲ್ಲದ್ದಕ್ಕೆ, ತಾರುಣ್ಯದ ಅಮಲಿನಲ್ಲಿ ತಾನು ಮಾಡೋದೆಲ್ಲ ಸರಿ ಅದ್ಕೊಂಡು ಏನೇನು ಆಟ ಆಡಿದ್ಲೋ ? ಏನೋ ಹೆಚ್ಚು ಕಡಿಮೆ ಆಗಿರ್ಬೇಕು. ಇಲ್ದಿದ್ರೆ ನೀನು ಪ್ರೀತಿ ಮಾಡ್ತೀಯ ಅನ್ನೋದು ಗೊತ್ತಿದ್ದೂ, ಮದುವೆಯಾಗ್ತೀನಿಯಂತ ಹೇಳಿದ್ರೂ ಯಾಕಪ್ಪ ಸಾಯ್ಬೇಕಿತ್ತು? ಹೋಗ್ಲಿ ಯೋಚ್ನೆ ಬಿಟ್ಬಿಡು ಅವ್ಳಂತವ್ರು ಬೇಕಾದಷ್ಟು ಜನ ಸಿಗ್ತಾರೆ, ನಾವು ಸರಿಯಾಗಿದ್ರೆ. ನೀನಾದ್ರೂ ಯಾಕೆ ಇಲ್ಲಿಗೆ ಬರ್ಲಿಕ್ಕೆ ಹೋದೆ? ಪೋಲಿಸ್ನೋರು ಯಾರಾದ್ರೂ ಬಂದಿದ್ರೆ, ಈ ಟೈಮ್‌ನಲ್ಲಿ ಹತ್ತಿರವಿರ ಬೇಕಾದ ನೀನೇ ನಾಪತ್ತೆಯಾಗಿದ್ರೆ ನಿನ್ನ ಮೇಲೆ ಆ ಅಪವಾದ ಹೊರಿಸ್ಬಹುದು. ಹೋಗು ನೀನು ಜೈಲಿಗೆ ಹೋಗುವ ಪರಿಸ್ಥಿತಿ ಬರ್ಬಾರ್ದು. ತ್ಚು ಬಡಪರು ಬದುಕ್ಲಿ ಅಂತ ಏನೆಲ್ಲ ಸಹಾಯ ಮಾಡ್ದೆ. ಆ ದೇವರು ಅನುಭವಿಸ್ಲಿಕ್ಕೆ ಅವಕಾಶ ಕೊಡ್ದೆ ನನ್ನ ಕಾರ್ಯವನ್ನೇ ವ್ಯರ್ಥಮಾಡ್ಬಿಟ್ಟ. ಏನ್ಮಾಡ್ಲಿಕ್ಕಾಗುತ್ತೆ? ಎಲ್ಲ ಹಣೆ ಬರಹ" ಎಂದು ನಿಟ್ಟುಸಿರು ಬಿಟ್ಟು,' ತಾನು ನಿರ್ದೋಷಿ' ಎಂದು ಕಾಣಲು ಪ್ರಯತ್ನಿಸಿದ.

ಪುರುಷೋತ್ತಮನು ತರ್ಕಬದ್ಧವಾಗಿ ನುಡಿದು ತನ್ನಲ್ಲಿ ಕನಿಕರವಿರುವುದೆಂದು ತೋರಿಸಲು ತಾನು ದುಃಖಿಸುವಂತೆ ನಟಿಸಿದ. ಸ್ವಲ್ಪ ಹೊತ್ತು ಬಸವನೂ ಮೌನವಾಗಿ ಕುಳಿತಿದ್ದ. ಪುರುಷೋತ್ತಮನ ತಲೆಯ ಒಳಗೆ ಏನೋ ಮಿಂಚಿತು. ಸಣ್ಣ ಕಣ್ಣುಗಳು ತೀಕ್ಷ್ಣ ವಾಗಿ ಹೊಳೆದವು. ತಾನೇ ಮುಂದುವರಿಸಿದ "ನನಗೆ ಸ್ವಲ್ಪ ಸಂಶಯ ಬರ್ತಿದೆ ಬಸವ..." ಎಂದ ಶಂಕೆಯಿಂದಲೆ.

ವೇದನೆಯ ಮುಖ ಎತ್ತಿ "ಏನು?" ಕೇಳಿದ.

"ಬೇಜಾರು ಮಾಡ್ಕೋ ಬೇಡ ಹೀಗೇಳ್ತಿನಿಯಂತ .." ಪೀಠಿಕೆ ಹಾಕಿದ.

"ಏನೇಳೊ ...?" ದುಃಖದ ಶಮನಕ್ಕೆ ಪರಿಹಾರ ಬಯಸಿ ತೆರೆದ ಹೃದಯ ದಿಂದ ಕೇಳಿದ.

"ಬೇಜಾರು ಆಗಲ್ಲ ತಾನೆ?"

"ಇಲ್ಲ"

ಸಂಪೂರ್ಣ ಭರವಸೆ ಪಡೆದು "ನೀನೆ ಏನಾದ್ರೂ ಪ್ರೇಮ ಪ್ರೀತಿ ಅಂತ ಹೇಳಿ ಮದುವೆನೂ ಆಗ್ತೀನಿಯಂತ ನಂಬಿಸಿ, ಏನಾದ್ರೂ ಮಾಡಿದ್ದೆಯೇನು?" ಮುಚ್ಚು ಮರೆ ಇಲ್ಲದೆ ನೇರವಾಗಿ ಕೇಳಿದ, ಹಾಗೇನಾದರೂ ಮಾಡಿದ್ದಲ್ಲಿ ಗುಟ್ಟನ್ನು ಹೊರ ತೆಗೆಯಲು ಸಮರ್ಪಕ ಪ್ರಶ್ನೆಯಾಗಿತ್ತು. ಬಸವನನ್ನೂ ಸಿಲುಕಿಸುವ ಚಿಂತೆ ಮೂಡಿತು.

ಬಸವನಿಗೆ ಹೃದಯಾಘಾತವೇ ಆಯಿತು. ಅಪ್ಪ ಸತ್ತಿದ್ದಲ್ಲದೆ ತನ್ನ ಮೇಲೇ ಅಪವಾದ ಹೊರಿಸುವಂತೆ ಕಂಡಳು."ಏನಲೋ ಪುರುಷೋತ್ತಮ ನನ್ಮೇಲೆ ಅಷ್ಟೊಂದು ಅನುಮಾನ ಏನೋ?" ವ್ಯಸನದಿಂದ ನೊಂದು ಕೇಳಿದ.

"ಛೆ.. ಛೆ ..ನಿನ್ನ ಮೇಲೇನೋ ನಂಬಿಕೆ ಖಂಡಿತವಾಗಿಯೂ ನನಗಿದೆ. ಆದ್ರೆ ಈ ವಯಸ್ನಲ್ಲಿ ಮಾತ್ರ ನಂಬಿಕೆ ಇಲ್ಲ ಅಂತ ಹೇಳ್ತಾಳೆ" ಎಂದು ಅವನ ಮೇಲೆ ಮತ್ತಷ್ಟು ಒತ್ತಡ ಹೇರಿದ.

"ನಿನ್ನತ್ರ ಮುಚ್ಚುಮರೆ ಏನು? ಆದ್ರೆ ಒಂದ್ಸಾರಿ ಮಾತ್ರ..." ನಿಲ್ಲಿಸಿ ಮುಖ ನೋಡಿದ.

"ಹುಂ... ಏನಾದ್ದೆ ಹೇಳು?" ಆತುರ ಪಡಿಸಿದ. ತಾನು ಸಿಕ್ಕಿ ಹಾಕಿಕೊಂಡರೆ ತಪ್ಪಿಸಿಕೊಂಡು ಬಸವನನ್ನು ಸಿಕ್ಕಿಸಲು ಒಂದು ಚಿಕ್ಕ ಕಾರಣ ಬೇಕಾಗಿತಷ್ಟೆ.

"ಯಾರೂ ಇಲ್ದಾಗ ಒಮ್ಮೆ ಕಿಸ್ ಕೊಟ್ಟಿದ್ದೆ ಅಷ್ಟೆ ಕಣೊ..."

"ಹೋಗ್ಲಿ ಬಿಡು.ಬರೀ ಕಿಸ್ ಆದ್ರೂ ಕೊಡು,ಬೇರೆ ಏನಾದ್ರೂ ಆಗಿರ್ಲಿ ಮೊದಲು ಬಚಾವ್ ಆಗೋದು ನೋಡು. ಹೋಗು ಸಮಾಧಾನ ಮಾಡ್ಕೊ" ಎಂದು ಬಸವನಿಗೆ ಅಪವಾದದ ಅರ್ಧ ಭಾರ ಹೊರಿಸಿಯೇ ಬಿಟ್ಟ,

ಬಸವರಾಜನಿಗೂ ಸಧ್ಯಕ್ಕೆ ಅದೇ ಬೇಕಾಗಿತ್ತು.ಮುಖ ಹೊರೆಸಿಕೊಳ್ಳುತ್ತ ಎದ್ದು ಹೊರಟ,ಅವನತ್ತ ಹೋಗುತಿದ್ದಂತೆ ರಾತ್ರಿ ಆಕೆ'ಪದೆಪದೆ ಬರ್ಬೇಡಿ'ಎಂದು ಕಾಲಿಡಿದು ಕೇಳಿ ಕೊಂಡದ್ದು ನೆನೆದ, ಅವಳ ಸಾವಿಗೆ ತಾನೇ ಕಾರಣವೆಂಬ ಭಯದಿಂದ ನೆಕೆಯಾ ಯಿತು. ಸಿಗರೇಟ್ ಹಚ್ಚಿ ಪಕಪಕ ಹೊಗೆ ಬಿಟ್ಟು ಹೃದಯದ ಬಡಿತವನ್ನು ಹಿಡಿತದಲ್ಲಿ

ಡಲು ಯತ್ನಿಸಿದ.

೧೩

ಹೊರಗಡೆ ರಾಜು "ಅಮ್ಮಾ ಕಾಲೇಜಿಗೆ ಟೈಮಾಯ್ತು ಹೋಗ್ಬರ್ತೀನಿ" ಎಂದು ಗಟ್ಟಿಯಾಗಿ ನಾಲ್ಕಾರು ಬಾರಿ ಕೂಗಿ ಲಕ್ಷ್ಮಿಯನ್ನು ಜಾಗೃತಗೊಳಿಸಿದ. ಲಕ್ಷ್ಮಿಗೆ ಸೀರೆ ಪ್ರಿಯವಾದಂತೆ ಬೇರೆ ಬಟ್ಟೆಗಳಲ್ಲಿ ಆಸಕ್ತಿ ಕಡಿಮೆಯಾಯಿತು. ಆಕಾಶ ನೀಲಿ ಬಣ್ಣದ ಸೀರೆ ತೊಟ್ಟು ಟೈಮ್ ಟೇಬಲ್ ನೋಡುತ್ತ ಆಯಾ ವಿಷಯುಗಳ ನೋಟ್ ಬುಕ್ ತೆಗೆದು ಬ್ಯಾಗಲ್ಲಿ ಇಡುತಿದ್ದಳು. ರಘುವಿನ ಆಗಮನದಿಂದ ಮನೆಯಲ್ಲಿರಲು ಬೇಸರ. ಬೇಸರ ಕಳೆಯಲು ಪ್ರೇಮಿಯನ್ನು ಕಂಡು ಮಾತನಾಡಲು ಅವಕಾಶ ವಿಲ್ಲವಂತೆ ತಾಯಿಯ ಅಡ್ಡಗಾಲು. ನಿರುತ್ಸಾಹದಲ್ಲಿರುವಂತೆಯೆ ಓಂದಿನಿಂದ ರಘು "ಹಾಯ್ ಲಕ್ಷ್ಮಿ ಕಾಲೇಜಿಗೆ ಹೊರಡ್ತಿದ್ದೀಯೇನು? ಆಗಾದ್ರೆ ನಿನ್ ಜೊತೆಗೆ ಸಿನಿಮಾ ನೋಡೊ ಭಾಗ್ಯ ಇಲ್ಲ ಎಂದಾಗಾಯ್ತು?" ತುಂಟತನದಿಂದ ನುಡಿದ.

ರಂಗಾದ ಲಕ್ಷ್ಮಿ "ನನಗೆ ಪಿಕ್ಚರ್ ನೋಡಿ ಅಬ್ಯಾಸ ಇಲ್ರಿ ಐ ಎಫೆಕ್ಟ್ ಇದೆ" ತಪ್ಪಿಸಿ ಕೊಳ್ಳಲು ಹವಣಿಸಿದಳು,

"ಏನು? ನಿನಗೂ ಐ ಎಫೆಕ್ಟ್ ಇದೆಯಾ?ನಾನಾಗ್ಲೆ ಲ್ಯಾಂಪ್ ಹಾಕ್ತೀನಿ.ನೀನು ಹಾಕಿದ್ರೆ. ನಮ್ಮ ಮಕ್ಕಳಿಗೂ ಹುಟ್ಟಿದ್ದಾಗೆ ಕನ್ನಡಕ ಹಾಕ್ಬೇಕಾಗುತ್ತೆ" ಎಂದು ನಗುವಿನಲ್ಲಿ ನುಡಿದ ರಘು.

ರೋಷದಿಂದ ತಲೆ ಎತ್ತಿ ಉರಿ ಕಂಗಳು ಬಿಟ್ಟು ಆವೇಶದಿಂದ "ರೀ ರಘು... ಇಂತಹ ಮಾತೆಲ್ಲ ನನಗೆ ಇಷ್ಟೊಲ್ಲ. ಇನ್ನೊಂದ್ಸಾರಿ ಹೀಗೆ ಮಾತ್ನಾಡಿರಾ..." ಭರ್ತ್ಸನೆಯಿಂದ ಎಚ್ಚರಿಸಿದಳು.

"ಸರಿ ನಿಮಗೆ ಇಂತಹದು ಇಷ್ಟ ಅನ್ನಿ. ನಾನು ಅವನ್ನು ಬಿಟ್ಟು ಬೇರೆ ಮಾತು ಆಡೊಲ್ಲ" ಶಾಂತವಾಗಿ ಜಾರಿದ ಕನ್ನಡಕ ಏರಿಸುತ್ತ ನುಡಿದ.

"ನಮ್ಮಿಬ್ಬರ ಸಂಬಂಧದ ವಿಷಯ ಬಿಟ್ಟು ಬೇರೆ ಏನಾದ್ರೂ—" ಎಂದಳು.

"ಸರಿ ಸಿನಿಮಾಕೆ ಬರಲ್ಲ ಎಂದ್ರಿ. ಬೀಚ್‌ಗಾದ್ರೂ ಕರ್ಕೊಂಡು ಹೋಗ್ತೀರಾ?"

"ಅಯ್ಯೋ ನನಗೆ ಸಮುದ್ರದ ಗಾಳಿ ಅಂದ್ರೆ ಆಗದು ಜ್ವರ ಬಂದ್ಬಿಡುತ್ತೆ.ನಾನು ನೋಡೇ ಎಷ್ಟೊ ವರ್ಷಗಳಾದ್ವು ." ಅಸಹನೆಯಿಂದ ನುಡಿದಳು. 'ತಾನು. ತನ್ನ ಇನಿಯ ಸುಳಿದಾಡಿರುವ ಜಾಗದಲ್ಲಿ ಇವನೇಕೆ? ಅಧಿಕ ಪ್ರಸಂಗಿ' ಎಂದು ಉಲಿಯಿತ ವಳ ಮನ.

"ಸರಿ ನಿನ್ನಿಷ್ಟ" ಸೋತ ರಘು ಅಲ್ಲಿಂದ ನಡೆದ.

ರಘುವಿನಿಂದ ಬಿಡುಗಡೆ ಹೊಂದಿ ಸಮಾಧಾನದ ನಿಟ್ಟುಸಿರು ಹಾಕಿ,ರೂಮಿನಿಂದ ಹೊರ ಬಂದು "ಮಮ್ಮಿ ಕಾಲೇಜಿಗೆ ಹೋಗ್ಬರ್ತೀನಿ" ತಲೆತಗ್ಗಿಸಿ ಕೆಲಸದಲ್ಲಿ ತೊಡಗಿದ್ದ ಸಾವಿತ್ರಿ ತಲೆ ಎತ್ತಿ ದುರುಗುಟ್ಟಿ ನೋಡಿದಳು. ತಾಯಿಗೆ ಇಷ್ಟವಿಲ್ಲವೆಂಬುದನ್ನು ಗುರ್ತಿಸಿ 'ತಾನು ಹೇಳಿದ್ದಾಗಿಗೆ ಹೋದರಾಯ್ತು' ಎಂದು ತಿರುಗುತಿದ್ದಂತೆ "ನಿಲ್ಲೆ ಲಕ್ಷ್ಮಿ!" ಗುಡುಗಿದಳು ತಾಯಿ.

ಲಕ್ಷ್ಮಿಯ ಮುಖ ಪೆಚ್ಚಾಯಿತು.ಬಾಡಿದ ಮುಖದಿಂದ"ಯಾಕ್‌ಮಮ್ಮಿಹೀಗ್ಮಾಡ್ತೀಯಾ? ಎರಡು ದಿನ ಆಗಲೇ ಕಾಲೇಜು ತಪ್ಪಿದೆ.ಮನೆಯಲ್ಲಿದ್ದು ಏನ್ಮಾಡೋದು? ಅಲ್ಲಿ ಪಾಠನೂ ಹಾಳು" ಧೈರ್ಯ ತಂದುಕೊಂಡು ತಾಯಿಯನ್ನೂ ಎದುರಿಸಿದಳು.

"ನೀನು ಕಾಲೇಜಿಗೆ ಹೋಗಿ ಹಾಳಾಗಿರೋದು ಸಾಕು. ಮನೆಯಲ್ಲಿಯೆ ಇದ್ದು ರಘು ಇಗೆ ಬೇಜಾರು ಆಗ್ದಾಗೆ ಮಾತ್ನಾಡ್ತಿರು. ಮುಂದೆ ಅವ್ನ ಮದುವೆಯಾಗ್ಬೇಕಾದೋಳು. ನೀನು ಓದೋದು ಬೇಕಿಲ್ಲ" ಎಂದಳು.

"ಆಗ್ದಿದ್ರೆ?"ತಾನೂ ಕೆರಳಿ ಪ್ರಶ್ನಿಸಿದಳು.ತಾಯಿಯ ಅತಿ ಹರಮಾರಿತನ ಲಕ್ಷ್ಮಿಯ ತಾಳ್ಮೆಯನ್ನು ಕೆಣಕಿತು.

"ನಾನು ನಿನ್ನ ತಾಯಿ. ಕೈ ಕಾಲು ಕಟ್ಟಿ ಮದ್ವೆ ಮಾಡ್ತಿವಿ. ಹಾಳಾದೋಳಿಗೆ ಮದುವೆನೆ ಬೇಡಂತೆ .." ಅಪಹಾಸ್ಯ ಮಾಡುವಂತೆ ನುಡಿದು ತನ್ನ ಕೆಲಸ ಮುಂದುವರಿಸಿದಳು.

ತಾಯಿಯನ್ನು ಎದುರಿಸಿ ಕಾಲೇಜಿಗೆ ಹೋಗಲು ಧೈರ್ಯವಿಲ್ಲದೆ, ಕೂಗಿ ಹೋದ ರಾಜುವನ್ನು ಭೇಟಿಯಾಗಿ ವಿಚಾರ ತಿಳಿಸಲು ಸಾಧ್ಯವಾಗದೆ ಉಭಯ ಸಂಕಟಕ್ಕೆ ಸಿಲುಕಿ, ತನ್ನ ರೂಮಿಗೆ ಹೋಗಿ ಬ್ಯಾಗ್ ಕಿತ್ತೆಸೆದು ಮೌನವಾಗಿ ರೋಧಿಸಿದಳು.

ಹನ್ನೆರಡರ ರಣರಣ ಬಿಸಿಲಿನಲ್ಲಿ ಕಾಯುತ್ತ ನಿಂತಿದ್ದ ರಾಜು ಖಾಲಿ ರಸ್ತೆಯನ್ನು ನೋಡಿ ಬೆಂಕಿಯಾದ 'ಇನ್ನು ಅವಳು ಬರುವ ಸಮಯ ಮೀರಿತೆಂದು. ಲಕ್ಷ್ಮಿಯ ಮೇಲಿನ ಕೋಪವಲ್ಲದಿದ್ದರು ಅವಳು ಬಾರದಿದ್ದದ್ದು ಬೇಸರವಾಗಿ, ಕೋಪ ತಡೆಯ ಕೊಳ್ಳಲು ಬೇರೆ ಮಾರ್ಗವಿಲ್ಲದೆ ಸಿಟ್ಟಿನಿಂದ ಕೈಯಲ್ಲಿದ್ದ ನೋಟ್‌ಬುಕ್ ಶಕ್ತಿಮೀರಿ ದೂರಕ್ಕೆ ಎಸೆದು ದುಡುದುಡು ಮನೆಯ ಕಡೆ ನಡೆದ.

ರಘು ಸಂಜೆಯಾಗುತಿದ್ದಂತೆ ಅಡ್ಡಾಡಿಕೊಂಡು ಬರಲು ಹೊರಟಿದ್ದ. ತಾಯಿ ಮಗಳ ಸಂಭಾಷಣೆಯಿಂದ ದೂರ ಇರಲು ಸಾಕಷ್ಟು ಪ್ರಯತ್ನಿಸುತಿದ್ದ. ಸರಿಯಾಗಿ ತಲೆ ಬಾಚಿಕೊಂಡು,ನೀಳ್ಗನ್ನಡಿಯ ಮುಂದೆ ನಿಂತು ಹಾಡು ಗುನುಗುತ್ತ ಇನ್‌ಷರ್ಟ್ ಸರಿಯಾಗಿದೆಯೆಂದು ನೋಡಿಕೊಂಡು, ಕನ್ನಡಕ ಮುಖಕ್ಕೆ ಸಾಕಷ್ಟು ಮೋಹಕವಾಗಿ ಕಾಣುವಂತೆ ಹೊಂದಿಸುತಿದ್ದ. ಅಲ್ಲಿಗೆ ಬಂದ ಸಾವಿತ್ರಿ "ರಘು ಎಲ್ಲಿಗೊ?" ಕೇಳಿದಳು.

"ಸುಮ್ನೆ ಕುಳಿತ್ಕೊಂಡು ಏನ್ಮಾಡೋದು ಅಕ್ಕ? ಪೇಟೆನಾದ್ರೂ ಸುತ್ತಾಡಿ ಬರ್‍ತೀನಿ"ಎಂದ.

"ನೀನೊಬ್ನೇ ಹೋಗ್ಬೇಡ ಇರು ಲಕ್ಷ್ಮಿನೂ ಕಳಿಸ್ತೀನಿ" ಎಂದು ತಿರುಗುತಿದ್ದಂತೆ "ಅಕ್ಕಾ..." ಎಂದು ಕರೆದ.

"ಹುಂ...?" ಹಿಂತಿರುಗಿ ಪ್ರಶ್ನಿಸಿದಳು.

"ಲಕ್ಷ್ಮಿಗೆ ಬಹಳ ಒತ್ತಾಯ ಮಾಡ್ಬೇಡಕ್ಕ.ಇಷ್ಟ ಪಟ್ಟು ಬಂದ್ರೆ ಸರಿ.ಇಲ್ದಿದೆ ಪ್ರೀತಿಗೆ ಬದ್ಲಾಗಿ ದ್ವೇಷಿಸ್ತಾಳೆ" ತನ್ನ ಸಂಭಾವಿತ ಮನೋಭಾವನೆಗೆ ತಕ್ಕಂತೆ ನುಡಿದ.

"ಅಲ್ವೋ ರಘು ಅತೀ ಪ್ರೇಮಿಸೋರು, ಪ್ರೀತಿನಾ ದ್ವೇಷದ ಮೂಲಕನೇ ಯಂತೆ ವ್ಯಕ್ತಪಡಿಸೋದು. ಅವಳ ಗುಣ ನನಗೊತ್ತಿಲ್ವಾ? ಕೂತಿರು ಕಳಿಸ್ತೀನಿ. ಬರ್‍ದೆ ಏನು?" ಎನ್ನುತ್ತ ಮಗಳ ಕೋಣೆಗೆ ನಡೆದಳು.

ಕಾಲೇಜಿನ ಯೋಚನೆ ಬಿಟ್ಟು, ಊಟದ ಪ್ರಮಾಣ ಹೆಚ್ಚಿಸಿದ್ದರಿಂದಲೂ ಸಾಕಷ್ಟು ನಿದ್ರೆ ಮಾಡಿದ್ದಳು. ಸಾಯಂಕಾಲ ಐದಾಗುವಷ್ಟರಲ್ಲಿ ಎಚ್ಚರವಾಗಿಯೇ ಅಂಗಾತಳಾಗಿ ಮಲಗಿ ಚಿಂತಿಸತೊಡಗಿದಳು. "ಎರಡು ದಿನಗಳಿಂದ ರಾಜನ ಮುಖ ದರ್ಶನವಿಲ್ಲ ಇದರಿಂದ ಅವ್ನೇನು ಭಾವಿಸಿಕೊಳ್ತಾನೋ ಏನೋ? ಹೇಗಾದ್ರೂ ಎರಡು ನಿಮಿಷದ ಭೇಟಿಯಷ್ಟು ಅವಕಾಶ ಸಿಕ್ಕಿದರೆ ಸಾಕು. ವಿಷಯವೆಲ್ಲ ಹೇಳ್ಬಹುದು. ಆಲೋಚನೆಗೆ ಕಡಿವಾಣ ಹಾಕುವಂತೆ ಧಿಡೀರನೆ ಬಾಗಿಲಿನಲ್ಲಿ ಪ್ರತ್ಯಕ್ಷಳಾದ ತಾಯಿಯನ್ನು ಇಷ್ಟ ವಿಲ್ಲದೆ ನೋಡಿ ನೋಟ ಬದಲಿಸಿದಳು.

"ಲಕ್ಷ್ಮಿ ಏಳಿಲ್ಲಿ ನಿನಗೊಂದು ಮಾತು" ವಾತ್ಸಲ್ಯ ಲೇಪಿತ ಅಧಿಕಾರದ ಮಾತನ್ನು ಗುರ್ತಿಸಿದ ಲಕ್ಷ್ಮಿ ಮಲಗಿಯೆ "ಏನು?" ಪ್ರಶ್ನಿಸಿದಳು.

"ಮೇಲೇಳು ಹೇಳ್ತೀನಿ"

ಹಠಸಾಧಿಸಿ ಪ್ರಯೋಜನವಿಲ್ಲವೆಂದು ಗ್ರಹಿಸಿ, ಮಂಚದಿಂದ ಇಳಿದು "ಹೂಂ... ಏನೇಳು ಮಮ್ಮಿ. ನಾಳೆಗಾದ್ರು ಕಾಲೇಜಿಗೆ ಹೋಗ್ಬಹುದಲ್ಲ?" ಕೇಳಿದಳು.

"ಹೋಗುವಂತೆ, ಮೊದ್ಲು ಈಗ ರೆಡಿಯಾಗು"

"ಎಲ್ಲಿಗೆ?"

"ರಘು ಪೇಟೆಗೆ ಹೊರಟು ಕಾಯುತ್ತಿದ್ದಾನೆ. ತಕ್ಷಣ ತಲೆ ಹರಟೆ ಮಾಡದೆ ಹೊರಡು"

"ನನಗೆ ಇಷ್ಟ ಇಲ್ಲಾಂತ ಎಷ್ಟು ಸಾರಿ ಹೇಳ್ಬೇಕು ಮಮ್ಮಿ" ವಿರುದ್ಧ ದಿಕ್ಕಿಗೆ ತಿರುಗಿ ಬೆರಳುಗಳಿಂದ ಲಟಿಕೆ ತೆಗೆಯಲಾರಂಭಿಸಿದಳು.

"ನಿನಗೆ ಏನೇ ಇಷ್ಟವಿಲ್ದಿರೋದು ?ಅವ್ನಿಗೇನು ಅಂದವಿಲ್ವ?ಚಂದ ಇಲ್ವ? ಇವ್ನನ್ನ ಬಿಟ್ರೆ ಇನ್ನಾರನ್ನ ಆಗ್ಬೇಕೂಂತ ಇದ್ದೀಯಾ . ? ನಿನಗಿರೋ ಚಂದಕ್ಕೆ, ಸ್ವಭಾವಕ್ಕೆ ಕೂಲಿಕೆಲಸಗಾರನೇ ಯೋಗ್ಯ ಅನ್ಸುತ್ತೆ"ತಾಯಿಯ ನುಡಿಹರಿತವಾಗಿತ್ತು

ಲಕ್ಷ್ಮಿಯ ಕಣ್ಣೀರು ತುಳುಕಲಿಲ್ಲ, ಪ್ರತಿಯಾಗಿ ತನ್ನಲೂ ವಿರೋಧಿಸುವ ಭಾವನೆ ಕೆರಳಿ ನಿಂತಿತು. ಏನೋ ಹೇಳಲು ಹೊರಟಿದ್ದ ನಾಲಿಗೆ. ಆಕೆ ಎಷ್ಟೇಯಾಗಲಿ ತಾಯಿ ಆ ಸ್ಥಾನವನ್ನು ಸ್ವತಃ ಅನ್ನಲು ಬಾರದೆ-ಸುಮ್ಮನಾದಳು,

"ನಾನು ಹೇಳ್ತಿರೋದು ಕೇಳೊಲ್ವೇನೆ? ಯಾವನಕ್ಷತ್ರದಲ್ಲಿ ಹುಟ್ಟಿದ್ದೆ ನೀನು?

ನೆಮ್ಮದಿಯಿಂದ ನಮಗೂ ಇರ್ಲಿಕ್ಕೆ ಬಿಡೋದಿಲ್ವಲ್ಲೆ. ಇನ್ನೂ ಈ ಮನೆಯಲ್ಲಿ ಏನೇನು ಮಾಡ್ಬೇಕೊಂತ ಇದ್ದೀಯಾ ..?"

"ಈಗ ನಾನಾದ್ರೂ ಏನ್ಮಾಡಿದ್ದೀನಿ ಮಮ್ಮಿ? ನಿಮಗೆ ನಾನು ಮನೆಯಲ್ಲಿ ರೋದ ಇಷ್ಟವಿಲ್ಲ ಎನ್ನಿ, ಬೇಕಾದ್ರೆ ಹೋಗ್ತೀನಿ" ಸಹನೆ ತಪ್ಪಿ ನುಡಿದಳು.

"ಓ.. ಹೋ... ಹೋಗ್ತಾಳಂತೆ. ಬಿಟ್ಬಿಡ್ತಾಳೆ ಅಂದ್ಕೊಂಡಾ? ಆ ಸನ್ಯಾಸಿನಿ ಹೇಳಿದ್ಲೇನು ಮನೆ ಬಿಟ್ಟು ಇಲ್ಲಿಗೇ ಬಾ ಅಂತ? ನಾವು ಹೇಳ್ದಂಗೆ ಕೇಳಿದ್ರೆ ನಿನಗೂ ನೆಮ್ಮದಿ, ನೀನು ಉಳ್ಕೊಂಡೆ. ಹಠ ಸಾಧಿಸಿ ಹಾಳಾಗ್ಬೇಡ. ಬೇಗ ಹೊರಡು" ಕ್ರೋಧ ಕಾರಿ ಅವಸರ ಪಡಿಸಿದಳು.

'ತಾಯಿಯಿಂದ ಮತ್ತಷ್ಟು ಈ ತರಹದ ಮಾತುಗಳನ್ನ ಕೇಳುವುದಕ್ಕಿಂತ ಸಧ್ಯದ ಪರಿಸ್ಥಿತಿಯಲ್ಲಿ ರಘುವಿನೊಂದಿಗೆ ಹೊರಡುವುದು ಉತ್ತಮ ಎನಿಸಿತು. ಜೊತೆಯಲ್ಲಿ ರಾಜನ ಪವಿತ್ರ ಪ್ರೇಮಕ್ಕೆ ದ್ರೋಹ ಬಗೆದಂತಾಗುತ್ತದೆ. ಅದು ಹೇಗೆ ಸಾಧ್ಯ? ಅವತ್ತು ನಮ್ಮಿಬ್ಬರ ಪ್ರೇಮದಶಕ್ತಿಯನ್ನು ನಾನೇ ವರ್ಣಿಸಿ ಹೇಳಿದ್ದೇನೆ. ಇದು ಕೇವಲ ಇತರರ ತೃಪ್ತಿಗಷ್ಟೆ' ಎಂದುಕೊಂಡು ಮುಖತೊಳೆದು, ಬೇಕಾ ಬಿಟ್ಟಿ ತಲೆ ಬಾಚಿಕೊಂಡು ಹೊರಟಳು.

"ರಘು ಬಂದ್ನಲ್ಲ ಕಣೋ ಸ್ವಲ್ಪ ಹೆಚ್ಚಿಗೆ ಸುತ್ತಾಡಿಸು" ಎಂದು ಹಿಂದಿನಿಂದಲೇ ಬರುತಿದ್ದ ಮಗಳಿಗೆ ಕೇಳದಂತೆ ಬಾಗಿ ಪಿಸುಗುಟ್ಟಿದಳು. ಸಂತೃಪ್ತನಾದ ರಘು ಸಂತೋ ದಿಂದ ತಲೆ ಅಲ್ಲಾಡಿಸಿ ಎದ್ದುನಿಂತು "ಹೋಗಿ ಬರೋಣ ಲಕ್ಷ್ಮಿ?" ಚೇತನ್ಯದಿಂದ ಕೇಳಿದ.

ಮುಖ ನೋಡಿ ನಿರುತ್ಸಾಹದಿಂದ ದೃಷ್ಟಿ ಬದಲಾಯಿಸಿದಳು. ರಘು ಹೇಳಿ ದಂತೆ ಮೌನವಾಗಿರುವುದು ಒಪ್ಪಿಗೆಯ ಸೂಚನೆಯೆ ಸರಿ ಎನಿಸಿತು. ಇಷ್ಟವಿಲ್ಲದೆ ಕಷ್ಟ ದಿಂದ ಗೇಟು ದಾಟಿ ಮುಂದೆ ನಡೆದರು. ರಘುವಿಗಂತೂ ಸ್ವರ್ಗ ಕೈಗೆಟುಕಿದಷ್ಟು ಸಂತೋಷ ವಾಗಿತ್ತು. ಬಲು ಚಟುವಟಿಕೆಯಿಂದ ನಡೆದಿದ್ದ. ಸಾವಿತ್ರಿ ಮಹತ್ಕಾರ್ಯ ಸಾಧಿಸಿದವಳಂತೆ ಪ್ರಫುಲ್ಲ ವದನದಿಂದ ನೋಡುತ್ತ ನಿಂತಳು.

ಬನಿಯನ್, ಪಂಚೆಧಾರಿಯಾದ ರಾಜು ತಾಯಿಯ ಆದೇಶದಂತೆ ಗಿಡಗಳಿಗೆ

ನೀರುಣಿಸುತ್ತಿದ್ದ. ಪ್ಲಾಸ್ಟಿಕ್ ಬಕೆಟ್‌ನಲ್ಲಿದ್ದ ನೀರನೆಲ್ಲ ದೊಡ್ಡ ಹೂವಿನ ಗಿಡದ ಪಾತಿಗೆ ಹೊಯ್ಯುತ್ತ ಬಳಿಯಲ್ಲಿದ್ದ ತಾಯಿಗೆ "ಅಮ್ಮಾ ನಾನು ಎಂದಾದ್ರೂ ಗಿಡಗಳಿಗೆ ನೀರಾಕಿದವನ?" ತಾನೇ ಕೇಳಿದ.

"ಇಲ್ಲಪ್ಪ. ಇತ್ತೀಚೆಗೆ ಯಾಕೋ ನಿನಗಾಗುಣ ಬಂತು" ಎನ್ನುತ್ತಿದ್ದಂತೆ "ಹ್ಞಾ... ನೋಡು ಅವೆಲ್ಲ ಸನ್ಯಾಸಿ ಆದೆನಲ್ಲ ಅವರ ಪ್ರಭಾವ ಕಣಮ್ಮ" ಎಂದು ಬಕೆಟ್‌ನಲ್ಲಿದ್ದ ನೀರನ್ನೆಲ್ಲ ಬಸಿದು ನೇರವಾಗಿ ಎದ್ದು ನಿಂತ. ರಸ್ತೆಯಲ್ಲಿ ಹೋಗುತ್ತಿದ್ದ ಜೋಡಿಯ ದೃಶ್ಯ ಕಣ್ಣಿಗೆ ಕುಕ್ಕಿತು. ವಿಷ ಸರ್ಪ ಮೊನಚಾದ ಹಲ್ಲಿನಿಂದ ಸೂಕ್ಷ್ಮ ಭಾಗವನ್ನೇ ಕಿತ್ತಂತಾಯಿತು, ಇನ್ನಷ್ಟು ಮುಂದೆ ಹೋದ ಲಕ್ಷ್ಮಿ, ರಾಜನ ಮನೆಯ ಕಡೆ ನೋಡಿದಳು. ನೋಟದಲ್ಲಿ ನೋವು ತುಂಬಿತ್ತು. ಸನ್ನೆಯನ್ನೂ ಮಾಡಲಿಲ್ಲ. ಅತ್ಯಂತ ಕುಪಿತನಾದ ರಾಜ ಏನೂ ಮಾಡಲು ತೋಚದೆ ರೋಷದಿಂದ ಕೈಯಲ್ಲಿದ್ದ ಬಕೆಟ್‌ನ್ನು ಸಿಮೆಂಟ್ ಹಾದಿಗೆ ಬಾರಿಸಿದ.

ಕರ್ಣ ಕಠೋರ ಸದ್ದಿಗೆ ಬೆದರಿದ ಮಂಜಮ್ಮ ಏದುಸಿರು ಬಿಡುತ್ತ ತಿರುಗಿ "ಯಾಕೋ ಪಾಪು ಏನಾಯ್ತೊ?" ಮುಖ ನೋಡಿದರು. ಮಗ ಕೊತ, ಕೊತ ಕುದಿಯುತ್ತಿದ್ದ. ಕಂಗಳು ಕೆಂಡದ ಉಂಡೆಯಾಗಿದ್ದವು. ಅವನ ಬಲಗೈನಲ್ಲಿದ್ದ ನೀಲಿ ಬಕೆಟ್ ಛಿದ್ರಛಿದ್ರವಾಗಿತ್ತು.

"ಅದೇಕೊ ಪಾಪು ಇನ್ನೂ ಒಂದು ವಾರ ಆಗಿಲ್ಲ ಅದನ್ನ ತಂದು. ಹೊಡೆದಾಕ್ಬಿಟ್ಟೆ?" ತಾಯಿಯ ಯಾವ ಮಾತೂ ಕೇಳಲಿಲ್ಲ. ಕೈಯಲ್ಲಿದ್ದ ಬಕೆಟ್ ಕೆಳಗೆಸೆದು ಒಳಗೋಡಿದ, ಈಗ ಅವನಿಗೆ ಅರ್ಥವಾಯಿತು. ಎರಡು ದಿನಗಳಿಂದ ಲಕ್ಷ್ಮಿ ಮುಖ ಯಾಕೆ ತೋರಿಸಲಿಲ್ಲವೆಂದು.

ಬಟ್ಟೆ ಬದಲಿಸಿದ ಕೂದಲು ಸರಿಪಡಿಸಿಕೊಳ್ಳದೆ ಕ್ರೋಧದಿಂದ ಕುದಿಯುತ್ತ ಎರಡೆರಡು ಮೆಟ್ಟಲು ಕೆಳಗಾರಿದ. ಎಲ್ಲಿಗೊ ಇದ್ದಕ್ಕಿದಂತೆ ಹೊರಟ ಮಗನನ್ನು ಬಿಟ್ಟ ಕಣ್ಣಿಂದ ನೋಡುತ್ತ "ಪಾಪು ಎಲ್ಲಿಗೊ?" ಕೇಳಿದಳು.

"ಬೇಗ ಬರ್‍ತೀನಮ್ಮ" ತಿರುಗಿ ಮುಖ ನೋಡದೆ ದಾಪುಗಾಲು ಹಾಕಿದ. ಅವನು ಉಸಿರು ಬಿಟ್ಟಿದ್ದೆ ಮಂಜಮ್ಮಳಿಗೆ ಸಮಾಧಾನಕರವಾಗಿತ್ತು.

ಅವರಿಬ್ಬರ ಬೆನ್ನತ್ತಿದ್ದ ರಾಜು. ಬಲು ದೂರದಲ್ಲಿ ಲಕ್ಷ್ಮಿಯ ನಡೆಯ ಗುರ್ತು

ಸಿಕ್ಕಿತು. ಸಾಕಷ್ಟು ದೂರದ ಅಂತರದಲ್ಲಿ ಹಿಂಬಾಲಿಸಿದ ರಾಜು. ಮತಷ್ಟು ಹತ್ತಿರ ಹೋಗಲು ಮನ ಹಿಂಜರಿಯಿತು.ಪ್ರಥಮವಾಗಿ ಸಾಧ್ಯವಾದಷ್ಟು ಮಟ್ಟಿಗೆ ಲಕ್ಷ್ಮಿಯ ಮುಖ ಭಾವಗಳನ್ನು ಅಳೆಯುವುದು. ಅದು ಅಸಾಧ್ಯವಾದರೆ ನೇರವಾಗಿ ಹೋಗಿ ಎದುರಿಗೆ ನಿಂತು ವಿಚಾರಿಸಿಕೊಳ್ಳುವುದು ಎಂದು ತೀರ್ಮಾನಿಸಿದ, ಅಲ್ಲಿ ಇಲ್ಲಿ ಸುತ್ತಾಡಿದರು. ರಾಜು ಹಿಂಬಾಲಿಸಿದ.ಅವರನ್ನು ನೋಡುತ್ತಲೇ ಒಬ್ಬನಿಗೆ ಡಿಕ್ಕಿ ಕೊಟ್ಟ ಕ್ಷಮೆ ಸಹ ಯೋಚಿಸದೆ "ಕಣ್ ನೆತ್ತಿ ಮೇಲೆ ಇಟ್ಕೊಂಡಿದ್ದೀರಾ? ಮುಂಗೆ ನೋಡುತ್ತ ಹೋಗ್ರೀ" ಎಂದು ಕತ್ತು ತಿರುಗಿಸಿ ಕೋಪಕಾರುತ್ತ ಮತ್ತೊಬ್ಬನಿಗೆ ಡಿಕ್ಕಿ ಹೊಡೆದು "ಇವ್ನೆಲಿಂದ ಬಂದ್ನೋ...?" ಗೊಣಗುತ್ತ ಮುಂದೆ ನಡೆದ.ಡಿಕ್ಕಿ ಹೊಡೆಸಿಕೊಂಡವರ ಕೋಪವೆಲ್ಲ ಇವನ ಮುಂದೆ ಲೆಕ್ಕಕ್ಕೆ ಬಾರದೆ ಹೋಗಿತ್ತು. ತಲೆ ಎತ್ತಿದ ಇಬ್ಬರು ನಾಪತ್ತೆ! 'ಅರೆ ಎಲ್ಹೋದ್ರು?' ಅಷ್ಟು ದೂರ್ದಿಂದ ಬಂದ್ರು ಕೈ ಕೊಟ್ರಲ್ಲ' ಎಂದು ಕೊಳ್ಳುವುದರೊಂದಿಗೆ ತನ್ನನ್ನೆ ಶಪಿಸಿಕೊಳ್ಳುತ್ತ, ಮುಖ ಗಂಟಾಕಿ ಮುಂದೆ ಎರಡೆಜ್ಜೆ ಹಾಕಿ 'ತಾಜ್ ಮಹಲ್' ಹೋಟೆಲ್ ಕಡೆ ತಿರುಗಿದ ಇಬ್ಬರು ಒಳಗಡೆ ಕಂಡರು. 'ಲಕ್ಷ್ಮಿಗೆ ಇಷ್ಟವಿಲ್ಲದೆ ಇದ್ದಿದ್ರೆ ಹೋಗದೆ ಇರ್ಬಹುದಿತ್ತು, ಹಾಗಾದ್ರೆ ಅವ್ಳಿಗೆ ಇಷ್ಟವಿದೆಯೆ? ನನ್ನನ್ನು ಮರೆತಳೆ? ಅಷ್ಟು ಸುಲಭವಾಗಿ ಮರೆಯಲಿಕ್ಕೆ ಬಿಡ್ತಿನಾ? ಪ್ರೇಮದ ಬಗ್ಗೆ ಹೇಳೋಳೆ ಹೀಗೆ ಮಾಡಿದ್ಳು? ನೋಡೋಣ ಸರಿಯಾಗಿ ನೋಡದೆ ತಪ್ಪು ವಿವೇಚನೆ ಮಾಡುವುದು ಅವಿವೇಕಿತನ' ಎಂದು ತನ್ನೊಳಗೆ ಅವರಿಗೆ ಕಾಣದಂತೆ ಮೂಲೆಯಲ್ಲಿ ಕುಳಿತು ನೋಟ ತೀಕ್ಷ್ಣಗೊಳಿಸಿದ.

ನಿಜವಾಗಿಯೂ ಲಕ್ಷ್ಮಿ ತನ್ನತ್ರು ನಡೆದಂತೆ ನಡೆಯುವುದಿರಲಿ ಮಾತೂ ಆಡಿದಂತೆ ಸಹ ಕಾಣಲಿಲ್ಲ, ಅವಳಲ್ಲಿನ ಲವಲವಿಕೆ ಸತ್ತು ಹೋಗಿತ್ತು. ತನ್ನಲ್ಲಿ ತೋರುವ ಬಿಂಕ, ಒನಪು, ವಯ್ಯಾರ ಎಲ್ಲ ಮಾಯ. ಜೊತೆಯಲ್ಲಿ ಮನದಾಳದ ನೋವು ಪ್ರತಿಫಲಿಸುವ ಮುಖದಲ್ಲಿ ಗಂಭೀರತೆಯ ಛಾಯೆ. ಅವನಾರು? ಹೇಗಿದ್ದಾನೆ? ಎಂಬ ಗೊಡವೆಗೂ ಹೋಗದೆ. ಕೆಟ್ಟದ್ದೊ, ಒಳ್ಳೆಯದೊ ಕಣ್ಣೆರೋದೆ ಲಕ್ಷ್ಮಿಗೆ ಎನ್ನುವಂತೆ ನೋಡಿದ. ರಘು ಮಾತ್ರ ಆಗಾಗ ಅವಳತ್ತಿರ ಬಾಗಿ ಏನೇನೊ ಹೇಳುತಿದ್ದಾಗಲೆಲ್ಲ 'ಏನಿರಬಹುದು?'ಪ್ರೇಮದ,ಮದುವೆಯ ಮಾತಿರಬಹುದೆ? ಅಥವಾ ಇನ್ನೇನಾದರೂ ಒಳಗುಟ್ಟೆ' –ತನ್ನ ಯೋಚನೆಗೆ ಕಸಿವಿಸಿಗೊಂಡ.

ಸ್ವಲ್ಪ ಹೊತ್ತಿನಲ್ಲಿ ಕಾಫಿ ಮುಗಿಸಿ ಇಬ್ಬರೂ ಎದ್ದು ಹೊರಟರು. ಒರೆಯಾಗಿ ಕುಳಿತು ಲಕ್ಷ್ಮಿಯ ಮುಖ ದಿಟ್ಟಿಸಿದ.ಸಂಶಯವಿಲ್ಲ 'ಇದು ಲಕ್ಷ್ಮಿಗೆ ಎಳ್ಳಷ್ಟೂ ಇಷ್ಟ ವಿಲ್ಲದ ಕಾರ್ಯ' ಎಷ್ಟೋ ಸಮಾಧಾನವಾಯಿತು. ಲಕ್ಷ್ಮಿ ಯಾರನ್ನೂ ನೋಡದೆ ಬಾಡಿದ ಮುಖದಿಂದ ರಘುವಿನೊಂದಿಗೆ ನಡೆದಳು.ಮನೆಯ ದಾರಿ ಹಿಡಿದರು,ಕತ್ತಲು ಕವಿಯುತೊಡಗಿತು. ರಾಜು ಮತ್ತೆ ಹಿಂಬಾಲಿಸ ತೊಡಗಿದ. ನಿರ್ಜನ ಪ್ರದೇಶ ಆರಂಭ ವಾಗುತಿತ್ತು. ರಾಜನ ತಲೆಯಲ್ಲಿ ಮಿಂಚಿನಂತೆ ಯೋಚನೆಯೊಂದು ಹೊಳೆಯಿತು. ಹಿಂದೆ ಮುಂದೆ ವಿವೇಚಿಸದೆ ನಾಲ್ಕೆಜ್ಜೆ ಓಡೋಡಿ ಹತ್ತಿರಕ್ಕೆ ಬರುತ್ತ "ರ್ರೀ .. ಸ್ವಲ್ಪ ನಿಲ್ರೀ..." ಎಂದ.

ಇಬ್ಬರೂ ಬೆಚ್ಚಿ ನಿಧಾನವಾಗಿ ಹಿಂತಿರುಗಿದರು. ಲಕ್ಷ್ಮಿಯ ಕಣ್ಣು ಅರಳಿದವು. ರಘು ಜೊತೆಯಲ್ಲಿ ಇರೋದ್ರಿಂದ ಸಂತೋಷ, ಹಿಗ್ಗುಗಳನ್ನು ತೋರುವಂತಿಲ್ಲ ಮತ್ತೆ ಗಂಭೀರ ಮುಖ ಮಾಡಿಕೊಂಡರೂ ರಾಜನ ಆಗಮನದಿಂದ ಹೃದಯ ಮಧುರ ಗಾನ ಹಾಡ ತೊಡಗಿತು.

"ಏನಾಗ್ಬೇಕಿತ್ತು ನಿಮಗೆ?ಓಡಾಡೋರಿಗೆಲ್ಲ ತೊಂದ್ರೆ ಕೊಡ್ತೀರಾ?" ಆರೋಪಿ ಸುವುದರೊಂದಿಗೆ ರೇಗಿದ ರಘು.

"ಯಾರ್ರೀ ತೊಂದ್ರೆ ಕೊಡೋದು?ನಾನು ಪ್ರೇಮಿಸಿದ ಹುಡುಗಿ ನೀವು ಜೊತೆ ಯಲ್ಲಿ ಕರ್ಕೊಂಡು ಓಡಾಡಿದ್ರೆ ನನಗೆಷ್ಟು ತೊಂದ್ರೆ ಆಗುತ್ತೆ ಅನ್ನೋದು ಯೋಚಿ ಸಿದ್ರಾ."

ರಾಜನ ನೇರ ನುಡಿ ಲಕ್ಷ್ಮಿಗೆ ಇಷ್ಟವಾಗಲಿಲ್ಲ ಇದರಿಂದ ಪ್ರಮೋದಕ್ಕೆ ಅವಕಾಶ ಕ್ಕೊಂತಾಯಿತು ಎಂದು ಬೆದರಿದಳು. ರಾಜನ ಸಂಕುಚಿತ ಭಾವನೆ ತನಗೆಷ್ಟು ಕಷ್ಟತರು ವುದೆಂದು ಹೆದರಿ ಕಂಗಾಲಾದಳು. ರಘುವಿನ ಬಾಯಿ ಕಟ್ಟಿತ್ತು.

"ಏನ್ರಿ ಮುಖ ನೋಡ್ತೀರಾ? ಇವ್ಳು ಲಕ್ಷ್ಮಿ ನನ್ ಲವರ್.ಬೇಕಾದ್ರೆ ಅವ್ಳನ್ನೆ ಕೇಳಿ" ಎಂದು ಅವಳ ಕಡೆ ಕೈ ತೋರಿದ.

ರಘುವಿನ ಎದುರು ಮುಖಭಂಗಿತಳಂತಾದ ಲಕ್ಷ್ಮಿಗೆ ಕಣ್ಣಲ್ಲಿನೀರು ತೇಲಾಡಿತು. ತಲೆ ತಗ್ಗಿಸಿ ನಿಂತಳು. ,ರಘು ಅವಳನ್ನು ಒಮ್ಮೆ ಪರೀಕ್ಷಾ ನೋಟದಿಂದ ಅಳೆದ. ರಾಜು ಮುಂದುವರಿಸಿದ "ಎಲ್ಲಾದ್ರೂ ನೀವೇನಾದ್ರೂ ಅವ್ಳ ಮದುವೆಯಾದ್ರೆ ಆಕೆ

ಜೀವನ ಪರ್ಯಂತ ಕೊರಗ್ಬೇಕಾಗುತ್ತೆ. ಆಕೆ ಪಡೋ ಕಷ್ಟಕ್ಕೆ ನೀವು ಕಾರಣ ವಾಗ್ಬೇಕಾಗುತ್ತೆ. ನಿಮ್ಮ ಜೀವನವೂ ಹಾಳು.ಇದಕ್ಕೆಲ್ಲ ನಾನು ಅವಕಾಶ ಕೊಡ್ತೀನಿ ಅಂತನೂ ತಿಳ್ಕೋಬೇಡಿ, ನೀನು ನೊಂದ್ಕೋಬೇಡ ಲಕ್ಷ್ಮಿ. ಬರ್ತೀನಿ" ಎಂದವನೆ ಮನೆಯ ಕಡೆ ನಡೆಯತೊಡಗಿದ.

ರಘುಗೆ ಇದು'ಟೂ ವೇ ಲವ್ವ'ಎಂದು ಅರಿವಾಗುವುದರೊಂದಿಗೆ ಲಕ್ಷ್ಮಿ ನಡತೆ ಸಂಪೂರ್ಣ ಅರ್ಥವಾಯಿತು.ಅಪಮಾನದ ಅಂಶವೆ ಆಗಿದ್ದ ಲಕ್ಷ್ಮಿ ತಲೆ ತಗ್ಗಿಸಿ ಸಣ್ಣಗೆ ಅಳುತಿದ್ದಳು. ಅವಳು ಸನ್ಯಾಸಿನಿ ನಾಟಕವಾಡಿದ್ದು ಏತಕ್ಕೆ? ತನ್ನನ್ನ ಮಾತನಾಡಿಸುವುದಿರಲಿ ನೋಡಲಿಕ್ಕೂ ಇಷ್ಟಪಡದವಳ ವರ್ತನೆ ಮನನವಾಯಿತು.ರಘುಗೆ ತನ್ನತಪ್ಪಿನ ಅರಿವಾಗಿತ್ತು. ತಲೆ ಎತ್ತಿ ರಾಜು ಹೋಗುತಿದ್ದ ಚಪ್ಪಾಳೆ ತಟ್ಟಿ "ರೀ... ಮಿಸ್ಟರ್..." ಕೂಗಿ ಕರೆದ ರಾಜು ಹಿಂತಿರುಗಿ ನೋಡಿದ. ರಘು ಕೈಬೀಸಿ ಕರೆದ.

ಹತ್ತಿರ ಬಂದ ರಾಜು ಗಡುಸಾಗಿ"ಏನು?" ಪ್ರಶ್ನಿಸಿದ.

"ನಿಮ್ಮ ಹೆಸರು?"

"ಏಕೆ?"

"ಕೇಳ್ದೆ..."

"ರಾಜು"

"ಹ್ಞಾ ರಾಜೂನಿಮ್ಮಿಂದ ನನಗೊಂದು ಸಹಾಯ ಆಗ್ಬೇಕಿತ್ತು.ನನಗೆ ಅರ್ಜೆಂಟ್ ಸ್ವಲ್ಪ ಕೆಲಸ ಇದೆ.ನೀವು ಇವ್ರನ್ನ ಮನೆಗೆ ಮುಟ್ಸಿ.ಪ್ಲೀಸ್ ಇದೊಂದು ಸಹಾಯ ಮಾಡಿ" ಕೈ ಹಿಡಿದು ಕೇಳಿಕೊಂಡ.

ರಾಜುಗೆ ಪರಮಾಶ್ಚರ್ಯವಾಯಿತು."ಸರಿ ಹೋಗು ಲಕ್ಷ್ಮಿ" ರಘು ಲಕ್ಷ್ಮಿಯ ಕಡೆತಿರುಗಿ ನುಡಿದ. ರಾಜುಗೆ ಏನಾಡಬೇಕೆಂದು ತೋರದೆ ಬಾಯಿ ಮೂಕಾಯಿತು. ಇಬ್ಬರೂ ಜೊತೆಯಲ್ಲಿ ನಡೆಯುವುದು ಕಂಡು ಕಣ್ಣು ಮಸುಕಾಯಿತು.ರಘು ಕನ್ನಡಕ ತೆಗೆದು ರೆಪ್ಪೆ ಹೊತ್ತಿದ.

ನಾಲ್ಕೆಜ್ಜೆ ಮುಂದೆ ಹೋಗುತ್ತಿರುವಂತೇಯೇ ಲಕ್ಷ್ಮಿ "ರಾಜು ನಿನಗೆ ಯಾವಾಗ ಏನ್ಮಾಡ ಬೇಕು ಅನ್ನೋದು ಗೊತ್ತಾಗೊಲ್ಲ.ಹಾಗ ಮಾತ್ನಾಡ ಲೇನು?"ಆಕ್ಷೇಪಿಸಿದಳು.

"ಯಾಕೆ? ನಾನು ಮಾಡಿದ್ದು ತಪ್ಪಾ ಲಕ್ಷ್ಮೀ,ನಮ್ಮಿಬ್ರ ಪ್ರೇಮ ಸುಳ್ಳಾ?"

"ಸುಳ್ಳಲ್ಲ,ನಿಧಾನವಾಗಿ ನಾನೇ ಅವ್ರಿಗೆ ಈ ವಿಷ್ಯ ತಿಳಿಸ್ತಿದ್ದೆ"

ನೀನು ತಿಳಿಸೋವಷ್ಟರಲ್ಲಿ,ನೀನೆಲ್ಲಿ ನನ್ನ ಕೈ ಬಿಟ್ಟು ಹೋಗ್ತಿಯೋ ಅಂತ ನಾನೇ ಹೇಳ್ದೆ. ನಾನು ಕಾಯುವಂತಿರಲಿಲ್ಲ ಲಕ್ಷ್ಮೀ. ಒಟ್ಟಿನಲ್ಲಿ ಈಗ ಯಾವ ಚಿಂತೆನೂ ಇಲ್ಲ"ಎಂದ.

"ಅವ್ರು ನಮ್ಮ ಅತಿಥಿಗಳು, ಹೀಗ ನಡೆದುಕೊಳ್ಳೋದು?"

"ಹಾ... ಅತಿಥಿಗಳು!? ನಾನು ಬಂದು ಹೇಳದೆ ಹೋಗ್ದಿದ್ರೆ ಇಬ್ರಿಗೂ ತಿಥಿನೇ ಮಾಡ್ತಿದ್ರು. ಹೋಗ್ಲಿ ಅವ್ರು ಯಾರು?" ಕೇಳಿದ.

"ನನ್ನ ತಾಯಿಯ ತಮ್ಮ. ನಮ್ಮ ಪ್ರೇಮ ರಘುಗೆ ಅರ್ಥವಾಗಿದೆಯಂತ ಕಾಣ್ಸುತ್ತೆ. ಕ್ಷಮೆ ಕೇಳ್ಬಿಡು"

"ನಾನೇಕೆ ಕೇಳ್ಬೇಕು? ನಮ್ಮಿಬ್ರ ಮಧ್ಯ ಬಂದ ತಪ್ಪಿಗೆ ಅವ್ರು ಕ್ಷಮೆ ಕೇಳ್ಬೇಕು. ನಿನ್ನ ಮನ್ಸಿಗೆ ನೋವಾಗದಾದ್ರೆ ನಿನ್ನತ್ರ ಕ್ಷಮೆ ಕೇಳ್ತೀನಿ ಅವರತ್ರ ಅಲ್ಲ" ಎಂದು ಧೃಡವಾಗಿ ನುಡಿದ. ಲಕ್ಷ್ಮಿಯ ತುಟಿಯಲ್ಲಿ ನಗೆ ಲಾಸ್ಯವಾಡಿತು. ಹೃದಯ ಸಂಕೀರ್ತನೆ ಉಲಿಯುತಿತ್ತು.

ಮಾರನೆಯ ದಿನ ಬೆಳಿಗ್ಗೆ ಹೊರಗಡೆಯ ರೂಮಿನಲ್ಲಿದ್ದ ರಘು ಸೂಟ್‌ಕೇಸು ಭರ್ತಿ ಮಾಡುತಿದ್ದಂತೆ ಕಾಫಿ ತಂದ ಸಾವಿತ್ರಿ "ಏನೋ ರಘು, ಹದಿನೈದು ದಿನ ರಜ ಹಾಕಿದ್ದೀನಿಯಂದೆ ಆಗ್ಲೆ ಹೊರಡೋ ಹಾಗೆ ಕಾಣಿಸ್ತೀಯಾ..." ಕಾಫಿ ಟಿಪಾಯ್ ಮೇಲಿಡುತ್ತ ತಮ್ಮ ಹೊರಟಿದ್ದರಿಂದ ಬೇಸರದ ಎಳೆ ಬೆರಸಿ ಕೇಳಿದಳು.

"ಹೌದಕ್ಕ ರಾತ್ರಿಯಲ್ಲ ನನಗೆನಿಸ್ತನೆ, ಇಲ್ಲ"ಬಾವುಕನಾಗಿ ನುಡಿದ.

"ಏಕೆ?" ಕೇಳಿದಳು.

ಕೆಲವು ಅರ್ಜೆಂಟ್ ಕೆಲಸದ ಫೈಲನ್ನ ಸಾಹೇಬ್ರ ಸಹಿಗೆ ಕೊಡ್ಬೇಕಿತ್ತು.ಕೊಟ್ಟೆನೊ ಇಲ್ಲ ಬೀರ್‌ನಲ್ಲಿಟ್ಟು ಬೀಗ ಹಾಕ್ಕೊಂಡು ಬಂದ್ಬಿಟ್ನೊ ಗೊತ್ತಿಲ್ಲ. ಮರೆತೋಗ್ಬಿಟ್ಟಿದೆ ಅದಕ್ಕೆ ಹೋಗ್ಲೆ ಬೇಕಕ್ಕ"

"ಇದೊಂದು ಕಣೋ ನೀನು,ಅಪರೂಪಕ್ಕೆ ಬಂದು..." ಬೇಸರ ತೋರಿದಳು.

"ಏನ್ಮಾಡೋದಕ್ಕ. ಈಗ ನಾನು ಹೋಗದೆ ಇದ್ರೆ ಆಗಬಹುದು. ಅಪ್ರೆ ಅಕ್ಷನ್ನೇ

ದೊಡ್ಡದನ್ನಾಗಿ ಮಾಡಿ ನನ್ನ ಡ್ಯೂಟಿಯಿಂದ ತೆಗೆಯಬಹುದು. ಉದ್ಯೋಗ ಉಳಿಸ್ಕೋಳಿಕ್ಕಾದ್ರೂ ಹೋಗ್ಬೇಕಕ್ಕ, ನನ್ನ ಪುಣ್ಯಕ್ಕೆ ಈಗ್ಲಾದ್ರೂ ನೆನಪು ಬಂತು. ಇನ್ನೆರಡು ದಿನ ಬಿಟ್ಟು ಯೋಚ್ಸೆ ಬಂದಿದ್ರೆ ಕಷ್ಟ ಇತ್ತು." ಮಾತು ಮುಗಿಯುತಿದ್ದಂತೆ, ಒಳಗೆ ಬಂದ ರಮೇಶಪ್ಪ "ಏನು ಅಕ್ಕ ತಮ್ಮ ಸೇರ್ಕೊಂಡು ಭಾರಿ ಭಾರಿ ಮಾತ್ನಾಡ್ತಿದ್ದೀರಿ?" ಕೇಳಿದರು. ವಾತಾವರಣ ನೋಡಿ ಗ್ರಹಿಸುವ ಮುನ್ನವೆ ಸಾವಿತ್ರಿ "ನೋಡ್ರಿ ಈಗ್ಲೆ ಊರಿಗೆ ಹೋಗ್ಬೇಕಂತೆ ಇವ್ನು" ಎಂದಳು.

"ಹೌದಾ? .. ಯಾಕೆ? ಯಾಕ್ ರಘು?" ತಕ್ಷಣ ಬದಲಾವಣೆಯಿಂದ ಅವ್ರಿಗೂ ಆಶ್ಚರ್ಯದ ಬೇಸರ

ಕಾಫಿ ಲೋಟ ಖಾಲಿ ಮಾಡಿ. ಅಕ್ಕಳಿಗೆ ಹೇಳಿದ್ದನ್ನೆ ಭಾವಂಗೂ ಹೇಳಿದ. ಆಲಿಸಿದ ರಮೇಶಪ್ಪ "ನೋಡ್ದಾ ಎಂತಾ ಕೆಲಸ ಮಾಡ್ದೆ. ಆಫೀಸ್ ಕೆಲ್ಸನೇ ಅಷ್ಟು. ಸ್ವಲ್ಪ ಮಿಸ್ಟೇಕ್ ಆದ್ರೂ ಪೂರ್ತಿ ತಲೆ ಮೇಲೆ ಹಾಕ್ತಾರೆ. ನೀನು ಬರೋದು ಬಂದಿದ್ದೀಯಾ ಸರಿಯಾಗಿ ಮುಗ್ಸಿ ಬರ್ಬೇಕಿತ್ತು..." ಎಂದರು.

"ಹೌದು ಏನ್ಮಾಡೋದು ಭಾವ? ಬಂದೆ, ಲಕ್ಷ್ಮಿಗೂ ಹೇಳಿ ಬರ್ತೀನಿ .."ಎಂದು ಬಂದ. ಲಕ್ಷ್ಮಿಯು ಕೋಣೆಯ ಬಾಗಿಲಲ್ಲಿ ನಿಂತ. ಗಂಡ ಹೆಂಡತಿ ಅವರಿಬ್ಬರ ನಡುವೆ ಹೋಗದಿರುವುದು ಉಳಿತೆಂದು ಬರಲಿಲ್ಲ.

ಲಕ್ಷ್ಮಿ ಮೊದಲಿನಂತೆ ಮುಖ ಊದಿಸಿಕೊಂಡಿರದೆ ಲವಲವಿಕೆಯಿಂದ ಹಾಡೊಂದು ಗುನುಗುತ್ತ ಸ್ನಾನ ಮಾಡಿ ಒದ್ದೆಯಾದ ತಲೆಗೆ ಬಟ್ಟೆ ಸುತ್ತಿಕೊಳ್ಳುತಿದ್ದಳು. ತನ್ನಲ್ಲಿ ಬೆಳೆದ ಆಸೆಗಳೆಲ್ಲವನ್ನು ಮುರುಟಿದ್ದರಿಂದ ನೊಂದಿದ್ದ ರಘು ರೆಪ್ಪೆ ಪಟಪಟನೆ ಬಡಿದು ಕನ್ನಡಕ ಏರಿಸುತ್ತ "ಲಕ್ಷ್ಮಿ..." ಎನ್ನುತ್ತ ಒಳಗೆ ಬಂದ. ಲಕ್ಷ್ಮಿಯು ಗಾನ ತುಂಡು ತುಂಡಾಯಿತು. ಅವಳು ತನ್ನೊಂದಿಗೆ ಬಾಯಿ ಬಿಡುವುದಿಲ್ಲವೆಂದು ಬಲ್ಲ ರಘು ತಾನೇ ಮಾತು ಆರಂಭಿಸಿದ "ಲಕ್ಷ್ಮಿ ಇವತ್ತು ನಾನು ಊರಿಗೆ ಹೊರಟಿದ್ದೀನಿ, ನಿನ್ನಿಂದ ನೊಂದು, ಬೇಸರಗೊಂಡು ಹೊರಟಿದ್ದೀನಿಯಂತ ಭಾವಿಸ್ಬೇಡ. ಅರ್ಜೆಂಟ್ ಕೆಲ್ಸ ಇದೆ. ನಿಮ್ಮ ಮತ್ತು ಅವರ ಸಂಬಂಧ ನನಗೆ ಗೊತ್ತಿಲ್ಲದೆ ಕೆಲವು ಬೇಸರ ತರುವಂತಹ ಮಾತನ್ನಾಡಿದ್ದೀನಿ. ಅದಕ್ಕೆ ಕ್ಷಮೆ ಕೇಳ್ತೀನಿ. ಹ್ಞಾ ..ಆ ಹುಡುಗನ ಹೆಸ್ರೇನು? ಒಳ್ಳೆ ಹ್ಯಾಂಡ್‌ಸಮ್, ಗುಡ್ ಪರ್ಸನಾಲಿಟಿ ನನ್ನ ನಡತೆಯಿಂದ ಅವ್ರಿಗೂ ಬೇಸರ ಆಗಿದ್ದಿದ್ರೆ

ನಂದು ತಪ್ಪಾಯ್ತು ಅಂತ ಹೇಳಿ.ಹ್ಞಾ ಹುಡಗನೆಸ್ರು?"

"ರಾಜು..." ಎಂದಳು.ಅವನ ಮಾತು ಕೇಳುವಾಗ ಬಾಡಿದ್ದ ಮುಖ ಹೆಸರು ಹೇಳುವಾಗ ಲಜ್ಜೆಯಿಂದ ಕಣ್ಣು ಮಿಂಚಿದವು.

"ಓ...ಗುಡ್‌ನೇಮ್.ಹೇಗಾದ್ರೂ ಮನೆಯಲ್ಲಿ ಒಪ್ಸಿ ನಿನ್ನ ಇಷ್ಟದಂತೆ ರಾಜುನ ಮದುವೆಯಾಗು ಲಕ್ಷ್ಮೀ.ನಾನು ಬರ್ತೀನಿ" ಎಂದು ಮತ್ತೊಮ್ಮೆ "ನನ್ನಿಂದ ಅತಿಯಾಗಿದ್ರೆ ಕ್ಷಮೆ ಇರಲಿ ಲಕ್ಷ್ಮೀ. ಬರ್ತೀನಿ" ಎಂದು ಹೊರಟ ರಘು, ಬಲು ಸೂಕ್ಷ್ಮಮತಿ, ಸಂಭಾವಿತ ಎಂದುಕೊಂಡಳು ಲಕ್ಷ್ಮೀ.

ರಮೇಶಪ್ಪನೂ ರಘುವಿನೊಂದಿಗೆ ಹೊರಟರು."ಹೇಳ್ದಿ ಅಕ್ಕ ಮತ್ತೆ ಆದಷ್ಟು ಬೇಗ ಬರ್ತೀನಿ" ಎನ್ನುತ್ತ ಬ್ಯಾಗ್ ಹೆಗಲಿಗಾಕಿಕೊಂಡು ಸೂಟ್‌ಕೇಸ್ ಹಿಡಿದ." ಇರ್ಲಿ ಇಲ್ಲೊಂದು ಕೊಡು" ಎನ್ನುತ್ತ ಸೂಟ್‌ಕೇಸ್ ತಾವು ತೆಗೆದು ಕೊಂಡರು ರಮೇಶಪ್ಪ.

"ಲಕ್ಷ್ಮೀ...ರಘು ಹೊರಟಿದ್ದಾನೆ ಬಾರೇ..." ಕರೆದಳು ಸಾವಿತ್ರಿ. ಸಂಕೋಚ ಬಿಟ್ಟು ಲಕ್ಷ್ಮೀ ಅವರೊಂದಿಗೆ ಸೇರಿದಳು. "ಕೇಳೆ ಯಾವಾಗ ಬರ್‍ತಾನೆ" ಆದೇಶಿಸಿದಳು ಸಾವಿತ್ರಿ.

"ನಾನಾಗ್ಲೇ ಹೇಳ್ಬಿಟ್ಟಿದ್ದೀನಕ್ಕ ಯಾವತ್ತು ಬರ್ತೀನಿಯಂತ"ಎಂದುಅರ್ಥಗರ್ಭಿತವಾಗಿ ನುಡಿದು ಲಕ್ಷ್ಮೀಯ ಮುಖ ನೋಡಿದ. ಒಳ ಅರ್ಥ ಲಕ್ಷ್ಮೀಗೊರತು ಉಳಿದ ಇಬ್ಬರಿಗೆ ಅರ್ಥವಾಗದೆ, ತಮ್ಮ ಮನದಂತೆ ಚಿಂತಿಸಿ 'ಹಾಗಾದ್ರೆ ಲಕ್ಷ್ಮೀ ದಾರಿಗೆ ಬಂದಿದ್ದಾಳೆ ಎಂದಾಗಾಯ್ತು" ಎಂದುಕೊಂಡರು.

"ಬರ್ತೀನಕ್ಕ, ಬರ್ತೀನಿ ಲಕ್ಷ್ಮೀ..." ಎಂದು ಬಾಗಿಲು ದಾಟಿ ಭಾವನೊಡನೆ ನಡೆದ.

೧೪

ಮಧ್ಯಾಹ್ನ ಮೂರು ಗಂಟೆಯ ಬಿಸಿಲು ಆಕ್ರೋಶದಿಂದ ಕಾಯುತಿತ್ತು. ಬಿಸಿಲಿನಲ್ಲಿ ಮುಖ ಇಳಿಬಿಟ್ಟು, ಭವ್ಯ ದೇಹದ ರಾಜು ನಿಧಾನವಾಗಿ ನಡೆದು ಬರುತಿದ್ದ. ಗುಲಾಬಿ ಬಣ್ಣದ ನೀಳ ಉಡುಪು ಧರಿಸಿದ್ದಳು ಲಕ್ಷ್ಮೀ.ಕೊರಳ ಸುತ್ತ.ಅಂದವಾದ ವಕ್ಷಕ್ಕೂ ಮಾಲೆಯಂತ ನೆರಿಗೆ.ಸ್ವಲ್ಪ ದೂರದಿಂದಲೂ ತದೇಕ ಚಿತ್ತದಿಂದ ಬಾಗಿಲಿಗೆ ಕೈ ಊರಿ ನಿಂತು ದಿಟ್ಟಿಸಿದಳು. ಮನೆಯಲ್ಲಿ ತಂದೆ ತಾಯಿಯರಿಲ್ಲ ಅವರು ಬರುವುದು

ತಡವೆಂದು ಗೊತ್ತು.ಇತ್ತೀಚೆಗೆ ವಿದ್ಯಾಭ್ಯಾಸವಲ್ಲಿ ಅನಾಸಕ್ತಿ.ಎಲ್ಲ ರಾಜನ ಪ್ರೇಮದ ಪ್ರಭಾವ. ರಾಜು ತಲೆ ಎತ್ತದೆ ತನ್ನ ಮನೆಯ ಕಡೆ ತಿರುಗುತಿದ್ದಂತೆ ತಡೆಯಲಾರದೆ "ರಾಜೂ..." ಮೆಲು ದನಿಯಲ್ಲಿ ಕೂಗಿದಳು.ಮನೆಯ ಅಕ್ಕಪಕ್ಕದಲ್ಲಿ ಅವಳ ಕೂಗು ಕೇಳುವವರಿಲ್ಲವಾದ್ದರಿಂದ,ಕೂಗು ರಾಜನಿಗೆತಲುಪಿತು ತಲೆಎತ್ತಿ ತಮ್ಮ ಮನೆ ನೋಡಿದ ಬಾಗಿಲು ಭದ್ರವಾಗಿತ್ತು.ಧೈರ್ಯವಾಗಿ ಲಕ್ಷ್ಮಿಯ ಮನೆ ಕಡೆ ತಿರುಗಿದ.ಮೋಹನಾಂಗಿ ತನ್ನ ಪ್ರೇಮಕಾಂತೆ ! ರಾಜನ ಮನ ಹಿಗ್ಗಿತು. "ಬಾ..." ಎಂದು ಕೈ ಸನ್ನೆ ಮಾಡಿ ದಳು.

ಕೈಮುಷ್ಟಿ ಹಿಡಿದು,ಹೆಬ್ಬೆರಳು ತೆರೆದು "ಏಕೆ?" ಪ್ರಶ್ನಿಸಿದ.

"ಬಾ...ಇಲ್ಲಿ" ಗಟ್ಟಿಯಾಗಿ ಕರೆಯಲಾಗದೆ ಪಿಸುಗುಟ್ಟಿ ಬರುವಂತೆ ಒತ್ತಾಯದ ಸನ್ನೆ ಮಾಡಿದಳು.

ಗೇಟು ತೆಗೆಯುವ ಗೋಜಿಗೆ ಹೋಗದೆ. ಒಂದೇ ನೆಗೆತಕ್ಕೆ ಕಾಂಪೌಂಡ್ ಹಾರಿ ಲಕ್ಷ್ಮಿಯ ಎದುರಿಗೆ ನಿಂತ"ಬಾ ಒಳಗೆ ಯಾರೂ ಇಲ್ಲ" ಕೈಹಿಡಿದು ಒಳಗೆ ಎಳೆದು ಕೊಂಡು ಬಾಗಿಲು ಮುಚ್ಚಿದಳು.

"ಇದೇನು ಲಕ್ಷ್ಮಿ ಬಾಗಿಲು ಮುಚ್ಚಿದೆ?"

"ಯಾಕೆ ಹೆದರಿಕೆನಾ?" ನಗುತ್ತ ನುಡಿದಳು.

"ನನಗೆಂತ ಹೆದರಿಕೆ? ಲವ್‌ಲೆಟರ್ ಕೊಟ್ಟು ಲಕ್ಚರ್ ಎದುರಿಗೆ ಮೀಸೆ ತಿರುವಿ ನಿಂತವ್ನು" ಹೊಗಳಿಕೊಂಡ .

"ಓ.. ಹೋ ಭಾರಿ ಮೀಸೆ ತಿರುವಿದ್ದೆ. ಅದಕ್ಕೆ ಅಳು ಮೋರೆ ಮಾಡಿದ್ದು" ತುಂಟತನದಿಂದ ಕೆಣಕಿದಳು.

ನಾನು ಅಳುಮೋರೆ ಮಾಡಿದ್ದು ಲಕ್ಚರ್ ಬಯ್ದದ್ದಕ್ಕಲ್ಲ. ನೀನು ನನ್ನ ಪ್ರೇಮ ತಿರಸ್ಕರಿಸಿದ್ದಕ್ಕೆ" ಸತ್ಯಾಂಶ ತಿಳಿಸಿದ.

"ಅಂತು ಒಳ್ಳೆ ಆ್ಯಕ್ಷನ್ ಮಾಡ್ಬಿಟ್ಟೆ.ಹೋಗ್ಲಿ,ಬಾ ಕೂತ್ಕೋ ಎಲ್ಹೋಗಿದ್ದೆ?" ಕೇಳಿದಳು. ರಾಜು ಮಾವನ ಮನೆಯ ಸೋಫಾದ ಮೇಲೆ ಮುಜುಗರದಿಂದ ಕುಳಿತ. ಲಕ್ಷ್ಮಿಯು ತಾಗಿ ಪಕ್ಕದಲ್ಲೇ ಕುಳಿತಳು.

"ಏನೇಳ್ಲಿಲಕ್ಷ್ಮಿ ಅದ್ಯಾವ ಗಳಿಗೆಯಲ್ಲಿ ಸನ್ಯಾಸಿ ಆಗ್ತೀನಿ ಅಂದ್ಬಿಟ್ನೋ...ಅದೇ

ತಪ್ಪಾಯ್ತು" ಎಂದು ಚಿಂತಿಸಿದ.

"ಏಕೆ? ಏನಾಯ್ತು?" ಕುತೂಹಲದಿಂದ ಪ್ರಶ್ನಿಸಿದಳು.

"ಅವತ್ತಿಂದ ನಾನೇ ತಂಡಿ ಬೇಡಾಂತ ಬಿಟ್ಬಿಟ್ಟೆ,ಹೋಟ್ಲಲ್ಲೆ ದಿನಾ ತಿನ್ನೋದು ಮನೆಯಲ್ಲಾಗಿದ್ರೆ ಎಷ್ಟು ಬೇಕೊ ಅಷ್ಟು ತಿನ್ಬಹುದಿತ್ತು. ಈ ಹಾಳಾದ ಶನಿವಾರ ಬಂತು ಅಂದ್ರೆ ನಮ್ಮನೆಯಲ್ಲಿ ಪೂಜೆ ಎಲ್ಲ ಮುಗಿಯೋದು ನಾಲಕ್ಕುಗಂಟೆಗೆ, ಆಮೇಲೆ ಊಟ. ಮನೆಯಲ್ಲಿ ದಿನಕ್ಕೆ ಎರಡೇ ಊಟ. ಸನ್ಯಾಸಿ ಆಟ ಇನ್ನೂ ಆಡ್ತಿದ್ದೀನಿ ಲಕ್ಷ್ಮಿ."

"ಹೌದಾ? ಹಾಗಾದ್ರೆ ಮನೆಯಲ್ಲಿ ಹೇಗೆ? ದಾರಿಗೆ ಬಂದ್ರಾ?"ಚುರುಕಾಗಿ ತಕ್ಷಣ ಕೇಳಿದಳು.

"ಅಮ್ಮ ಬಂದಿದ್ದಾಳೆ. ಅಪ್ಪಂದೇ ಗೊತ್ತಾಗಲ್ಲ ಲಕ್ಷ್ಮಿ. ಹೊಟ್ಟೆ ಹಸಿವು ಬೇರೆ. ಬೆಳಿಗ್ಗೆಯಿಂದ ಎರಡನೆ ಬಾರಿಗೆ ಹೋಟ್ಲಲ್ಲಿ ತಿಂಡಿ ಆಯ್ತು" ಎಂದ

ಜೋರಾಗಿ ನಕ್ಕಳು ಲಕ್ಷ್ಮಿ. "ನಿನ್ನ ನೋಡಿದ್ರೆ ನಗು ಬರುತ್ತೆ. ನಮ್ಮನೆಯಲ್ಲಿ ಊಟ ಮಾಡ್ಬಾ" ಕರೆದಳು,

"ನಿಮ್ಮನೆಯಲ್ಲಿ?"

"ಹೌದು. ಯಾಕೆ ಮಾಡ್ಬಾರ್ದು?"

"ಹ್ಞು. ನಿಮ್ಮ ಡ್ಯಾಡಿ, ಮಮ್ಮಿ ಎಲ್ಲಿ?"

"ಅಯ್ಯೊ ಇಂತ ಹೊತ್ನಲ್ಲಿ ಅವ್ರುದ್ದೇಕೆ ಯೋಚ್ನೆ? ಇವತ್ತು ಸೆಕೆಂಡ್ ಸಾಟರ್ಡೇ ಅಲ್ವಾ... ಆಸ್ಪತ್ರೆಗೆ ಹೋಗಿ, ಪಿಕ್ಚರ್ ನೋಡಿ ರಾತ್ರಿನೇ ಬರೋದು"

"ಓ... ಅದಕ್ಕೆ ಇಷ್ಟು ಧೈರ್ಯ ಮಾಡಿದ್ದೀಯಾ. ಆಸ್ಪತ್ರೆಗೆಂದೆ ಯಾರಿಗೆ ಹುಷಾರಿಲ್ಲ?"

"ನಮ್ಮ ತಾಯಿಗೆ"

"ಏನಾಗಿದೆ?"

"ಎಲ್ಲಾ ತಿಳ್ಕೊಬೇಕಾ?" ಹೇಳಲು ಇಚ್ಛಿಸದೆ ಕೇಳಿದಳು.

"ಮತ್ತೆ ಅವ್ರು ನನಗೆ ಅತ್ತೆ ಅಲ್ವಾ?"

"ಹೌದು. ನಿನಗೆ ಭಾವ ಅನ್ನುವ ತಮ್ಮನೋ ತಂಗಿಯೋ ನಮ್ಮ ಮನೆಯಲ್ಲಿ

ಹುಟ್ಟಿದ್ದಾರೆ" ತಲೆ ತಗ್ಗಿಸಿ ಮುಗುಳ್ನಗೆಯಲ್ಲಿ ನುಡಿದಳು.

"ಹ್ಹಾ! ಇಷ್ಟು ವರ್ಷಗಳ ಮೇಲೆ..."ಕಣ್ಣು ಬಿಟ್ಟು ಉದ್ಗಾರ ತೆಗೆದು ಕೇಳಿದ.

"ಯಾಕೆ ಆಶ್ಚರ್ಯನಾ?" ನಗುವಿನಲ್ಲಿ ಹೊಳಪು ಗಣ್ಣಿಂದ ದಿಟ್ಟಿಸಿ ಕೇಳಿದಳು.

"ಹೌದು. ಆಶ್ಚರ್ಯ ಸಂತೋಷ ಎರಡು ಆಯ್ತು. ನಿನಗೂ ಅತ್ತಗೆ ಅನ್ನಿಕ್ಕೆ ನನಗೆ ತಮ್ಮನೋ...ತಂಗಿನೋ ಹುಟ್ಟಿದ್ರೆ ಇನ್ನೂ ಚೆನ್ನಾಗಿರುತ್ತೆ" ಎಂದು ನಕ್ಕ. ಲಕ್ಷ್ಮಿಯೂ ನಕ್ಕಳು.

"ನೀನು ತುಂಬಾ ಕಿಲಾಡಿ ಬಾ ಊಟ ಮಾಡು" ಎಲ್ಲ ಸಂಗತಿ ಮರೆತು ಬಿಡುವಂತೆ ಕೈಹಿಡಿದು ಜಗ್ಗಿದಳು.

ಮುಜುಗರದಿಂದಲೇ ಊಟ ಮುಗಿಸಿ ಲಕ್ಷ್ಮಿ ಕೊಟ್ಟ ವಸ್ತ್ರದಿಂದ ಕೈ ಒರೆಸಿ ಕೊಳ್ಳುತ್ತ"ಯಾರು ಅಡಿಗೆ ಮಾಡಿದ್ದು?'ಕೇಳಿದ.

"ನಮ್ ತಾಯಿ.ನನಗೂ ಅಷ್ಟೆ ಸರಿಯಾಗಿ ಬರಲ್ಲ" ಎಂದಳು.

"ಅಬ್ಬಾ ಎರಡುತುತ್ತು ತಿನ್ನೊಷ್ಟರಲ್ಲಿ ಸಾಕಪ್ಪ ಸಾಕು ಅನ್ಸುತ್ತೆ.ನಮ್ಮ ಮನೆಗೆ ಬಂದು ನಮ್ ತಾಯಿ ಮಾಡಿದ್ದು ತಿಂದು ನೋಡು, ನಾಲಕ್ಕು ದಿನಕ್ಕೆ ನಮ್ಮ ತಾಯಿಯ ಹಾಗೆ ನೀನೂ ಆಗ್ತೀಯಾ. ಅತ್ತೆ ಮೇಕಪ್ ಬಹಳ ಮಾಡ್ತಾರೆ ಅಷ್ಟೆ"

"ಹೌದು ನಮ್ಮ ಡ್ಯಾಡಿಗೆ ಅವ್ರಲ್ಲೇ ಇಂಟರೆಸ್ಟ್ ಅದ್ರಿಂದ ಮಮ್ಮಿ ಮೇಕಪ್ ಒಂದು ಚನ್ನಾಗಿ ಮಾಡ್ಕೊಳ್ತಾಳೆ."ಎಂದು ಅವನ ನುಡಿಗನು ಗುಣವಾಗಿ ನುಡಿದಳು.

ಇನ್ನ ನಿನ್ನ ಕಟ್ಕೊಂಡ್ರೆ ನಾನೇ ಮೇಕಪ್ ನಾನೇ ಅಡಿಗೆನೂ ಮಾಡ್ಬೇಕಾಗುತ್ತೆ" ಹಾಸ್ಯ ಮಾಡಿ ನಕ್ಕ. ಜೊತೆಯಲ್ಲಿ ಅವನ ಬೆನ್ನಿಗೆ ಗುದ್ದು ಹಾಕಿ ತಾನೂ ದನಿ ಏರಿಸಿ ನಕ್ಕಳು,

"ನನ್ ರೂಮ್ ನೋಡಲ್ವ?"

"ನೋಡೋಣ ನಡಿ"ಹಿಂಬಾಲಿಸಿ"ಅಬ್ಬಬ್ಬ ಈ ಬುಕ್ಸ್ ನೋಡಿದ್ರೆ ಸಾಕಾಗುತ್ತೆ. ಎಲ್ಲ ನಿನ್ನವ? ನನ್ನತ್ರ ನಾಲ್ಕೈದು ನೋಟ್ ಬುಕ್ ಅಷ್ಟೆ ಇರೋದು."

"ನೀನು ಮಹಾ ಬೃಹಸ್ಪತಿ ನೋಡು" ವ್ಯಂಗ್ಯವಾಗಿ ನುಡಿದು "ಹೇಗಿದೆ?" ಕೇಳಿದಳು.

"ಚನ್ನಾಗಿದೆ, ಲೈಬ್ರರಿ ಇದ್ದಾಗೆ.ರೂಮ್ ಹೀಗಿದ್ರೆ ಓದ್ಬೇಕು ಅನ್ಸುತ್ತೆ" ಮುಖ

ದಿಟ್ಟಿಸುತ್ತ ನುಡಿದ.

"ಸಧ್ಯ ಆ ಮಾತಾದ್ರೂ ಹೇಳಿದಲ್ಲ ಸಾಕು ಕೂತ್ಕೋ" ಮಂಚದ ಮೇಲೆ ಕುಳಿತಳು. ರಾಜು ಮತ್ತೊಂದು ಬದಿಗೆ ಕುಳಿತ. "ಹೀಗೆ ನಮ್ಮದೇ ಆದ ಒಂದು ಮನೆ ಇದ್ರೆ ಎಷ್ಟು ಚನ್ನಾಗಿರುತ್ತಲ್ಲ?" ಆಸೆಯಿಂದ ರಾಜುನನ್ನು ಕಣ್ಣಲ್ಲಿ ತುಂಬಿಕೊಳ್ಳುತ್ತ ಕೇಳಿದಳು.

"ನಾನೂ ಅದನ್ನೇ ಯೋಚ್ನೆ ಮಾಡ್ತಿದ್ದೆ"

"ನಾನು ನಿನ್ನ ಮುಂದೆ ಎಷ್ಟು ಚನ್ನಾಗಿ ನೋಡ್ಕೊಳ್ತೀನಿ ಗೊತ್ತಾ?"ಹೃದಯ ತುಂಬಿ ಕೇಳಿದಳು.

ಅಷ್ಟೇನಿರ್ಲಕ್ಷದಿಂದ "ಇಲ್ಲ" ಎಂದ.

"ಥೂ ನಿನ್ನ ಹುಂ... ಅಂದ್ರೆ ಏನಾಗುತ್ತೆ?"ಹುಸಿ ಮುನಿಸಿನಿಂದ ಹಿಂದೆ ಸರಿದು ನುಡಿದಳು.

"ಸುಳ್ಳೇಗೆ ಹೇಳೋದು? ತೋರ್ಸಿದ್ರೆ ಒಪ್ಕೊಳ್ತೀನಿ" ಸವಾಲಿನಂತೆ ನುಡಿದ.

ಲಜ್ಜೆಯಿಂದ ರಂಗಾದ ಲಕ್ಷ್ಮಿಯ ಮೌನಕ್ಕೆ ತಾನೇ ಒಂದು ಪ್ರಶ್ನೆ ಹಾಕಿದ. "ಲಕ್ಷ್ಮಿ ಮದುವೆಯಿಲ್ಲದ ಪ್ರೇಮ ಅರ್ಥವಿಲ್ಲದ್ದು. ಮದುವೆಯಾಗಿ ಪ್ರೀತಿಸ್ಬೇಕು ಅಂತಾರಲ್ಲ ನಿಜನಾ?" ಕೇಳಿದ.

"ಇನ್ನೊಂದ್ಸಾರಿ ಹೇಳು?"

"ಮದುವೆ ಇಲ್ಲದ ಪ್ರೇಮ ಅರ್ಥಹೀನವಂತೆ,ಮದ್ವೆ ಮಾಡ್ಕೊಂಡು ಪ್ರೀತಿಸ್ಬೇಕಂತೆ..."ಮರಳಿ ನುಡಿದ.

ಅದನ್ನೆ ಎರಡು ಮೂರು ಬಾರಿ ತನ್ನಲ್ಲಿ ಹೇಳಿಕೊಂಡ ಲಕ್ಷ್ಮಿ ಕೋಪಗೊಂಡು "ಯಾರು ಹೇಳಿದ್ದು? ಯಾರೋ ಪ್ರೀತಿ ಮಾಡ್ಲಿಕ್ಕೆ ಧೈರ್ಯಎಲ್ದೋರು ಈ ಮಾತು ಹೇಳಿದ್ದಾರೆ ಅಷ್ಟೆ.ಇದಕ್ಕೆ ಅರ್ಥ ನನ್ನತ್ರ ಇದೆ" ಎಂದಳು ಧೃಢವಾಗಿ.

"ನಿಜವಾಗಿಯೂ?" ಸಂಶಯದಿಂದ ಪ್ರಶ್ನಿಸಿದ.

"ಬಾ ಎದ್ದು, ನೇರವಾಗಿ ನಿಲ್ಲು" ಎಂದಳು .

ಇಬ್ಬರೂ ಮಂಚದಿಂದ ಕೆಳಗಿಳಿದು ಎದುರಬದರು ನೇರವಾಗಿ ನಿಂತರು. ರಾಜು ಅರ್ಥವಾಗದೆ ಮುಖ ನೋಡಿದ.ಇಬ್ಬರಿಗೂ ಒಂದು ಅಡಿಯ ಅಂತರ.

ನನ್ನ ಮುಖದ ರೆಪ್ಪೆ ಬಡಿಯದಾಗೆ ನೋಡು. ನನ್ನ ದೇಹದ ಕಣಕಣದಲ್ಲಿ ನಿನ್ನ ಸಂಚಾರ ಆಗ್ಬೇಕು.ನಿನ್ನಲ್ಲಿ ನಾನು" ಗಡುಸಾಗಿ ಸ್ಪಷ್ಟವಾಗಿ ನುಡಿದಳು. ಒಬ್ಬರನ್ನೊಬ್ಬರು ತೀಕ್ಷಣವಾಗಿ ದಿಟ್ಟಿಸುತ್ತ ನಿಂತರು. ಎಲ್ಲೋ ತೇಲುವಂತ ಹೊಸ ಅನುಭವ. ಮಾನಸಿಕವಾಗಿ ಒಬ್ಬರನ್ನೊಬ್ಬರು ಆವರಿಸಿ ಬೆರೆತರು. ಇಬ್ಬರ ಕಣ್ಣು ಕೆಂಪಾಗುತ್ತ ಹೋಯಿತು. ತುಟಿ ಕಂಪಿಸಿದವು.ಒಬ್ಬರ ಪ್ರತಿಬಿಂಬ ಒಬ್ಬರಲ್ಲಿ ಕಂಡರು. ಒಬ್ಬರ ಬಿಸಿಯುಸಿರು ಒಬ್ಬರಿಗೆ ತಾಕಲಾರಂಭಿಸಿತು. ಹೊಡಲಲ್ಲಿ ಮಧುರ ಕಂಪನ, ದೇಹ ಕೊಬ್ಬಿದಂತೆ ಭಾರ, ಎದೆ ಬಿರಿದಂತೆಯೇ ಭಾಸ. ಲಕ್ಷ್ಮಿ ಸೋತಳು "ಇಷ್ಟೆ ರಾಜು ಅರ್ಥ ಮಾಡ್ಕೋ" ಆವೇಗದಿಂದ ನಲ್ಲನ ತಬ್ಬಿದಳು. ತೋಳಿಗೆ ಬಲ ಬಂದಂತೆ ಕಾಲು ಶಕ್ತಿ ಹೀನವಾದವು.

೧೫

ಮಂಜಮ್ಮ ಹೂ ಕಟ್ಟುತಿರುವಂತೆ ಧಾವಿಸಿದ ರಾಜು ಕುರ್ಚಿಯ ಮೇಲೆ ಕುಳಿತ."ಅಮ್ಮಾ ಆ ಹೂ ದೇವ್ರಿಗಿಂತ ಹೆಣ್ಮಕ್ಕಳಿಗೆ ಮುಡ್ಸಿದ್ರೆ ಚಂದ ಅಲ್ವೇನಮ್ಮ?"

"ಹೌದು ನೀನೇನು ಮದುವೆಯಾಗಂಗಿದ್ದಿಯೊ?" ಕೇಳಿದರು. ·

ತಾಯಿ ಇಷ್ಟು ದಿನಕ್ಕೆ ಅಷ್ಟು ಬಾಯಿ ಬಿಟ್ಟದ್ದೆ ಅನೀರ್ವಾಚನೀಯ ಸಂತೋಷವಾಯಿತು. "ಆಗ್ಬಹುದಿತ್ತು. ಆದ್ರೆ ಎಂತವ್ರು ಗೊತ್ತೇನಮ್ಮ?"ತಾನೆ ಪ್ರಶ್ನಿಸಿದ,

"ಏನು ಮನಸ್ಸು ಬದ್ಲಾಯಿಸಿದ ಪಾಪು?" ಅಚ್ಚರಿಯಿಂದ ಕೇಳಿದರು.

"ಹಲ್ಲಿ ನಮ್ಮ. ನಾನು ಮದ್ವೆಯಾಗೋ ಹೆಣ್ಣು ಹೇಗಿರ್ಬೇಕು ಗೊತ್ತಾ?"

"ಹೇಳೋ ಪಾಪು ಅವ್ರನ್ನೇ ತಂದು ಮಾಡ್ತೀವಿ. ಬೇಗ ಹೇಳೊ .." ಅತ್ಯಾನುದದಿಂದ ಕೇಳಿದಳು.

"ಪಕ್ಕದ್ಮನೆ ಲಕ್ಷ್ಮಿ ಇದ್ದಾಳಲ್ಲಮ್ಮ ಅವಳಾಗಿದ್ರೆ ಸಾಕು. ಅವಳಾಗೇನು? ಅವ್ರೇ ಆದ್ರೂ ಪರವಾಯಿಲ್ಲ ಅವ್ಮ" ಆಸೆಯಿಂದ ನುಡಿದ ಹೃದಯದ ಬಡಿತ ಹೆಚ್ಚಿತು.

ಮಂಜಮ್ಮ ಶಂಕೆಯಿಂದ ಉಬ್ಬು ಗಂಟಾಕಿ ಕಣ್ಣಂಚಿನಿಂದ ಮಗನನ್ನು ದಿಟ್ಟಿಸಿದರು. ಮಗ ಬಲು ಹಿಗ್ಗಿನಲ್ಲಿರುವಂತೆ ಕಂಡ.

"ನನ್ನ ಮನಸ್ಸು ಬದಲಾಯಿಸಿದವ್ರೂ ಅವ್ರೇಕಣಮ್ಮ ಇಲ್ಲಾಂದ್ರೆ ಈ ಜೀವನ

ಪರ್ಯಂತ ಸನ್ಯಾಸಿಯಾಗಿದ್ದು ಎತ್ತುವರ ಹೊಟ್ಟೆ ಉರಿಸ್ಬೇಕಲ್ಲ ಅಂತ ಯೋಚ್ನೆ ಆಗಿತ್ತು. ನೀವೂ ಇದೆಲ್ಲಾಬ್ಬ ಮಗ ಮದುವೆಯಾಗ್ಲಿಲ್ಲಾಂತ ಹೇಳ್ಕೊಂಡು, ಕಂಡಕಂಡ ವರೆದುರಿಗೆಲ್ಲ ಕಣ್ಣೀರಿಡೋದು ನನಗೆ ಇಷ್ಟವಾಗ್ಲಿಲ್ಲಮ್ಮ .ಅಮ್ಮಾ ಲಕ್ಷ್ಮಿಗೂ ನಂಗೂ ಮದ್ವೆ ಮಾಡ್ರಮ್ಮ" ಎಂದ.

ಮಂಜಮ್ಮ ಪ್ರಶಾಂತವಾಗಿ ಕೇಳಿ 'ಆಯ್ತು ನಿಮ್ಮಪ್ಪಂಗೂ ಹೇಳ್ಬಿಡು" ಎಂದು ತನ್ನ ಜವಾಬ್ದಾರಿ ಕಳೆದುಕೊಂಡಳು.

"ನಿನಗಿಷ್ಟ ತಾನೆ?"

"ನೀನು ಏನ್ಮಾಡಿದ್ರೂ ಇಷ್ಟ" ಎಂದು ಮಾತು ಮುಗಿಸುವಷ್ಟರಲ್ಲೇ ಬಂದ ವೆಂಕಟಯ್ಯ "ಮಂಜೀ ಕೇಸರಿಬಾತ್ ಆಯ್ತೇನೆ?" ರೂಮಿನಿಂದ ಬರುತ್ತ ಕೇಳಿದರು.

"ಆಯ್ತು ಕೊಡ್ತೀನಿ ಬರ್ರಿ" ಎನ್ನುತ್ತ ಹೂವಿನ ಹಾರ ಎತ್ತಿಕೊಂಡು ಒಳಗೆ ನಡೆದಳು.

ಮಗನ ಎದುರಿಗೆ ಕುಳಿತ ವೆಂಕಟಯ್ಯ "ಹೇಗೆ ಸನ್ಯಾಸಿಯುವರ ಜೀವನ?" ತಂದೆ ಬರುತಿದ್ದಂತೆ ಗಂಭೀರವದನನಾದ ಮಗನಿಗೆ ಕೇಳಿದರು.

'ಮೊದಲು ಕಷ್ಟ ಅನ್ನಿಸಿತ್ತು ಅಪ್ಪ " ಎನ್ನುತಿದ್ದಂತೆ ಮುಂದಿನದನ್ನು ತಾವೇ ಹೇಳಿದರು "ಈಗ ಆರಾಮುವಾಗೀದ್ದಿಯಲ್ಲ" ವ್ಯಂಗ್ಯವಾಗಿ ನುಡಿದರು. ಅರ್ಥಮಾಡಿ ಕೊಳ್ಳದ ರಾಜು ಸಂತೋಷದಿಂದ 'ಹ್ಞೂ' ಗುಟ್ಟಿ ಜೋರಾಗಿ ತಲೆ ಹಾಕಿದ.

ಮಂಜಮ್ಮ ತಂದ ಕೇಸರಿಬಾತ್ ಘ್ರಾಣೇಂದ್ರಿಯುವನ್ನು ಕೆಣಕುತ್ತ ಟೀಪಾಯ್ ಮೇಲೆ ಕುಳಿತಿತ್ತು. ಎರಡೇ ಪ್ಲೇಟು ರಾಜುಗೆ ಇಲ್ಲ.

"ಪಾಪು ತಿಂತಿಯೆನೋ?"ಕೇಳಿದಳು ಮಂಜಮ್ಮ.

ರಾಜು ತನ್ನ ಅಭಿಪ್ರಾಯ ತಿಳಿಸುವ ಮುನ್ನವೇ "ಅವ್ನುಸನ್ಯಾಸಿ ಕಣೇ ತಿನ್ನಲ್ಲ. ನೀನು ತಿನ್ನು" ಎಂದರು ಪತ್ನಿಗೆ.ಮೂಗು ತಿರುವಿದ ರಾಜು–"ನಾನು ರಾತ್ರಿಗೆ ಊಟ ಮಾಡೊಲ್ಲ ಅದಕ್ಕೆ ಈಗ್ಲೆ ಕೇಸರಿಬಾತ್ ತಿಂತೀನಿ' ಹಠ ಹಿಡಿದವನಂತೆ ನುಡಿದ,

'ಲೋ ಬಡ್ಡಿಮಗನೆ ನಿನ್ನಾಟ ನನಗೊತ್ತಿಲೇನೋ?' ಮಗನೆ ಕಡಗೆ ತಿರುಗಿ ವ್ಯಂಗ್ಯವಾಗಿ ನುಡಿದರು.

'ಏನಪ್ಪ ಅದು?' ಸಾವರಿಸಿಕೊಂಡು ಪ್ರಶ್ನಿಸಿದ.

"ಲೋ ಅವತ್ತು ಸನ್ಯಾಸಿ ನಾಟ್ಕ ಮಾಡ್ಲಿಕ್ಕೆ ಆರಂಭಿಸಿವಲ್ಲ ಅವತ್ತೇ ಗೊತ್ತಾಯ್ತು ಕಣೋ... ಅವತ್ತು ತಿಂಡಿ ಬಿಟ್ಟು ಒಂದು ಹುಡುಗಿಯೊಂದಿಗೆ ಹೋಟ್ಲಲ್ಲಿ ಪಟ್ಟಾಗಿ ಹೊಡೆದದ್ದು ನೋಡ್ದೆ,ಸನ್ಯಾಸಿ ತಿಂಡಿ ಬಿಟ್ಟು ದುಡ್ಡು ಕಿತ್ತ.ನಾನೂ ಕಿತ್ತಷ್ಟು ಕೊಟ್ಟೆ ಯಾಕೆ? ನೀನು ಆಡೋ ಆಟ ನೋಡ್ಲಿಕ್ಕೆ.ಹೇಗೆ ಹೋಟ್ಲು ತಿಂಡಿ?" ಛೇಡಿಸಿದರು ಮಗನನ್ನು.

ರಾಜು ಸಿಕ್ಕಾಕಿಕೊಂಡ, ಹೇಗೇಗೊ ಆಯಿತು. ಅಪಮಾನ ಸಹಿಸಲಾರದೆ ತಾಯಿಯ ಕಡೆ ತಿರುಗಿ "ಅಮ್ಮಾ...ನೋಡಮ್ಮ ಅಪ್ಪನ್ನಾ..."ಎಂದು ನಾಚಿಕೆಯಿಂದ ಮುಖ ಮುಚ್ಚಿಕೊಂಡ .

ಮಂಜಮ್ಮ ಜೋರಾಗಿ ನಕ್ಕಳು. ವೆಂಕಟಯ್ಯ ಸಮಾಚಾರವೆಲ್ಲ ಹೇಳಿದ್ದರೂ ಅರಿಯದವಳಂತೆ ಸುಮ್ಮನಿದ್ದಳು."ಹೋಗ್ಲಿ ಸುಮ್ನಿರ್ರೀ ..ನಾಚ್ಕೊಂತಾನೆ" ನಗುತ್ತ ಮಗನ ಕೆನ್ನೆ ಸವರಿ ಹೇಳಿದಳು.

"ಹಾ...ಹಾ...ನಾಚಿಕೆ? ಕಾಲೇಜಿಗೆ ಎಷ್ಟು ದಿನ ಹೋಗಿದ್ದಾನೆ ಕೇಳು? ಕಾಲೇಜಿನಲ್ಲಿ ಅಟೆಂಡೆನ್ಸ್ ಎಲ್ಲ ತೆಗಿಸಿ ನೋಡಿದ್ದೀನಿ" ಎಂದರು.

ರಾಜ ಪ್ರಾಟ ಸಂಕಟಕ್ಕೆ ಸಿಲುಕಿದ. "ಅಪ್ಪ ನನಗೆ ವಿದ್ಯೆ ತಲೆಗೆ ಅತ್ಲಿಲ್ಲ ಅದಕ್ಕೆ ಓದ್ಲಿಲ್ಲ. ಯೌವನ ಚನ್ನಾಗಿ ದೇಹ ಹತ್ತಿತ್ತು ಪ್ರೇಮಿಸಿದೆ. ತಪ್ಪಾ? ಅದು ಸರಿ ನಾವು ಪ್ರೇಮಿಸ್ತಿದ್ದೀವಿ ಅಂತ ಗೊತ್ತಿದ್ದೂ ನೀನೇಕೆ ಸುಮ್ನಿದ್ದೆ?" ಕೇಳಿದ.

"ಸುಮ್ನಿರ್ದೆ ಏನ್ಮಾಡ್ಲಿ ಹೇಳು?ರಾಜು.ನಮಗೆ ಹುಡುಗಿ ಹಿಡಿಸಿದ್ಲು ಕಣೋ... ಜೊತೆಯಲ್ಲಿ ನೀನು ಇಷ್ಟ ಪಟ್ಟಿದ್ದೀಯಾ. ನೀನು ನಮ್ಮನ್ನ ಬಿಟ್ರೂ ಅವ್ಳನ್ನ ಬಿಡಲ್ಲ ಅನ್ನೋದು ಗೊತ್ತು.ಲಕ್ಷ್ಮಿ ಮಹಾಲಕ್ಷ್ಮಿಯಾಗಿ ಈ ಮನೆಗೆ ಬಂದ್ರೆ ನಾವ್ಯಾಕೆ ಬೇಡ ಅನ್ಲಿ ಹೇಳು? ನಿನ್ನ ಸುಖನೇ ನಮ್‌ಸುಖ.ಎರಡು ಲಕ್ಷ ದುಡ್ಡು ಮಾಡಿಟ್ಟಿದ್ದೀನಿ. ಸದುಪಯೋಗ ಪಡಿಸಿಕೊಂಡು ಬದುಕೊ ದಾರಿ ನೋಡು" ಎಂದರು ವೆಂಕಟಯ್ಯ ಗಂಭೀರರಾಗಿ.

ರಾಜನಲ್ಲಿ ನರಗಳ ಮಿಡಿತ ಆರಂಭವಾಯಿತು. ಎದ್ದು ಕುಣಿಯುವ ಬಯಕೆ ತಡೆದು "ಅಪ್ಪಾ ಹಾಗಾದ್ರೆ ಮದುವೆ ವಿಷಯ ಮಾತಾಡ್ಬಿಡಿ" ಎಂದ.

"ನೋಡ್ದೇನೆ ಇವ್ನಿಗೆ ನಾಚಿಕೆ ಎಂದೆ.ಅದಿಲ್ಲದೆ ಹೇಗೆ ಮದ್ವೆಮಾಡ್ರಿ ಅಂತಿದ್ದಾನೆ"

ಹೆಂಡತಿ ಕಡೆ ತಿರುಗಿ ನುಡಿದು ಮತ್ತೆ ಮಗನಿಗೆ"ಇವತ್ತು ಅದೇವಿಷಯ ಮಾತ್ನಾಡ್ಲಿಕ್ಕೆ ಅವ್ರು ಮನೆಗೆ ಹೋಗ್ತೇವೆ, ಹೋಗೋಕ್ಮುಂಚೆ ನಮ್ಮ ಸಂತೋಷಕ್ಕೆ ಈ ಸಿಹಿ ತಿಂಡಿ" ಎಂದರು.

ಹಾಗಾದ್ರೆ ಅಪ್ಪಾ ನನಗೆ ಸ್ವೀಟ್ ಬೇಡಾ.ನನ್ನದನ್ನೂ ನೀವೆಹಂಚ್ಕೊಂಡ್ ತಿನ್ನಿ ಆ...ಹಾ ..ಲಕ್ಷ್ಮಿಗೂ ನಂಗೂ ಮದುವೆ ಓ. ಹೋ..." ಸಂತೋಷ ತಡೆಯಲಾರದೆ ಅಬ್ಬರಿಸಿನೆಗೆದ. ರಾಜು ಚಪ್ಪಾಳೆ ಹಾಕುತ್ತ ನರ್ತಿಸತೊಡಗಿದ.

"ನೋಡ್ದೇನೆ ಅವ್ನ ಸಂತೋಷನಾ, ಹೇಗೆ ಕುಣಿದಾಡ್ತಾನೆ..."ಪ್ರೀತಿಯಿಂದಲೆ ನುಡಿದರು ವೆಂಕಟಯ್ಯ.

"ಹೌದು ಹೀಗೆ ಇರ್ಬೇಕು. ಅಲ್ನೋಡಿ"ಎಂದು ಕುಣಿವ ಮಗನ ಕಡೆ ಕೈ ತೋರಿ ಗಂಡನೊಂದಿಗೆ ತಾನೂ ಕೇಸರಿಬಾತ್ ತಿನ್ನತೊಡಗಿದಳು.

ರಾಜು ಮನದಲ್ಲಿ "ನಂಗೂ ಲಕ್ಷ್ಮಿಗೂ ಮದ್ವೆ"ಎನ್ನುತ್ತಲೇ ಮೇಲು ಮೇಲಕ್ಕೆ ಹಾರಿದ, ಸಾಕಷ್ಟು ಕುಣಿದು ಆಯಾಸದಿಂದ ಬೆವರು ಮೂಡಿದಾಗ ನಿಧಾನಗೊಳಿಸಿ ಕುಣಿತ ಮತ್ತೆ ಜೋರುಗೊಳಿಸಿದ. ಸೆಗೆತಗಳು ಒಂದು .ಎರಡು ..ಮೂರು .. ಮುಕ್ತಾಯ.ನಿಲ್ಲಿಸಿ,ಮಂಕನಂತೆ ನಿಂತ.ಮುಖವೆಲ್ಲ ಬಿಳಿಚಿಕೊಂಡಿತು. ಕಣ್ಣು ಗರಗರನೆ ತಿರುಗಿ ನಿಂತವು.ತೂಗುಯ್ಯಾಲೆಯಲ್ಲಿ ತೂಗಿದಂತಾಯಿತು. ತಲೆಯೊಳಗೆ ಸಿಡಿಲಿನಂತೆ ಆಸ್ಫೋಟನೆ, ನೇರವಾಗಿ ನಿಲ್ಲಲಾರದೆ ಬಾಗಿನಿಂತು ಬಲಿಷ್ಟ ತೋಳುಗಳಿಂದ ಕಿವಿಯ ಮೇಲ್ಭಾಗಕ್ಕೆ ವಿರುದ್ದ ದಿಕ್ಕಿನಿಂದ ಒತ್ತಿ ಹಿಡಿದ.ನಿಲ್ಲದ ವಿಚಿತ್ರ ಸೆಳೆತ ಬೆರೆತ ನೋವು ಗಂಡ ಹೆಂಡತಿ ಇದಾವುದು ಅರಿವಿಲ್ಲದೆ ತಿಂಡಿ ತಿನ್ನುತಿದ್ದರು.

ಒಮ್ಮೆಲೇ "ಅಮ್ಮಾ .." ಮಹಡಿಯೆ ಹಾರಿ ಹೋಗುವಂತೆ ಕೂಗಿ ಕುಸಿದ. ಕೈ ಕಾಲು ಸೆಟೆದುಕೊಂಡವು. ಗಂಟಲಿನಿಂದ 'ಹಾ .' ಎಂಬ ವಿಚಿತ್ರ ಉದ್ಗಾರದ ಕೂಗು ಹೊರ ಬಿದ್ದಿತು.

ಆತಂಕದಿಂದ ಗಂಡ ಹೆಂಡತಿ ಮುಖ ನೋಡಿಕೊಂಡು ಎದ್ದು ಓಡೋಡಿಬರುತ್ತ "ಯಾಕೊ ಪಾಪು ಏನಾಯ್ತು?"ಏಕ ಕಾಲಕ್ಕೆ ಕೇಳಿದರು. ಹತ್ತಿರ ಬಂದು ಹಿಡಿಯುವ ಷ್ಟರಲ್ಲಿ ನೆಲ ಕಚ್ಚಿದ್ದವನನ್ನು ಕಾಲು ಮೇಲೆ ಎಳೆದುಕೊಂಡ ಮಂಜಮ್ಮ "ಗೋಳೋ" ಎಂದು ರೋಧಿಸತೊಡಗಿದಳು."ಅಯ್ಯೋ ನನ್ ಕಂದ ಏನಾಯ್ತೊ? ಅಯ್ಯೋಹೋಗ್ರಿ

ನೀರು ತರ್ರೀ" ಮಗನ ವಿಕಾರ ಮುಖ ನೋಡುತ್ತ ಮುಖ ಸವರಿ, ತಲೆ ಕೂದಲಲ್ಲಿ ಬೆರಳಾಡಿಸಿದಳು. ಬೆವೆತ ಮುಖಕ್ಕೆ ಸೆರಗಿನಿಂದ ಗಾಳಿ ಬೀಸುತ್ತ ಗಟ್ಟಿಯಾಗಿ ಅತ್ತಳು.

ವೆಂಕಟಯ್ಯನಿಗೆ ಅರ್ಥವಾಯಿತು, ಬಾಲ್ಯದ ರೋಗ ಮರುಕಳಿಸಿತು. ಹೆಂಡತಿ ಹೇಳಿದಂತೆ ನೀರು ತಂದಿಟ್ಟು "ಪಾಪು ..ಪಾಪು " ಗದ್ಗದಿತರಾಗಿ ಮೈ ಕೈ ಮುಟ್ಟಿ ದುಃಖಿಸಿದರು.

ಹೃದಯ ಛಿದ್ರಛಿದ್ರವಾಯಿತು. ಗತಿಸಿದ ದಿನಗಳು ಮನಚಕ್ಷುವಿನ ಮೇಲೆ ಮೂಡಲಾರಂಭಿಸಿದವು.

ಹತ್ತೊಂಬತ್ತು ಇಪ್ಪತ್ತು ವರ್ಷಗಳ ಹಿಂದೆ ಗಂಡ ಹೆಂಡತಿ ಐದು ವರ್ಷದ ಮಗ ರಾಜನೊಂದಿಗೆ ಧರ್ಮಸ್ಥಳಕ್ಕೆ ಬೇಟಿ ಇತ್ತಿದ್ದರು.ಮಂಜನಾಥನ ಮಹಿಮೆಯ ಮಂಗಳ ಕಾರ್ಯದಲ್ಲಿ ದಂಪತಿಗಳಿಗೆ ಎಲ್ಲಿಲ್ಲದ ನೆಚ್ಚು,ದರ್ಶನಕ್ಕೆ ಹೋಗುವ ಮುನ್ನದಾರಿ ಯಲ್ಲಿ ಸಿಗುವ ನೇತ್ರಾವತಿ ಪುಣ್ಯ ನದಿಯಲ್ಲಿ ಮಿಂದು ದೇಹದ ಭಾರ ಕಳೆದುಕೊಂಡು ಅಂತರಂಗದ ಶುದ್ಧಿಗೆ ಸ್ವಾಮಿಯ ಸನ್ನಿದಿಗೇ ಹೋಗಬೇಕು.ಸ್ನಾನದ ಜಾತ್ರೆಯೆ ಅಲ್ಲಿ ನೆರೆದಿತ್ತು.ಬಸ್ಸಿನಿಂದ ಗಂಡ ಹೆಂಡತಿ ಮಗ ಸಂತೋಷದಿಂದ ಇಳಿದರು. ತಂದಿದ್ದ ಸೂಟ್‌ಕೇಸ್, ಬ್ಯಾಗ್ ತಲಾಗೊಂದೊಂದು ಹಿಡಿದು ಪ್ರೇಮ ಪುತ್ರನ ಕೈ ಹಿಡಿದುಕೊಂಡು ಹೊರಟರು. ಮೈಕ್‌ನಲ್ಲಿ ಭಕ್ತರಿಗೆ ಆದೇಶ ನೀಡಲಾಗುತಿತ್ತು. "ಕಳ್ಳ ಕಾಕರಿದ್ದಾರೆ, ನಿಮ್ಮ ಬಂಗಾರದ ಒಡವೆಗಳನ್ನು ಇಲ್ಲಿ ಕೊಟ್ಟು ಹೋಗುವುದು. ಹಿಂತಿರುಗಿ ಹೋಗುವಾಗ ತೆಗೆದುಕೊಂಡು ಹೋಗುವುದು" ಎಂದು ಒಂದೇ ಸಮನೆ ಆದೇಶಿಸುತ್ತಿದ್ದರು.

ಉಲ್ಲಾಸದಿಂದ ಮೂವರು ನೀರಿನ ಕಡೆ ಧಾವಿಸುತ್ತಿರುವಾಗ ವೆಂಕಟಯ್ಯ ಪ್ರೀತಿಯ ಮಡದಿಗೆ "ಮಂಜಿ ಮದುವೆ ಆದ್ಮೇಲೆ ಒಂದ್ಸಾರಿ ಬರ್ಬೇಕೂಂತ ಇದ್ದೆ. ಇಷ್ಟು ದಿನ ಕಾಯ್ಬೇಕಾಯ್ತು" ಎಂದ ಹರ್ಷಚಿತ್ತದಿಂದ.

ಆಗಿನ ಬಟ್ಟಲ ಗಣ್ಣಿನ ಮಂಜಮ್ಮ "ಹೌದ್ರಾ? ಇನ್ನೊಂದು ಮಗು ಆದ್ಮೇಲೆ ಮತ್ತೆ ಬರೋಣ ಸುಮ್ನಿರ್ರಿ" ಎಂದು ಮತ್ತೊಂದು ಮಗುವಿನ ಬಯಕೆ ತೋರಿದಳು.

"ಅಯ್ಯೋ ಮೆಲ್ಲಗೆ ಮಾತಾಡೆ, ಸ್ವಾಮಿ ಇಲ್ಲೇ ಇದ್ದಾನೆ. ಕೇಳಿಸ್ಕೊಂಡಾನು" ಹಾಸ್ಯಮಯವಾಗಿ ಪಿಸುಗುಟ್ಟಿದಾಗ, ನಾಚಿಕೆಯಿಂದ ಮಂಜಮ್ಮ ಗಂಡನೊಂದಿಗೆ ನಕ್ಕಳು. ಅರ್ಥವಾಗದೆ ರಾಜು ಇಬ್ಬರೂ ನಕ್ಕಿದಕ್ಕೆ ತಾನೂ ಕೇಕೆ ಹಾಕಿ ನಕ್ಕ.

"ಹಾ...ಇಲ್ಲೇ ಸ್ನಾನ ಮಾಡ್ರಿ. ಮುಂದಕ್ಹೋದ್ರೆ ನೀರಿನ ಸೆಳೆತ" ಎಚ್ಚರಿಸಿ ಬ್ಯಾಗ್ ಕೆಳಗಿಟ್ಟಳು.

"ನೀನು?"

"ನಂಗೆ ಬೇಡ ಕೈಕಾಲು ಮುಖ ತೊಳಿತೀನಿ ಸಾಕು" ಎಂದು ನೀರಿಗಿಳಿದು ಸೋಪಚ್ಚಿ ತೊಳೆದುಕೊಳ್ಳುತ್ತಿದ್ದಂತೆ, ವೆಂಕಟಯ್ಯ ಮೊಳ ಕಾಲವರೆಗಿನ ಪಟ್ಟೆ ಚಡ್ಡಿ ಯಲ್ಲಿ ಹೊರಟ."ಬಾರೋ ಪಾಪು ನೀನು ನನ್ ಜೊತೆ, ತಲೆ ತೋಯಿಸಿ ಕೊಳ್ಬೇಡ, ಇರು ನಾನು ಒಂದು ಮುಳುಗು ಹಾಕ್ತೀನಿ" ಎಂದು ನೀರಿಗೆ ಇಳಿದ.ಸುತ್ತಲು ಭಕ್ತಾದಿ ಗಳು ಕೂಗಾಟ, ನಗು, ಗೇಲಿ ಎಲ್ಲಾ ಏಕತಾನವಾಗಿ ನಡೆಯುತಿತ್ತು.ದಡದಲ್ಲಿ ಕೈಕಾಲು ಹೊರೆಸಿಕೊಳ್ಳುತಿದ್ದ ಮಂಜಮ್ಮಳಿಗೆ"ಅಮ್ಮಾ...ಅಮ್ಮಾ...ಅಪ್ಪನ್‌ನೋಡು"ಚಪ್ಪಾಳೆ ತಟ್ಟುತ್ತ ನಗುತ್ತ ತೋರಿಸಿದ. ನೋಡಿ ಮಗನ ಸಂತೋಷಕ್ಕೆ ತಾನು ನಕ್ಕಳು.

"ಹೋಯ್ ಪಾಪು ಮತ್ತೆ ಮುಳುಗ್ತೀನಿ ನೋಡು" ಎಂದು ಮೂಗು ಕಣ್ಣು ಮುಚ್ಚಿ ಮತ್ತೆ ಮುಳುಗಿ ಏಳುತಿದ್ದಂತೆ ವಿಸ್ಮಯದಿಂವ ಕಿಲಕಿಲ ನಗುತ್ತ ಚಪ್ಪಾಳೆ ತಟ್ಟಿದ. ಹೀಗೆ ನಾಲ್ಕಾರು ಬಾರಿ ಮುಳುಗು ಹಾಕಿ ಪತ್ನಿ ಪುತ್ರರಿಬ್ಬರಿಗೂರಂಜಿ ದರು.

"ಏನ್ರಿ ದೇವಸ್ಥಾನಕ್ಕೆ ಹೋಗಲ್ವ ಮಗನ ಜೊತೆ ಆಟ ಹಾಡ್ತಾ ಕುಂತ್ರಲ್ಲ? ಅವಸರ ಪಡಿಸಿದಳು ಮಂಜಮ್ಮ.

"ಆಯ್ತು. ಬಾರೋ ಪಾಪು" ಎನ್ನುತ್ತ ದಡಕ್ಕೆ ಬಂದು ಮಗನ ಕೈಹಿಡಿದು ಹೊರಟರು "ಅಪ್ಪ ಅಪ್ಪ ನಾನು ನಿನ್ನಂಗೆ ಮುಳುಗ್ತೀನಿ" ಹೆಮ್ಮೆಯಿಂದ ನುಡಿದ ಪುಟ್ಟ ರಾಜು.

"ಬೇಡಪ್ಪ.ತಲೆ ಸ್ನಾನ ನಿಂಗೆಬೇಡ" ಎಂದು ಪುಸಿ ಮಾಡಿ ಸೊಂಟ ಮಟ್ಟದ ನೀರಿಗಿಳಿದು, ಬೇಕೊ ಬೇಡವೋ ಎಂದು ನೀರಿಗೆ ಸೋಂಕಿಸುತಿದ್ದಂತೆ ಭಯದಿಂದ ಕಿಟಾರನೆ ಚೀರಿದ ರಾಜು. ಅರ್ಧ ಮುಳುಗಿ ಭೀತಿಯಿಂದ "ಯಾಕೊ ಪಾಪು

ಏನಾಯ್ತೋ?"ಕೇಳಿದ. ಮಗನಿಂದ ಮಾತಿಲ್ಲ,ಕತೆಯಿಲ್ಲ. ದೇಹ ಪೆಡುಸಾಗುತ್ತ ಹೋಯಿತು.ದಡದಲ್ಲಿ ವೀಕ್ಷಿಸುತಿದ್ದ ಮಂಜಮ್ಮ "ಅಯ್ಯೋ ಏನಾಯ್ತು"? ತಾಯಿ ಕರಳು ಅಬ್ಬರಿಸಿತು .

ಸುತ್ತಲಿನ ಹತ್ತಾರು ಜನ ನೋಡಿದರು.ವೆಂಕಟಯ್ಯ ಕುಗ್ಗಿದ ಮುಖದೊಂದಿಗೆ ಮಾತಿಲ್ಲದೆ ಮಂಜಮ್ಮನ ಕೈಗೆ ಹಾಕಿದರು ಮಂಜಮ್ಮಳ ದೊಡ್ಡ ಬಾಯಿ ನಾಲ್ಕಾರು ಜನರನ್ನು ಹತ್ತಿರ ಸೆಳೆಯಿತು. ಮಗನನ್ನು ತೊಡೆಯ ಮೇಲೆ ಹಾಕಿಕೊಂಡ ಮಂಜಮ್ಮಳ ಆಕ್ರಂದನ ಮುಗಿಲ ಮುಟ್ಟಿತು. ದುರ್ವಿಧಿಯನ್ನು ಅಳಿಯುತ್ತ ವೆಂಕಟಯ್ಯ ಬಳಿಯಲ್ಲಿ ನಿಂತರು.ಸುತ್ತಲೂ ಕವಿದ ಜನರ ದೊಡ್ಡ ಗುಂಪು'ಏನು? ಏನು?'ಎಂದು ಪ್ರಶ್ನಿಸಿ ಮನ ಮಿಡಿವ ದೃಶ್ಯಕಂಡು ಸುಮ್ಮನಾದರು. ನದಿಯ ನೀರೊಂದಿಗೆ ಬೆವರ ಹನಿಯನ್ನು ಮುಖದಿಂದ ಇಳಿಸುತ್ತ ಯಾತನೆ ಅನುಭವಿಸುತಿದ್ದರು ಪತಿ,ಪತ್ನಿಯರು.

ಗಿಡ ಮೂಲಿಕೆಗಾಗಿ ಬಂದಿದ್ದ ಜಡೆಯ ಸನ್ಯಾಸಿ ಸಮೀಪದಲ್ಲಿದ್ದವರಿಗೆ ಏನೆಂದು ವಿಚಾರಿಸಿ,ವಿಷಯ ತಿಳಿದು "ಎಲ್ಲಿ ಸ್ವಲ್ಪ ಜಾಗ ಬಿಡಿ" ಎನ್ನುತ್ತ ಜಾಗ ಮಾಡಿಕೊಂಡು ಮುಂದ ಬಂದು ನಿಂತು ಸೂಕ್ಷ್ಮವಾಗಿ ಬಾಲಕನನ್ನು ದಿಟ್ಟಿಸಿ"ಇವರ ತಂದೆ ಯಾರು?" ಮೆಲು ದನಿಯಲ್ಲಿ ಕೇಳಿದರು.

"ನಾನು ಸ್ವಾಮಿ" ದುಃಖದಿಂದ ಪಕ್ಕದಲ್ಲಿದ್ದ ವೆಂಕಟಯ್ಯ ಆ ನತದೃಷ್ಟ ತಾನೆ ಎಂಬಂತೆ ನುಡಿದರು.

ಒಮ್ಮೆ ಮುಖ ನೋಡಿ ಬಾಲಕನ ಕಡೆ ನೋಡಿದ ಸನ್ಯಾಸಿ ಏನೋ ಹೇಳ ಬಯಸಿದ, ರಾಜು ಛೇತರಿಸಿಕೊಳ್ಳುತಿದ್ದದ್ದು ಕಂಡು ಸುಮ್ಮನಾದ.ಅನಂತರ ತಾನೇ" ನೋಡಿ ಇಲ್ಲೇ ನಮ್ಮ ಗುರುಗಳು ಇದ್ದಾರೆ.ಔಷಧಿ ಕೊಡ್ತಾರೆ, ನೀವು ಅಲ್ಲಿಗೆ ಬಂದ್ರೆ ಸರಿಯಾಗ್ಬಹುದು.ಇದಕ್ಕೆಲ್ಲ ಚಿಂತಿಸ ಬೇಕಾಗಿಲ್ಲ" ಎಂದ.

"ಸ್ವಾಮೀ... ಇದು ಇತ್ತೀಚಿನದಲ್ಲ ಹುಟ್ಟಿದ್ಕಲಿಂದ್ಲೂ ಆಗಾಗ ಬರ್ತಾ ಇರುತ್ತೆ"

"ಏನೇ ಆಗ್ಲಿ ಬಂದು ಹೋದರೆ ನಿಮಗೊಳ್ಳೆಯದು, ಬರುವುದಾದರೆ ಈಗ ನನ್ನೊಂದಿಗೆ ಹೊರಡಿ" ಎಂದ.

ಸನ್ಯಾಸಿಯ ಭರವಸೆಯ ನುಡಿಯಲ್ಲಿ ಬೆಳಕು ಕಂಡ ವೆಂಕಟಯ್ಯನಿಗೆ ಆಸೆ ಮೂಡಿತು.ಹೋಗಿಬರುವುದೇ ಉತ್ತಮ ಎಂದು ಪಂಚೆ ಸುತ್ತಿಕೊಂಡ.ಎಚ್ಚರಗೆ ಇಂಡ ಮಗನನ್ನು ಎತ್ತಿಕೊಂಡು ಹೊರಟರು.ಮುಂದೆ ಸನ್ಯಾಸಿ, ಮಧ್ಯೆ ವೆಂಕಟಯ್ಯ, ಹಿಂದೆ ಬ್ಯಾಗು ಸೂಟ್‌ಕೇಸ್ ಹಿಡಿದ ಮಂಜಮ್ಮ.

"ನನ್ನ ಮಗಂಗೆ ಹೀಗಾಗಿ ಅನ್ನ ನೀರು ಸೇರಲ್ಲ ಸ್ವಾಮಿ.ಯಾವ ಪಾಪಕ್ಕೆ ನನಗಿ ಶಿಕ್ಷೆ ಕೊಟ್ಟೊ ದೇವ್ರು. ಪ್ರಾಮಾಣಿಕ ಕೆಲ್ಸ ಮಾಡಿ ಕೊಂಡಿದ್ದವನು, ಮುಂದಿನ ನನ್ನ ಮಗನ ಭವಿಷ್ಯಕ್ಕೆ ಲಂಚ ಹೆಚ್ಚಾಗಿ ತಗೊಂಡು ಕೆಲ್ಸ ಮಾಡ್ತೀನಿ. ಮೊದ್ಲು ನಾನು ಅನ್ಯಾಯ ಮಾಡ್ಲಿಲ್ಲ.ಆದ್ರೆ ದೇವ್ರು ನಂಗೆ ಅನ್ಯಾಯ ಮಾಡಿದಕ್ಕೆ ಪ್ರತಿಫಲ ತಗೊಳ್ತಿನಿ ನಾನು ಲಂಚ ತಗೊಳ್ಳಿಕ್ಕೆ ಅವ್ನೆ ಕಾರಣ" ಎಂದು ಮನದ ವೇದನೆ ನಿವೇದಿಸಿಕೊಂಡ.

ಆಲಿಸಿದ ಸನ್ಯಾಸಿ"ಇದೆಲ್ಲ ಮನುಷ್ಯ ಸಾಮಾನ್ಯರಿಗೆ ಸಂಸಾರದಲ್ಲಿನ ವ್ಯಾಮೋಹ ಇದು ಕ್ಷಣಿಕವಷ್ಟೆ. ಉದ್ಧಾತ್ತ ಮನೋಭಾವನೆಯಿಂದ ಬಾಳುವುದರಲ್ಲಿ ಸುಖ,ಶಾಂತಿ, ನೆಮ್ಮದಿ ಹುಡುಕ್ಬೇಕು" ಎಂದೇಳಿ ಮೌನವಾದ.

ಮತ್ತಷ್ಟು ದೂರ ನಡೆದ ಮೇಲೆ ಆಲದ ಮರದ ಕೆಳಗೆ ಕುಳಿತ ಬಿಳೀಗಡ್ಡ,ಕಾವಿ, ರುದ್ರಾಕ್ಷಿ ಸರದ ಮುದಿ ಸನ್ಯಾಸಿ ಜಪ ಮಾಡುತ್ತ ಕಣ್ಮುಚ್ಚಿದ್ದ. ಪಕ್ಕದಲ್ಲಿ ಇನ್ನೊಬ್ಬ ತರುಣ ಸನ್ಯಾಸಿ ನಿಂತಿದ್ದ.

ಸದ್ದಿಲ್ಲದೆ ಗಂಡ ಹೆಂಡತಿ ಅಡ್ಡ ಬಿದ್ದು ಆಶೀರ್ವಾದ ಬೇಡಿದರು. ಯಾರೆ ಈ ಬಂದ ಸದ್ದಿಗೆ ನಿಧಾನವಾಗಿ ಕಣ್ತೆರೆದು. ಎದುರಿಗೆ ಕಂಗೆಟ್ಟ ಮೂರು ಮುಖಗಳನ್ನು ನೋಡಿ, ಕರೆದು ತಂದ ಸನ್ಯಾಸಿ ಕಡೆಗೆ ಪ್ರಶ್ನಾರ್ಥಕ ನೋಟ ಬೀರಿದ.

ಶಿಷ್ಯ ಸೂಕ್ಷ್ಮವಾಗಿ ಹೇಳಿದ,ಕಣ್ಣಾರೆ ಕಂಡ ರೋಗ ಲಕ್ಷಣವನ್ನು ಕೇಳಿ ತಿಳಿದು ಕೊಂಡ ನಂತರ ವೃದ್ಧ ಮುನಿ.ಹಿಂದಿನಿಂದ ದೊಡ್ಡ ಗಂಟು ಬಿಚ್ಚಿ ಅದರಿಂದ ಹತ್ತಾರು ಸಣ್ಣ ಚೀಲ ತೆಗೆದು ಹೊರಗಿಟ್ಟ ಎಲ್ಲಾ ಬೇರೆ,ಬೇರೆ ಬಣ್ಣದ ಚೀಲಗಳು. ಹಳದಿ ಬಣ್ಣದ ಚೀಲ ತೆಗೆದುಕೊಂಡು ಗಂಟು ಬಿಚ್ಚಿ,ಹಚ್ಚ ಹಸಿರು ಹರಿತರಿಯಾದ ದುಂಡನೆ ಗುಳಿಗೆ ಕೈಗೆ ಸುರಿದುಕೊಂಡು ನೀಡುವಂತೆ ಮುಂದೆ ಚಾಚಿ, "ತಗೊಳ್ಳಿ ಈ ಗುಳಿಗೆ ಎರಡು ದಿನಕ್ಕೊಂದು ಕೊಡಿ.ಕಾಯಿಲೆ ಬರಲ್ಲ. ಬಂದ್ರೆ ಮತ್ತೆ ಕೊಡಿ "ಎಂದರು.

"ಸ್ವಾಮೀಜಿ ಇದು ಮುಗಿದ್ಮೇಲೆ?" ವಿನಯದಿಂದ ಕೇಳಿದ ವೆಂಕಟಯ್ಯ.

"ಮುಗಿದ್ಮೇಲೆ ತರಿಸ್ಕೋಬೇಕು. ಬೇಕಾದ್ರೆ ನಮ್ಮ ಶಿಷ್ಯ ವಿಳಾಸ ಕೊಡ್ತಾನೆ. ನಾನು ಸತ್ತ ಮೇಲೆ, ನನ್ನ ಶಿಷ್ಯರನ್ನು ತರಪೇತುಗೊಳಿಸಿರೋದ್ರಿಂದ ಕೊಡ್ತಾರೆ.ಶಂಕೆ ಇಲ್ಲದೆ ಕೊಡಿ ಆರೋಗ್ಯನೂ ಸುಧಾರಿಸುತ್ತೆ" ಸ್ವಾಮೀಜಿಯು ದನಿ ಗುಹೆಯೊಳಗಿನಿಂದ ಬಂದಂತಿತ್ತು. ಬಲು ಮೋಹಕ ಮೃದು ಮಧುರ ಸ್ವರ.

"ಸ್ವಾಮಿಗಳಲ್ಲಿ ಒಂದು ಬಿನ್ನ, ತಾವು ಬಯಸಿದ್ದಲ್ಲಿ, ತಾವು ಅಪೇಕ್ಷಿಸಿದರೆ ಬೆಲೆ ಕೊಡಲು ಇಷ್ಟ ಪಡ್ತೀನಿ. ಇದು ಈ ದೌರ್ಭಾಗ್ಯನ ಕಾಣಿಕೆಯೆಂದು ಭಾವಿಸಿ" ಕೈ ಮುಗಿದು ಕೇಳಿಕೊಂಡ ವೆಂಕಟಯ್ಯ.

ಮುಗುಳ್ನಗೆ ತೇಲಿಸಿದ ಸ್ವಾಮೀಜಿ "ಗುಳಿಗೆಯ ಬೆಲೆ ಕಟ್ಟಬಹುದು.ಕಾರ್ಯದ ಬೆಲೆ ಕಷ್ಟವಾದೀತು. ಕಾಯಿಲೆ ವಾಸಿ ಮಾಡಲು ಅವಕಾಶ ನೀಡಿದ ನಿಮಗೂ ನಮ್ಮ ಸತ್ಕಾರ್ಯದ ಫಲದಲ್ಲಿ ಭಾಗುವುಂಟು. ಹೋಗಿ ಬನ್ನಿ,ನಾವಿರುವುದೇ ಇದಕ್ಕೆ,ಹಣದ ಲೋಭಕ್ಕೆ ಬಲಿಯಾದರೆ ಕೊಡೊ ಕಶಾಯ ವಿಷವಾದೀತು, ಅಂಚೆ ವೆಚ್ಚದ ವಿನಃ ಒಂದು ಕಾಸು ಮುಟ್ಟುವುದಿಲ್ಲ. ಹೋಗಿ ದೇವರು ಒಳ್ಳೆಯದು ಮಾಡಲಿ" ಎಂದರು.

ಹೆಚ್ಚು ಮಾತನಾಡಿದರೆ ಸ್ವಾಮಿಯ ಮನ ಮುರಿದೀತು ಎಂದು ಬೆದರುತ್ತಲೇ ಅಡ್ಡ ಬಿದ್ದು ಆಶೀರ್ವಾದ ಬೇಡಿದರು-ಸ್ವಾಮೀಜಿಯ ದಿವ್ಯ ಸ್ವರ ಮಂತ್ರ ಹೇಳಿತು. ಹೊರಡುವಾಗ ಶಿಷ್ಯನಿಂದ ವಿಳಾಸ ಪಡೆದು ದೇವರ ದರ್ಶನಕ್ಕೆ ನಡೆದರು.

ಅಂದಿನಿಂದ ಮರುಕಳಿಸದ ರೋಗ ಇಂದು ತಲೆದೋರಿತು.ಪ್ರತಿ ತಿಂಗಳು ಸ್ವಾಮೀಜಿಯವರ ಆಶ್ರಮದಿಂದ ಆಶೀರ್ವಾದ ಹೊತ್ತು ಬರುತಿದ್ದ ಗುಳಿಗೆ ರಾಜನಿಂದ ಅಲಕ್ಷಕ್ಕೆ ಹೀಡಾಗಿ ಖಾಲಿಯಾಗದೆ ಉಳಿದವು. ಎರಡು ಮೂರು ತಿಂಗಳಿಂದ ಮಾತ್ರೆ ಸೇವನೆ ಮಾಡದವನಿಗೆ, ಅದರ ನೆನಪು ಮಾಡಲು ಹೊರಟಂತೆ ಇತ್ತು.

ನಿಧಾನವಾಗಿ ಚೇತರಿಸಿಕೊಳ್ಳತೊಡಗಿದ ರಾಜನ ಮೈ ಸಡಿಲಗೊಳ್ಳ ತೊಡಗಿತು. ನರಳುವಿಕೆಯಿಂದ ಎಚ್ಚರಗೊಂಡ, ತಾಯಿಯ ಗೋಳಿನ ಸ್ವರ ದೂರದಲ್ಲಿಂದ ಕೇಳಿ ಬರುತಿತ್ತು,ಮುಖದ ಮೇಲೆ ಕೈ ಸವರಿದಳು,ಮಲಗಿಯೆ ಒಂದು ಕ್ಷಣ ಎಲ್ಲವನ್ನೂ ಜ್ಞಾಪಿಸಿಕೊಂಡ. ವ್ಯಥೆಯಾಯಿತು.

"ಏನಾಯ್ತೋ ರಾಜು ಇದ್ದಕಿದ್ದಾಗೆ? ಚನ್ನಾಗಿದ್ದೀ ಏನೋ?"ಅಳುವಿನಲ್ಲೆ ಕೇಳಿದಳು ಮಂಜಮ್ಮ.

ನಿಧಾನವಾಗಿ ಎದ್ದು ಕುಳಿತು "ಯಾಕೋ ತಲೆಯೊಳಗೆ ಸಿಡಿಲು ಹೊಡೆದಂಗಾಯ್ತಮ್ಮ, ಆಮೇಲೆನಾಯ್ತೋ ಗೊತ್ತಿಲ್ಲ. ಏನಾಯ್ತಮ್ಮ?" ಕೇಳಿದ.

"ಅಯ್ಯೋ ಇದು ಮೂರ್ಛೆ ಕಾಯಿಲೆ...?"- ವೆಂಕಟಯ್ಯ ಸನ್ನೆ ಮಾಡಿ ಬಾಯಿ ಮುಚ್ಚುವಂತೆ ಸೂಚಿಸಿದರೂ ಅಷ್ಟರಲ್ಲಿ ಶಬ್ದ ಹೊರಬಿತ್ತು.

"ನನಗೆ ಮೂರ್ಛೆ ಕಾಯಿಲೆ...?"ವ್ಯಾಕುಲಗೊಂಡ ರಾಜನ ಮನ ಹುಣ್ಣಿಮೆಯ ಕಡಲಂತೆ ಬೋರ್ಗರೆಯ ತೊಡಗಿತು. ತಾನೇ ನಂಬದೆ ಕಲ್ಲಂತೆ ಕುಳಿತ. 'ತಾನಿನ್ನು ಲಕ್ಷ್ಮಿಯ ಒಡನಾಡಿಯಾಗಲು ಅಯೋಗ್ಯ' ಎಂಬ ಚಿಂತನೆ ಚಿಗುರೊಡೆಯ ತೊಡಗಿತು.

O O O

ಅಂದಿನಿಂದ ರಾಜು ಲಕ್ಷ್ಮಿಗೆ ಮುಖ ತೋರಿಸದೆ ತನ್ನ ರೂಮಿನಲ್ಲಿ ಕುಳಿತಿರುತ್ತಿದ್ದ. ಅನಿವಾರ್ಯ ಪ್ರಸಂಗದಿಂದ ಲಕ್ಷ್ಮಿಯು ತಂದೆ, ತಾಯಿಯವರೊಂದಿಗೆ ಉಡುಪಿಗೆ ಹೋಗಬೇಕಾದುದರಿಂದ, ರಾಜನಿಗಾಗಿ ಕಾಯ್ದು ಸಾಕಾಗಿ, ಬೇಸತ್ತು ಹೋಗಿದ್ದಳು. ಲಕ್ಷ್ಮಿ ಊರು ಬಿಟ್ಟು ಒಂದು ವಾರದ ಮೇಲಾಗಿತ್ತು, ಅವಳು ಕಾಣದಿದ್ದದ್ದು ಒಂದು ವಿಧದಲ್ಲಿ ಸಮಾಧಾನಕರವಾಗಿತ್ತು. ಕುಳಿತಲ್ಲೇ ಅನ್ನ ನೀರು ಬಿಟ್ಟು, ಗಡ್ಡ ಬೆಳೆಸಿದ್ದವನು ಅರೆ ಹುಚ್ಚನಾಗಿದ್ದ. ಕೃಶವಾದ ದೇಹ, ಆಳಕ್ಕಿಳಿದ ಕಣ್ಣು, ನಗು ಮೂಡದ ನಿರ್ಜೀವ ತುಟಿಗಳು. ಮಂಕು ಕವಿದು ಕುಳಿತಿದ್ದ ಅವನೊಂದಿಗೆ ತಂದೆ ತಾಯಿಯರೂ ಅರ್ಧಕ್ಕೂ ಹೆಚ್ಚು ಇಳಿದು ಹೋಗಿದ್ದರು.

ಹೊರಗೆ ರಿಕ್ಷಾ ಬಂದ ಸದ್ದಾಯಿತು. ತಡೆಯಲಾರದೆ ಎದ್ದು ಬಂದು ಕಿಟಕಿಯ ಎಡಕ್ಕೆ ಕಣ್ಣು ಹಾಯಿಸಿದ. ಲಕ್ಷ್ಮಿಯೊಂದಿಗೆ ಅವಳ ತಂದೆತಾಯಿಯವರು ಇಳಿದರು. ಲಕ್ಷ್ಮಿ ಸೊರಗಿದಂತೆ ಕಂಡಳು. ತಾನು ಮುಖ ತೋರಿಸದಿದ್ದರಿಂದ ಇರಬಹುದು ಎಂದುಭಾವಿಸಿದ. ಇನ್ನು ಈ ಮುಖ ಹೀಗಿರಲು ಅವಕಾಶ ಕೊಡಬಾರದೆಂದು ನಿಶ್ಚಯಿಸಿದ, ಅದೆಷ್ಟೋ ಬಾರಿ ಗಡ್ಡ ತೆಗೆಯಲು ಹೇಳಿದರೂ ಗಮನ ಕೊಡದೆ ಇದ್ದವನು ತಾನೇ ಶೇವಿಂಗ್ ಮಾಡಿಕೊಂಡ.

ಬಹಳ ಹೊತ್ತಿನಿಂದ ಹಿಂಬಾಗಿಲಲ್ಲಿ ರಾಜನಿಗಾಗಿ ಕಾಯ್ದು ಕುಳಿತ ಲಕ್ಷ್ಮಿ ನಿರಾಶೆಗೊಂಡಳು. ಇನ್ನೇನು ನಿಟ್ಟುಸಿರಿಟ್ಟು ಒಳಗೋಗುವಷ್ಟರಲ್ಲಿ ಬಾಗಿಲು ತೆರೆಯಿತು. ತನ್ನ ಕಣ್ಣು ತಾನೇ ನಂಬದಾದಳು, ರಾಜು ಸೊರಗಿ ಹೋಗಿದ್ದ. 'ತನ್ನ ರಾಜು ವಿರಹ ವೇದನೆಗೆ ಸಿಲುಕಿ ಸೊರಗಿದನೆ? ಛೆ ತಾನು ಹೋಗುವಾಗ ಹೇಳಬಾರದಿತ್ತೆ?' ಅವನ ನಿಸ್ತೇಜ ಕಣ್ಣು ಅಪರಿಚಿತರನ್ನ ನೋಡುವಂತೆ ನೋಡಿದವು.ಲಕ್ಷ್ಮಿ ಮತ್ತಷ್ಟು ಗಾಬರಿಯಾಗಿ ಉಗುಳು ನುಂಗಿ ಹತ್ತಿರ ಬರುವಂತೆ ಕರೆದು,ತಾನು ಕಾಂಪೌಂಡ್ ಬಳಿಗೆ ಓಡಿ ಹೋಗಿ ನಿಂತಳು. ರಾಜನೂ ಹತ್ತಿರ ಬರುತಿದ್ದಂತೆ "ರಾಜು ನಿನ್ನತ್ರ ಸ್ವಲ್ಪ ಮಾತ್ನಾಡ್ಬೇಕು ಬೀಚ್‌ಗೆ ಹೋಗೋಣ ಬರ್ತೀಯಾ?"

"ಬರ್ತೀನಿ".ಅವನ ದನಿಯೇ ಬದಲಾಗಿತ್ತು.

ಇಬ್ಬರೂ ಬೇರೆ ಬೇರೆಯಾಗಿ ಹಿಂತಿರುಗಿದರು.

ರಿಕ್ಷಾ ಹತ್ತಿ ಕುಳಿತು "ಬೀಚ್‌ಗೆ ಬಿಡ್ರಿ ಡ್ರೈವರ್" ಎಂದ. ಇಬ್ಬರ ನಡುವೆ ಮೌನವೇ ಮಾತು. ತನ್ನ ಯೋಚನೆಯಲ್ಲಿದ್ದ ಲಕ್ಷ್ಮಿಗೆ 'ಪರಸ್ಪರ ಎಷ್ಟೋ ದೂರ ಇದ್ದೇವೆ'ಎನಿಸಿತು.

ಇಬ್ಬರೂ ರಿಕ್ಷಾ ಹತ್ತಿದ್ದು ಬಸವನ ದೃಷ್ಟಿಗೆ ಬಿತ್ತು. ಅವನೆಷ್ಟೆ ಆಗಲಿ ತನಗೆ ಅವಮಾನ ಮಾಡಿದ ವೈರಿ, ಅವ್ನಿಗೆ ಬುದ್ಧಿ ಕಲಿಸ್ಬೇಕೆಂದು ಅಂಗಡಿಯ ಬಳಿ ಇದ್ದ ಪುರುಷೋತ್ತಮನ ಬಳಿಗೆ ಓಡಿದ. ರಸ್ತೆಯಲ್ಲಿ ಬಾಳೆ ಹಣ್ಣು ತಿಂದು ರಸ್ತೆಗೇ ಎಸೆದು ಸಿಗರೇಟು ಹಚ್ಚುತಿದ್ದ ಪುರುಷೋತ್ತಮ. ಜೊತೆಯಲ್ಲಿ ಇವನ ಸರಿಸಮಾನರಾದ ಇನ್ನಿಬ್ಬರು ಸ್ಕೂಟರ್ ಸವಾರರಿದ್ದರು,ಅವರೂ ಹಣ್ಣುತಿಂದು ಸಿಪ್ಪೆನ ರಸ್ತೆಗೇ ಎಸೆದರು. ಸಿಗರೇಟು ಹಚ್ಚಿ ರಸ್ತೆ ಬದಿಯಲ್ಲಿ ಓಡಾಡುವ ಹೆಣ್ಣು ಮಕ್ಕಳನ್ನು ಕೆಣಕುತ್ತ ನಿಂತರು.

ತೇಗುತ್ತ ಒಂದೇ ಸಮನೆ ಓಡಿ ಬಂದ ಬಸವ ದೂರದಿಂದಲೆ "ಗುರೂ .. ಗುರೂ...ಕಳ್ರು ಸಿಕ್ಕಾಕೊಂಡ್ರು. ಅವತ್ತು ಸನ್ ಮಾತು ನಂಬ್ಲಿಲ್ಲ" ಎಂದ ಏದುಸಿರು ಬಿಡುತ್ತ. ಉಳಿದಿಬ್ಬರು "ಏನು? ಏನು?" ಎಂದು ಪ್ರಶ್ನಿಸುತ್ತ ಹೊಗೆ ಬಿಟ್ಟರು.

"ಏನಂದ್ರೆ .. ನಮ್ಮ ವೈಸ್ ಪ್ರೆಸಿಡೆಂಟ್ ರಾಜು ಮತ್ತೆ ಲಕ್ಷ್ಮಿ ಲವ್ ಮಾಡ್ತಿದ್ದಾರಂದ್ರೆ ಇವ್ನು ಕೇಳ್ಲಿಲ್ಲ. ಗುರೂ ಇವತ್ತು ನಾನು ಚಾಲೆಂಜ್ ಮಾಡ್ತೀನಿ" ಎಂದ.

"ಚಾಲೆಂಜ್? ನಿನ್ನತ್ರ ಏನೈತೆ? ಇದ್ದವ್ಳು ಒಬ್ಳು ಸತ್ಲು .ನಿನ್ನಂತ ಬಡಪಾಯಿ ಏನು ಕೊಡ್ತಾನೇಳು? ಅದು ನಿಜವಾದ್ರೆ ಮಿಲ್ಕಿ ಹೋಟ್ಲಲ್ಲಿ ಗ್ರ್ಯಾಂಡ್ ಪಾರ್ಟಿ" ಎಂದ ಪುರುಷೊತ್ತಮ.

"ಆಗಲಿ" ಎಂದರು ಉಳಿದಿಬ್ಬರು.

"ಬೇಗ ಸ್ಕೂಟರ್ ಹತ್ತಿ ಹಿಡಿಯೋದು ಕಷ್ಟವಾದೀತು" ಎಂದು ಅವಸರ ಪಡಿಸಿದ ಬಸವ.

ಮರು ಮಾತಿಲ್ಲದೆ ನಾಲ್ವರೂ ಸ್ಕೂಟರ್ ಹತ್ತಿದರು. ಬಸವ ಪುರುಷೋತ್ತಮ ಒಂದು ಬೈಕ್, ಉಳಿದಿಬ್ಬರದು ಪ್ರತ್ಯೇಕ ಬೈಕುಗಳು ರಿಕ್ಷಾ ಹೋದ ದಾರಿಯಲ್ಲಿ ಓಡಿದವು.

ಸ್ವಲ್ಪ ದೂರ ಮೌನವಾಗೆ ಮುನ್ನಡೆದು "ನಮ್ಮ ಹಳೇ ಜಾಗಕ್ಕೆ ಹೋಗೋಣ ಬಾ ಲಕ್ಷ್ಮಿ. ನಿನಗೆ ಒಂದೇ ಒಂದು ವಿಷ್ಯ ತಿಳಿಸ್ಬೇಕು" ಎಂದು ನುಡಿದು ಸ್ವಲ್ಪ ದೂರ ದಲ್ಲಿದ್ದ ಕರೀ ಬಂಡೆಯ ಮೇಲೆ ಬಂದು ಕುಳಿತರು. ಮೊದಲಿನ ತುಂಟತನವಿಲ್ಲ. ಅಪ್ಪಿ ಮುದ್ದಾಡುವ ಕಾತರವಿಲ್ಲ. ಬರೀ ಚಿಂತನೆ, ಬೇಸರ, ಚಿಗುಪ್ಸೆ, ನಿರುತ್ಸಾಹ ತುಳುಕು ತಿತ್ತು.

"ರಾಜು ನಮ್ಮ ಮನೆಯಲ್ಲಿ ನನ್ನ ಇಷ್ಟದಂತೆ ಬಿಟ್ಟಿದ್ದಾರೆ. ನೀನು ಕೈ ಬಿಡಲ್ಲ ತಾನೆ?" ಆನಂದ್ವೇಗದಿಂದ ಗದ್ಗದಿತಳಾಗಿ ಕೇಳಿದಳು.

ರಾಜನ ಕಣ್ಣಲ್ಲಿ ತಡವಿಲ್ಲದೆ ನೀರು ತುಂಬಿ,ಲಕ್ಷ್ಮಿಯ ಚಿತ್ರ ಮಸಕು ಮಸಕಾ ಯಿತು. ನಗುವಿನಿಂದ ತಡೆಯುವವನಂತ ಒತ್ತಾಯದಿಂದ ತುಟಿ ಹಿಗ್ಗಿಸಿ "ನಾನು ಕೈ ಬಿಡಲ್ಲ ಲಕ್ಷ್ಮಿ. ಆದರೆ ವಿಧಿಯೇ ಬಿಡಿಸ್ಲಿಕ್ಕೆ ಆತುರಪಡ್ತಿದೆ"

ಲಕ್ಷ್ಮಿಗೆ ಕಣ್ಣು ಕತ್ತಲುಗಟ್ಟಿತು.ಸಾವರಿಸಿಕೊಂಡು"ವಿಧಿ? ಯಾವ ವಿಧಿ ನೀನೇಳ್ತಿ ರೋದು ರಾಜು? ನೀನೆ ನನ್ನ ವಿಧಿ.ನಮ್ಮ ಪ್ರೇಮದ ಹೊರತು ಉಳಿದದ್ದೆಲ್ಲ ಶೂನ್ಯ ವಲ್ವ? ಮರೆತೆಯಾ ..? ನಾನು ಊರಿಗೆ ಹೋಗ್ಬೇಕಾದ್ರೆ ಹೇಳಿ ಹೋಗ್ಲಿಲ್ಲಾಂತ ಕೋಪನಾ...?" ಕೈ ಹಿಡಿದು ಕೇಳಿದಳು.

"ಕೋಪ ಇಲ್ಲ ಲಕ್ಷ್ಮಿ. ಪ್ರೇಮ ಅಮರ, ಅದು ಉಳಿಯುತ್ತೆ. ನಾವು

ಒಂದುಗೂಡ್ಲಿಕ್ಕೆ ಸಾಧ್ಯವಿಲ್ಲ ಲಕ್ಷ್ಮಿ. ಈ ದೇಹ ಸೊರಗ್ಬಹುದು ನನ್ನ ಆತ್ಮ ಮಾತ್ರ ಯಾವತ್ತೂ ಸೊರಗಲ್ಲ ಲಕ್ಷ್ಮಿ. ನಾನೇಳಬೇಕಾದ ವಿಷಯ ನನ್ನಲ್ಲಿ ಇದ್ದಷ್ಟು ನನ್ನ ಕೊಲ್ಲುತ್ತೆ, ನಿನ್ನನ್ನೂ ಕೊಲ್ಲುತ್ತೆ. ಆದ್ರೆ ನೀನು ನನ್ನ ಮರೆತು ಬದುಕ್ಬೇಕು ಲಕ್ಷ್ಮಿ. ಹೆಚ್ಚು ನಿನಗೆ ಸತಾಯಿಸಲು ನನಗಿಷ್ಟ ಇಲ್ಲ. ನಾನೊಬ್ಬ ಮೂರ್ಛೆ ರೋಗಿ..." ಕಂಠ ಹೊಡೆಯಿತು. ಮುಖ ತಿರುಗಿಸಿ ವೇದನೆ ಅನುಭವಿಸತೊಡಗಿದ.

ಲಕ್ಷ್ಮಿಗೆ ರಾಜನ ನುಡಿಯಿಂದ ಒಂದು ಕ್ಷಣದ ಆಘಾತವಾಯಿತಷ್ಟೆ- 'ಅವನ ನೋವಿನಲ್ಲಿ ತಾನೂ ಭಾಗಿಯಾಗಿ ದುಃಖಿಸಿದರೆ,ರೋಗ ಅವನಿಗೆ ದೊಡ್ಡದಾಗಿ ತೋರ ಬಹುದು, ಆಗ ಅವನು ಜೀವಕ್ಕೆ ಅಪಾಯ ತಂದುಕೊಳ್ಳಬಹುದು.ಅವನ ಕಾಯಿಲೆಗೆ ಸಿದ್ಧೌಷಧ ನಾನೇ ಆಗಿರ್ಬೇಕಾದ್ರೆ ನನಗೇಕೆ ದುಃಖ?'ಎಂದು ಮನದಲ್ಲೆ ಚಿಂತಿಸಿ ನಗು ನಗುತ್ತಲೇ ಮೂಡಿದ್ದಕಣ್ಣೀರು ಹೊರೆಸಿಕೊಂಡು. ಪ್ರೀತಿಯಿಂದ ಭುಜದ ಮೇಲೆ ಕೈ ಹಾಕಿ "ಅಯ್ಯೋ ಇಷ್ಟೇತಾನೆ? ಇದ್ಯಾವ ಮಹಾಕಾಯಿಲೆ ರಾಜು?" ಎಂದಳು

ರಾಜು ಅರ್ಥವಾಗದೆ ಮುಖ ತಿರುಗಿಸಿ ನೋಡಿದ. ಮುಖದಲ್ಲಿ ವೇದನೆಯು ಭಾರ ಇಳಿಯುತಿತ್ತು."ನೀನು ಏನೇಳ್ತಿದ್ದೀಯ ಲಕ್ಷ್ಮಿ?"ಕೇಳಿದ.

"ಹೌದು ರಾಜು.ನೀನೇ ಹೇಳ್ದೆಯಲ್ಲ ಆ ವಿಧಿ ಅನ್ನೋದು ನಮ್ಮಿಬ್ಬರ ಪ್ರೇಮ ಸಹಿಸಲಾರ್ದೆ, ನೀನು ಒಂದು ಕ್ಷಣ ಎಲ್ಲಾ ಮರೆತು ಬಿಡ್ಲಿ ಅಂತ ಕಾಡ್ತಿವೆ ಅಷ್ಟೆ.ಇದು ನಿದ್ರೆ ಕಾಯಿಲೆ. ಆದ್ರೂ ಪ್ರೇಮದಲ್ಲಿ ನಾವೇ ಗೆದ್ದಿದ್ದು ರಾಜು ನಾನು ನಿನ್ನ ಇಷ್ಟು ಪ್ರೀತಿಸ್ಬೇಕಾದ್ರೆ ನೀನು ಸುಮ್ಮನಿರ್ತೀಯಲ್ಲ. ನಾವು ನೋಲೋದು ನಿನಗೆ ಇಷ್ಟನಾ?" ಲಕ್ಷ್ಮಿ ತನ್ನತ್ತ ವಶಪಡಿಸಿಕೊಳ್ಳುವಂತೆ ಕೇಳಿದಳು.

ರಾಜನಿಗೆ ಇದ್ದ ಸಂಶಯ ಪೂರ್ತಿ ನಿವಾರಣೆಯಾಯಿತು. "ಲಕ್ಷ್ಮಿ ನಿನ್ನ ಮರೆ ಯೋದೆ? ಇಲ್ಲ ಸಾಧ್ಯವಿಲ್ಲ. ಹೆಜ್ಜೆಜ್ಜೆಗೂ ಪಾಠ ಕಲಿಸೋ ಪ್ರೇಮ ದೇವತೆ ನೀನು" ಆನಂದ್ವೇಗದಿಂದ ತಬ್ಬಿಕೊಂಡು ಬಂಡೆಯ ತುದಿಯಿಂದ ಮರಳಿಗೆ ಉರುಳಿದ.

ಪ್ರೇಮದಲ್ಲಿ ಮೈ ಮರೆತು ಚುಂಬಿಸುತ್ತಿರುವಾಗಲೇ ಸಮೀಪಕ್ಕೆ ಆ ನಾಲ್ವರು ಧಾವಿಸುತಿದ್ದರು.

"ನೋಡ್ದ ಗುರು ನನ್ ಮಾತು ಕೇಳ್ಲಿಲ್ಲವಲ್ಲ?" ಬಸವನೆಂದ.

"ಹೌದು ಕಣೋ ಬಸ್ವ..." ರೊಚ್ಚಿನಿಂದ ನುಡಿದು ಹಲ್ಲು ಮಸೆದ

ಪುರುಷೋತ್ತಮ ಕಾಳಿಂಗ ಸರ್ಪವಾಗಿದ್ದ.

ಸಮೀಪಕ್ಕೆ ಬಂದು ಅಡಿಯಲ್ಲಿದ್ದ ಲಕ್ಷ್ಮಿಗೆ ಚುಂಬಿಸುತಿದ್ದ ರಾಜುಗೆ"ಹೇ ಲೋಫರ್ ನನ್ಮಗನೆ ಏಳೋ ಮೇಲೆ"ಅರ್ಭಟಿಸಿದ.ನಾಲ್ವರೂ ಸುತ್ತುವರಿದು ನಿಂತರು ಎಚ್ಚೆತ್ತ ರಾಜು ತಲೆ ಎತ್ತಿ ನೋಡಿ ಏಳುತ್ತ "ಓ ಪುರುಷೋತ್ತಮ" ಎಂದ.

ಲಕ್ಷ್ಮಿ ನಾಲ್ವರ ಕಣ್ಣಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುವಂತೆ ಸೆರಗು ಬಿಗಿಯಾಗಿ ಹೊದ್ದು ದೂರ ನಿಂತಳು.

ಲಕ್ಷ್ಮಿಯ ಒಪ್ಪಿಗೆಯಿಂದ ಹಿಗ್ಗಿನಲ್ಲಿದ್ದ ರಾಜು "ಪುರುಷೋತ್ತಮ ನಾನೂ ಲಕ್ಷ್ಮಿ ಪ್ರೀತಿಸ್ತಿದ್ದೀವಿ. ನಮ್ಮ ಮದುವೆಗೆ ನೀವೆಲ್ಲರೂ ಖಂಡಿತಾ ಬರ್ಬೇಕು. ನೀವೂ ತಪ್ಪದೆ ಬರ್ಬೇಕು" ಉಳಿದವರ ಕಡೆ ತಿರುಗಿ ನುಡಿದ ಅವನ ಹೃದಯ ತುಂಬಿ ತುಳುಕುತಿತ್ತು.

"ನೀವು ಮದ್ವೆ ಆಗೋವರೆಗೆ ನಾವು ಕಾಯುಂಗಿಲ್ಲಮ್ಮ.ಅದ್ಕೆ ನಾವುಈಗ್ಲೆಮದ್ವೆ ಮಾಡೋಕೆ ಬಂದಿದ್ದೀವಿ" ಎಂದ ವ್ಯಂಗವಾಗಿ ಪುರುಷೋತ್ತಮ.

"ಹೌದು ನಿವಾದ್ರೂ ಕಾಯೋದೇನಿದೆ? ಯಾವತ್ತೋ ಮನಸ್ಸಿನ ಮದುವೆ ಆಗಿದೆ. ನೋಡೋರ ಕಣ್ಣಿಗೆ ಶಾಸ್ತ್ರ ಆಗ್ಬೇಕಲ್ಲ" ಎಂದ.

"ನಾವು ಆ ಶಾಸ್ತ್ರ ಮಾಡ್ಲಿಕ್ಕೆ ಬಂದಿದ್ದೀವಿ ತಿಳ್ಕೋ .. ಅವತ್ತು ಬ್ಯಾನರ್ ನಾನು ಸುಟ್ಹಾಕಿದ್ದೇನೊ ನಿಜ. ಅದಕ್ಕೆ ಅಪಮಾನ ನನಗೊಬ್ಬನಿಗೆ ಮಾಡ್ದೆ.ಪುರುಷೋತ್ತಮ ಆ ಕೆಲ್ಸ ಮಾಡ್ಸಿದ.ಅವ್ನಿಗ್ಯಾಕೆ ಅಪಮಾನ ಮಾಡ್ಲಿಲ್ಲ?" ದ್ವೇಷದಿಂದ ಕೇಳಿದ ಬಸವ,

"ಆ ತಾಕತ್ತು ಈ ನನ್ಮಗನಿಗೆ ಇರ್ಬೇಕಲ್ಲ?" ಮೀಸೆ ಮೇಲೆ ಕೈ ಹಾಕಿ ನುಡಿದ ಪುರುಷೋತ್ತಮ.

"ಯಾಕೆ ಮಾಡ್ಲಿಲ್ಲ? ಎಲೆಕ್ಷನ್‌ನಲ್ಲಿ ಮಣ್ಣುಮುಕ್ಕಿ ಹೋದ್ನಲ್ಲ ಸಾಲ್ದಾ?" ಅವರು ಕಾಲ್ಕೆರೆದು ಜಗಳಕ್ಕೆ ನಿಂತಾಗ ಪ್ರತಿಯಾಗಿ ಹಂಗಿಸಿದ ರಾಜು.

"ನಮಗೆ ಸಿಟ್ಟು ಬರ್ಲಿಕ್ಕೆ ಇದೊಂದು ಮಾತು ಸಾಕು" ಹಿಂದಿನಿಂದ ನುಡಿದನೊಬ್ಬ ತಲೆಯ ಕೆಳ ಭಾಗಕ್ಕೆ ಬಲವಾಗಿ ಗುದ್ದಿದ. ರಾಜು ತತ್ತರಿಸಿ ಹೋದ.

"ರಾಜೂ..." ಎಂದು ಚೀತ್ಕರಿಸಿದ ಲಕ್ಷ್ಮಿ ಸಹಿಸಲಾರದೆ ಅವನ ಬಳಿಗೆ

ಧಾವಿಸಿದಳು.

"ಏಯ್ಞ್ ಸಾಯೋನತ್ರ ಏನು ಸುಖ ಸಿಗುತ್ತೆ? ನನ್ನತ್ರ ಬಾರೆ" ಕೈ ಹಿಡಿದು ಎಳೆದು ನಿಲ್ಲಿಸಿದ ಪುರುಷೋತ್ತಮ.

"ಪುರುಷೋತ್ತಮಾ ಬೇಡಾ ಅನ್ನ ಕೈ ಬಿಡು. ಬಿಡ್ತಿಯೊ ಇಲ್ವೋ?" ಸಹನೆ ಕಳೆದುಕೊಂಡು ಅಬ್ಬರಿಸಿದ ರಾಜು.

ಉಳಿದ ಮೂವಾರು ರೋಷಜ್ವಾಲದಿಂದ ಕುದಿಯುತಿದ್ದರು. ಪುರುಷೋತ್ತಮನ ಕಪಿಮುಷ್ಟಿಯಲ್ಲಿ ಬಂಧಿಯಾದ ಲಕ್ಷ್ಮಿಯ ಕೊಸರಾಟ, ಗೋಗರೆದುದೆಲ್ಲ ವ್ಯರ್ಥ.

"ಅವ್ಳಿಗೆ ಒಂದು ಕೈ ನೋಡ್ಕೋಳ್ರೊ, ನಾನು ಇವ್ಳಿಗೆ ಬಾರೆಲೆ ಹಕ್ಕಿ, ಬಣ್ಣದ ಪಕ್ಕಿ ಪದ್ಯ ಹೇಳ್ಕೊಡ್ತಿನಿ" ಹಾಸ್ಯಮಯವಾಗಿ ನುಡಿದ.

ಮೂವರ ಹೊಡೆತಕ್ಕೆ ಸಿಲುಕಿದ ರಾಜನನ್ನು ಇಬ್ಬರು ಸೇರಿ ಹಿಡಿದುಕೊಂಡರು 'ಬೇಡ ಬಸವಾ .. ನೀವು ಗಂಡಸ್ರು ಆಗಿದ್ರೆ ಒಬ್ಬಬ್ರೇ ಬನ್ರೀ .. ಥೂ ಹಂಡ ನನ್ಮಕ್ಕಳಾ" ಎಂದು ಕೂಗಿದ.

"ನೀನು ಪೂರ್ತಿ ನೆಲಕ್ಕೆ ಬಿದ್ದ ಮೇಲೆ ಒಬ್ಬಬ್ರೇ ಬರ್ತೀವಿ. ಈಗ ಬಾ ಹೊಡೆತ ತಿನ್ನು" ಬಸವ ತನ್ನ ಕೊಡಿಟ್ಟ ದ್ವೇಷಕಾರತೊಡಗಿದ.

ಅಷ್ಟರಲ್ಲಿ ಪುರುಷೋತ್ತಮ ಲಕ್ಷ್ಮಿಯನ್ನು ದೂರಕ್ಕೆ ಎಳೆದೊಯ್ದಿದ್ದ. ಲಕ್ಷ್ಮಿ ಕೊಸರಾಡಿ ತಪ್ಪಿಸಿಕೊಂಡು "ರಾಜು. ." ಎಂದು ದೂರ ಓಡಿದಳು.

"ಇವ್ಳಿಗೆ ಹಣ್ಣುಗಾಯಿ ನೀರುಗಾಯಿ ಮಾಡ್ರೀ. ಅವ್ಳಿಗೆ ನಾನು ವಿಚಾರ್ಸ್ಕೊಳ್ತೀನಿ" ಎಂದವನೆ ಲಕ್ಷ್ಮಿಯ ಬೆನ್ನಟ್ಟಿದ.

ಬಂಧಿತನಾದ ರಾಜನ ಹೊಟ್ಟೆಗೆ ಕೈ ಕಾಲಿನಿಂದ ಒಂದೆ ಸಮನೆ ಬಸವ ಹೊಡೆದ ಮೇಲೆ. ರಾಜು ಕಣ್ಣು ಕತ್ತಲು ಕಟ್ಟಿ ಪ್ರಜ್ಞೆ ತಪ್ಪಿ, ನೆಲಕ್ಕೆ ಬಿದ್ದ ಸ್ವಲ್ಪ ದೂರ ಓಡಿದ ಲಕ್ಷ್ಮಿ ಮರಳು ರಾಶಿಯಿಂದ ತಗ್ಗಿಗೆ ಓಡುವಾಗ ಕುಸಿದು ಬಿದ್ದಳು. ಬೆನ್ನಟ್ಟಿದ ಪುರುಷೋತ್ತಮ ಬಿದ್ದವಳ ಬಳಿಗೆ ಬಂದು ಸೊಂಟದ ಮೇಲೆ ಕೈ ಇಟು ಗಹಗಹಿಸಿ ನಗುತ್ತ" ಏನೇ ಅವತ್ತು ಕ್ಯಾನ್‌ವಾಸ್ ಮಾಡಿದ್ದಂತ ಬಂದು, ನನ್ ವಿರೋಧವಾಗಿ ಪ್ರಚಾರಮಾಡಿ ಸೋಲುವಂತೆ ಮಾಡಿದ್ದಾ ?"

"ಇಲ್ಲಾ ಇಲ್ಲಾ ." ಕಣ್ತುಂಬಿ ಬೆವೆತು ಕಂಗೆಟ್ಟು ತಲೆ ಅಲ್ಲಾಡಿಸಿದಳು. ತುಟಿ ಕಂಪಿಸುತಿದ್ದವು.

"ಹಾ...ಹಾ...ಮತ್ತೆ ಅಂದ್ರೆ ನೀನು ಕಣೆ. ಅವಕ್ಕೆ ಪ್ರತಿಫಲ ನಿನ್ನ ಮೇಲೆ ಅತ್ಯಾಚಾರ ನಡೆಯಲೇ ಬೇಕು. ಕ್ಯಾನ್‌ವಾಸ್ ಒಬ್ಬಿಗೆ ಮಾತ್ರೆ. ಬೇರೆ ಒಬ್ಬ ಹೇಗೆ ಗೆದ್ದನೋ...? ಹಾಗೆ ನಿನ್ನ ಮದುವೆ ಆಗೋನೊಬ್ಬ. ಕೆಡ್ಸೋನೊಬ್ಬ. ನಾನಂತೂ ಕೆಡ್ಸೋನು, ಹ ..ಹ್ಹ.. " ಹೆಮ್ಮೆಯಿಂದ ನಕ್ಕ.

ಕಾಲು ಚಾಚಿ ಬಿದ್ದವಳ ಕಾಲುಗಳನ್ನು ಬೂಟ್ ಕಾಲಿನಿಂದ ತುಳಿದು, ಸೊಂಟದ ಮೇಲಿನ ಕೈ ತೆಗೆಯದೆ ನಿಂತು ಕ್ರೂರ ನಗೆ ನಕ್ಕ.

"ಪ್ಲೀಸ್ ಬೇಡಾ ..ಬೇಡಾ...ಹಾ . ರಾಜೂ .." ಸಹಾಯ ಬಯಸಿ ಕೂಗಿದಳು. ಲಕ್ಷ್ಮಿಯ ಕೂಗು ಕೇಳದಂತೆ ಭೋರ್ಗರೆದವು ಸಮುದ್ರದ ಅಲೆಗಳು. ರೋಷದಿಂದ ಉಕ್ಕುವ ಕಡಲೇ ಆಗಿದ್ದ ಪುರುಷೋತ್ತಮ.ಸೆರಗಿಡಿದು ಜಗ್ಗಿ ಗಾಳಿಗೆ ತೂರಿದ. ಸತ್ತು ಹೆಣವಂತಾದ ಲಕ್ಷ್ಮಿಯ ಮೇಲೆ ಸಂತೋಷದ ಕೇಕೆ ಹಾಕಿ ಬಿದ್ದ.

ಬಸವನು ಹೊಡೆತದಿಂದ ಪ್ರಜ್ಞೆ ತಪ್ಪಿದ ರಾಜನ ಮುಖ ದಿಟ್ಟಿಸ ತ್ತಲೇ ಕುಳಿತಿದ್ದ. ರಾಜನು ನರಳಾಟದಿಂದ ಒದ್ದಾಡಿದ. ತೀಕ್ಷಣವಾಗಿ ಅವನನ್ನು ನೋಡಿದ, ಸ್ನೇಹ ಭರಿತ ಮುಖವದು ಎನಿಸಿತು ಅವಕ್ಕೇಕೆ ನಾನು ಇಷ್ಟು ಹೊಡೆದ್ಬಿಟ್ಟೆ ಅವನ ಬ್ಯಾಸರ್ಕೆ ಸುಟ್ಹಾಕ್ಕಿದ್ದರಲ್ಲಿ ನನ್ನದಾದ್ರೂ ಸರಿನೇ?'ರಾಜನ ಮುಖ ಕರುಣೆಯಿಂದ ನೋಡುತ್ತ ಕಣ್ಮುಚ್ಚಿ ಪ್ರಾಯಶ್ಚಿತ್ತಕ್ಕೆ ತಡಕಾಡಿದ.

ಉಳಿದಿಬ್ಬರ ಕಿತ್ತಾಟದಿಂದ ಅತ್ತ ತಿರುಗಿದ "ಹಾ ಹಾ .ಏನ್ ಮಜನಮ್ಮ ಪುರುಷೋತ್ತಮಂಗೆ. ಅವ್ನು ಬಂದ ತಕ್ಷಣ ನಾನು ಹೋಗೋದು" ಎಂದ ದೊಡ್ಡ ದೇಹದವನು.

"ಥ ೂ ಸೂಳೆ ಮಗನೆ ನಿನಗಿಂತ ಒಂದು ವರ್ಷ ನಾನು ದೊಡ್ಡೋನು ಅದ್ರಿಂದ ನಾನು ಮೊದ್ಲು" ಸ್ವಲ್ಪ ಪೀಚಲು ದೇಹದವನೆಂದ.

"ಯಾಕಲೇ ಬಾಡಿ ನೋಡು. ನಾನು ದೊಡ್ಡೋನು. ಅದಕ್ಕೆ ಮೊದ್ಲು ನಾನು, ಆಮೇಲೆ ನೀನು ಹೋಗೋದು. ಇಲ್ದಿದ್ರೆ ಇದೇ ಒಂದೇ ಹೊಡೆತಕ್ಕೆ ಇಲ್ಲಾ ಅನ್ಸಿ ಬಿಡ್ತೀನಿ" ಎಂದು ಕೈ ಎತ್ತಿದ.

"ಯಾವನೂ ಅಲ್ಲ. ಸಾಕು ಸುಮ್ನಿರೋ. ."ಅಬ್ಬರಿಸಿದ ಬಸ್ವ.

"ಯಾಕೋ ನೀನು ಹೋಗ್ಬೇಕಾ? ನೀನು ನಾಯಿ ಕಣೋ. ಪುರುಷೋತ್ತಮ

ನಮ್ ಗುರು ಮೊದ್ಲು ಅವ್ರು ತಿನ್ಬೇಕು. ನಾವು ಭಿಕ್ಷುಕರು. ಅವ್ರು ಬಿಟ್ಟಿದ್ದು ತಿನ್ನೋರು. ನೀನು ನಾಯಿ ಭಿಕ್ಷುಕರು ತಿಂದು ಬಿಟ್ಟ ಎಲೆ ನೆಕ್ಕೋನು" ಎಂದ ಭವ್ಯ ದೇಹದವನು.

"ಥೂ ನೂಳಿ ಮಕ್ಕಳ್ರಾ ಎಷ್ಟು ಜನಕ್ಕೆ ಹೀಗೆ ಹಾಳ್ಮಾಡಿದ್ದೀರೊ? ಫ್ರೆಂಡ್‌ಷಿಪ್ ಅನ್ಕೊಂಡು ನಿಮ್ ಜೊತೆಗೆ ತಂದೆ ತಾಯಿಯರ ಕಷ್ಟ ಸುಖ ಚಿಂತಿಸ್ದೆ ನೀವು ಕುಣಿಸ್ದಾಗೆ ಕುಣಿದೆ. ಹೃದಯವೇ ಇಲ್ಲದವನಂತೆ ನನ್ನ ಮನುಷ್ಯತ್ವವನ್ನೇ ಕೊಂದಿದ್ರಲ್ಲೋ. ಕಳ್ಳಿ ಮಾಡಿ ತಿಂದವ್ರು ಚಿಂತೆಇಲ್ಲ ನಿಮ್ಮ ನನ್ನ ಋಣ ಇವತ್ತು ತೀರ್‍ತು. ಇನ್ನು ರಾನ್ಗೊ ಅವ್ನ ಹತ್ರ ಹೋದ್ರೆ ಹುಷಾರ್...ಇದೇ ಈ ಕಲ್ಲುಗಳಿಂದ ಕೊಂದಾಕ್ಬಿಟ್ಟೀನಿ" ಎಂದು ಎರಡು ಕೈಯಲ್ಲಿ ಒಂದೊಂದು ಕಲ್ಲಿಡಿದು ಹೊಡೆಯಲು ಸಿದ್ಧನಾಗಿ ನಿಂತ. ಇಬ್ಬರು ಗೆಳೆಯರು ಅನಿರೀಕ್ಷಿತವಾಗಿ ಬಸವನಲ್ಲಿ ಉಂಟಾದ ಬದಲಾವಣೆಗೆ ದಂಗಾಗಿ ಅವನ ಮುಖವನ್ನು ಪೆಚ್ಚಾಗಿ ನೋಡಿದರು. ಇಬ್ಬರ ಕಾಮದ ಅಬ್ಬರವೆಲ್ಲ ಇಳಿದು ಹೋಯಿತು.

ಬಸವನ ಮಾತುಗಳೆಲ್ಲವನ್ನು ಹಿಂದಿನಿಂದ ಕೇಳುತ್ತ ನಿಂತ ಪುರುಷೋತ್ತಮನು ತಾನೂ ಒಂದು ಕಲ್ಲು ಎತ್ತಿಕೊಂಡು ಕಾಣದಂತೆ ಹಿಡಿದು "ಏನೋ ಬಸ್ವ?" ಎನ್ನುತ್ತ ಬಂದ.

"ಪುರುಷೋತ್ತಮ ನಾವು ಮಾಡಿದ ಕೆಲ್ಸ ನನಗೆ ಹಿಡಿಸ್ಲಿಲ್ಲ. ನಮ್ಮ ಕಿಂಚಿತ್ ದ್ವೇಷಕ್ಕೆ ಅವರ ಪವಿತ್ರ ಪ್ರೇಮದಲ್ಲಿ ಕೈ ಹಾಕೋದು ಮಹಾಪಾಪ. ನಮ್ಮ ತೀಟೆಗೆ ಬಯ್ಯೋದಿಲ್ಲಿ ಎರಡು ಏಟು ಹಾಕಿದ್ದು ಸಾಕಾಗಿತ್ತು ಅತ್ಯಾಚಾರ ಮಾಡ್ಬಾರ್ದಿತ್ತು. ಹನ್ಮೃಡ್ಲಿ ನನಗೆ ಹುಚ್ಚು ಆವೇಶ ಬಂತ್ತು. ನಾನು ಮಾಡಿದ ತಪ್ಪಿಗೆ ಯಾರಿಗೆ ಹೊಡಿ ಲೇಳು" ರೋಷದಿಂದ ಮಾತನಾಡ ತೊಡಗಿದ.

ತಾಳ್ಮೆಯಿಂದ ಮುಗುಳ್ನಕ್ಕು "ಬೇರೆಯವ್ರಿಗೇಕೆ? ನನಗೇ ಹೊಡೆದ್ಬಿಡು" ಎಂದ ಪುರುಷೋತ್ತಮನು.

"ಮೊದ್ಲು ಅವ್ರಿಗೆ,ಆಮೇಲೂ ಮನಸ್ಸು ಛೇಂಜ್ ಆಗ್ದಿದ್ರೆ ನಿನಗೂ ಹೊಡಿತೀನಿ" ಎದುರಿಗಿದ್ದ ಅವರಿಬ್ಬರ ಕಡೆಗೂ ಹಾರಿ ಒಂದೊಂದು ಹೊಡೆತಕ್ಕೆ ನೆಲಕ್ಕುರುಳಿಸಿದ.

ಪುರುಷೋತ್ತಮನಿಗೆ ಭಯವಾಯಿತು 'ಇನ್ನು ಇವ್ನು ನಮ್ ಮಾತು ಕೇಳೋನಲ್ಲ. ಹೀಗೆ ಬಿಟ್ರೆ ನಮ್ಮ ವ್ಯವಹಾರವೆಲ್ಲ ಬಯಲು ಮಾಡ್ತಾನೆ' ಎಂದು ಕೊಂಡ. ಬಸವ ಪುರುಷೋತ್ತಮನಿಗೂ ಹೊಡೆಯಲು ತಿರುಗುತ್ತಿದ್ದಂತೆ ಮೊದಲೇ ಸಿದ್ಧನಾಗಿದ್ದ ಪುರುಷೋತ್ತಮ ಕೈಯಲ್ಲಿದ್ದ ಕಲ್ಲಿನಿಂದ ಬಸವನ ತಲೆಗೆ ಬಾರಿಸಿದ. ಚೇತರಿಸಿಕೊಳ್ಳ ಲಾಗದ ಹೊಡೆತ. ತಲೆ ಗಿರ್ರೆಂದಿತು. "ಅಪ್ಪಾ...ಅಮ್ಮ" ಎಂದು ಕೂಗಿದವನೆ ನೆಲ ಕಚ್ಚಿದ.

"ಏಯ್ ಏನು ನೋಡ್ತೀರಾ ..ಬಂದು ನಾಲಕ್ಕು ತಟ್ಟಿ.ಅತ್ಲಾಗೆ ಇವ್ನ ಕತೆ ಮುಗಿಸ್ರೋ, ಇಲ್ದಿದ್ರೆ ಈ ದ್ರೋಹಿ ನಮ್ಮ ಕತೆ ಮುಗಿಸ್ತಾನೆ" ಎಂದವನೆ ಬಳಿಯ ಲ್ಲಿದ್ದ ದಪ್ಪ ಕಲ್ಲುಎತ್ತಿಕೊಂಡು ಎದೆಯಮೇಲೆ ಚಚ್ಚಿದ.ಉಳಿದಿಬ್ಬರೂಅವೆ, ಮುಖದ ಮೇಲೆ ಕಲ್ಲುಎತ್ತಾಕಿದರು.ಚಿಮ್ಮಿ ಹರಿಯಲಾರಂಭಿಸಿದ ರಕ್ತ ಮರಳಿಗೆ ಹರಿಯುತ್ತಿತ್ತು. ಪುರುಷೋತ್ತಮನ ಹಣತಿಂದು ಬದುಕಿದ ಬಸವ ಮಹಾ ಕೆಲಸಕ್ಕಲ್ಲದೆ ಕೇವಲ ದುಷ್ಕೃತ್ಯಕ್ಕೆ ಪ್ರಾಣ ತೆತ್ತಿದ್ದ.

"ಸಾಕು ಇನ್ನು ಯಾರಾದ್ರೂ ನೋಡ್ತಾರು, ಸಂದರ್ಭ ಬಂದಾಗ ಪೋಲೀಸ್ನೋರತ್ರ ನಾನು ಮಾತ್ನಾಡ್ತೀನಿ.ನೀವು ಬಾಯ್ಮುಚ್ಕೊಂಡು ಸುಮ್ನಿರ್ರೀ...ಹ್ಞ ಹೊರಡಿ" ಎಂದವಸರಪಡಿಸಿದ.

"ಲೋ ಅವ್ರಿಬ್ರನ್ನ ಹಾಗೇ ಬಿಡೋದ?" ಎಂದನೊಬ್ಬ.

"ಮತ್ತೇನು ಮಾಡ್ತೀಯ? ಅವ್ರನ್ನು ಕೊಲ್ಲೋವಷ್ಟರಲ್ಲಿ ಯಾರಾದ್ರೂ ನೋಡಿದ್ರೆ? ಬೇಗ ಹೊರಡಿ ನಾನೇಳ್ದಾಗೆ ಕೇಳಿ ಅಷ್ಟೇ" ಸ್ಪಷ್ಟವಾಗಿ ನುಡಿದ ಪುರು ಷೋತ್ತಮನ ನುಡಿಗೆ ಇಬ್ಬರೂ "ಸರಿ. ಸರಿ..." ಎಂದವರೇ ಸ್ಕೂಟರ್ ಬಳಿಗೋಡಿ, ಅಲ್ಲಿಂದ ಜಾಗ ಖಾಲಿ ಮಾಡಿದರು.

ದೇಹದಲ್ಲೆಲ್ಲ ನೋವು ತುಂಬಿದ್ದರಿಂದ ಮೇಲೇಳಲಾರದೆ ಲಕ್ಷ್ಮಿ ಒಂದೇ ಸಮನೆ ದುಃಖಿಸಿ, ತನ್ನ ದೇಹದ ಮೇಲೆ ದೃಷ್ಟಿ ಬೀರಿದಳು.ದುಃಖ ಮತ್ತಷ್ಟು ಒತ್ತರಿಸಿ ಬರ ತೊಡಗಿತು. ಒಳಗಿನ ಲಂಗ ಪದರು ಪದರಾಗಿತ್ತು.ರವಿಕೆ ಹರಿದು ಜೋತಾಡುತ್ತಿತ್ತು, ಜಿಗುಪ್ಸೆಯಿಂದ ಎದೆಯಮೇಲೆ ಕೈ ಅಡ್ಡ ಹಾಕಿದಳು.

ಎಷ್ಟೋ ಹೊತ್ತಿಗೆ ಎದ್ದ ರಾಜು "ಲಕ್ಷ್ಮಿ...ಲಕ್ಷ್ಮಿ..." ಎಂದು ಸುತ್ತಲೂ

ನೋಡಿದ. ತನ್ನ ಹೊರತು ಬೇರಾರು ಕಾಣಿಸಲಿಲ್ಲ.ಅತ್ತ-ಇತ್ತ ನಾಲಕ್ಕು ಹೆಜ್ಜೆ ಹಾಕಿದ ಹತ್ತಿರದಲ್ಲೇ ಶವ ಗೋಚರಿಸಿತು, ಭಯದಿಂದ ಮರಳ ದೊಡ್ಡ ರಾಶಿಯ ಬಳಿ ಬಂದ ಲಕ್ಷ್ಮಿಯ ಕ್ಷೀಣ ದನಿ ಕಿವಿಗೆ ಬಿತ್ತು. ಕಾಲು ಚುರುಕುಗೊಳಿಸಿದ ಮರಳಿನಲ್ಲಿ ಮುಕ್ಕಾಲು ಭಾಗ ಸೇರಿದ್ದ ಲಕ್ಷ್ಮಿಯ ಅವಸ್ಥೆ ಕಂಡು "ಲಕ್ಷ್ಮಿ .." ಗದ್ಗದಿತನಾಗಿ ಚೀತ್ಕರಿಸಿದ. ಬಳಿಗೆ ಸಾರಿ ಕೈ ಹಿಡಿದು ಮೇಲೆತ್ತಿದ. ಆಯಾಸದಿಂದ ತೂರಾಡವಂತೆ ನಿಂತಳು. ತೆರೆದ ಎದೆ ನೋಡಲಾರದೆ ತನ್ನ ಅಂಗಿ ತೆಗೆದು ತೊಡಿಸಿ ದೇಹ ಮುಚ್ಚಿದ. ಇಬ್ಬರ ಕಣ್ಣಿಂದ ಧಾರಾಕಾರವಾಗಿ ಕಣ್ಣೀರು ಸುರಿಯುತಿತ್ತು.

ಒಬ್ಬರನ್ನೊಬ್ಬರು ಅಪ್ಪಿ ನಿಂತರು.

"ಮಾನ ಕಳೆದೋದ ದೇಹಕ್ಕೆ ಮಾನ ತರ್ಲಿಕ್ಕೆ ನೋಡ್ತೀಯಾ? ಎಲ್ಲ ವ್ಯರ್ಥ ಬಿಡು ರಾಜು. ನೀನು ಒಂದು ಕೆಟ್ಟ ಮಾತು ಹೇಳ್ಲಿಕ್ಕೆ ಎಷ್ಟು ಹಿಂಜರಿಯುತಿದ್ದೆ, ನನ್ನ ಕೆನ್ನೆಗೆ ಎಷ್ಟು ಹಿತವಾಗಿ ಮುದ್ದಿಸ್ತಿದ್ದೆ. ಈಗ ನೋಡು ಆ ರಾಕ್ಷಸ ಹೇಗೆ ಕಚ್ಚಿಬಿಟ್ಟಿದ್ದಾನೆ" ಉದರದ ಸಂಕಟವೆಲ್ಲ ಮುಗ್ಧತೆಯಿಂದ ಹೇಳಿದಳು.

ತೋಳಿಂದ ಬಳಸಿಯೆ ಸಮೀಪದ ಬಲಗೆನ್ನೆ ದಿಟ್ಟಿಸಿದ. ಗರಗಸದಂತ ಹಲ್ಲಿನ ಗುರುತು ಕೆನ್ನೆಯನ್ನು ಕೊಯ್ದು, ರಕ್ತ ಚಿಮ್ಮಿ ಒಣಗಿತ್ತು. ಹಿಡೀ ಕೆನ್ನೆ ಊದಿಗಪ ಗಪ ಉರಿಯುತಿತ್ತು.

"ಹಾಗೆಲ್ಲ ಮಾತ್ನಾಡ್ಬೇಡ ಲಕ್ಷ್ಮಿ. ಸುಮ್ನಿರು ಕ್ಷಣಕ್ಷಣಕ್ಕೂ ಪ್ರೇಮದ ಅಂಶ ಹೆಚ್ಚುತ್ತಿದೆ.ಇದೊಂದು ಕೆಟ್ಟ ಗಳಿಗೆಯಷ್ಟೆ.ದೇಹದ ಬಂಧನ ಬೇರ್ಪಡಿಸ್ಬಹುದು ಲಕ್ಷ್ಮಿ. ಆತ್ಮ ಮಾತ್ರ ಯಾವತ್ತೂ ಒಂದೆ"

"ನನಗೊತ್ತು ರಾಜು ನೀನು ಎಂತವನೆಂದು. ರಾಜು ಹೀಗೆ ಮನೆಗೆ ಹೇಗೆ ಹೋಗೋದು?" ಕೇಳಿದಳು.

ಹೋಗೋಣ ಕತ್ತಲು ಸ್ವಲ್ಪ ಹೆಚ್ಚಾಗ್ಲಿ,ಬಾ ಮುಖ ತೊಳೆದುಕೊಂಡು ಹೊರಡೋಣ" ಎಂದ ರಾಜು.

ನಡೆಯಲಾರದ ಲಕ್ಷ್ಮಿಯನ್ನು ಬಳಸಿ ಸಮುದ್ರದ ಕಡೆಗೆ ನಡೆಯ ತೊಡಗಿದ.

ಸೊಂಟದ ಉದ್ದ ನೀರಿನ ಮಟ್ಟಕ್ಕಿಳಿದರು.ಒಂದು ಕ್ಷಣ, ಲಕ್ಷ್ಮಿ ನೀರು ಮುಖಕ್ಕೆ

ಎರಚಿಕೊಂಡಳು. ಉಪ್ಪು ನೀರಿಗೆ ಕೆನ್ನೆ ಉರಿಯುತೊಡಗಿತು. "ರಾಜೂ ಕೆನ್ನೆ ಮತ್ತೆ ಜೋರಾಗಿ ಉರಿಯುತ್ತಿದೆ" ಎಂದು ಅವನ ಮುಖ ನೋಡಿದಳು.

ಲಕ್ಷ್ಮಿಯ ಮಾತು ಕಿವಿಗೆ ಬೀಳಲಿಲ್ಲ. ರಾಜನ ತಲೆಯೊಳಗೆ ನೋವು ಮರುಕಳಿಸಿತು. ಮುಖ ಕಿವುಚಿದ. ನೀರು ಅವನನ್ನು ತೂಗಿತು ಹಾ..." ಉದ್ಗಾರ ತೆಗೆದ ರಾಜನಿಗೆ ರೋಗ ಮರುಕಳಿಸಿತು.ಮುಖ ವಿಕಾರಗೊಂಡಿತು.ನೀರಿಗೆ ಉರುಳಿ ದಅವನ ದೇಹದಭಾರವನ್ನು ಲಕ್ಷ್ಮಿ ತಾನು ಹೊತ್ತಳು.ದೇಹ ಸೆಟೆಯಿತು "ಅಯ್ಯೋ ರಾಜೂ" ಎಂದರಚಿದಳು.ಶಕ್ತಿಹೀನ ಕೈಗಳಿಂದ ಇಂಚಿಂಚು ನೀರಲ್ಲಿ ಮುಳುಗ ತೊಡಗಿದ.ಮೇಲೆ ಎತ್ತಲು ಶಕ್ತಿಮೀರಿ ಯತ್ನಿಸಿದಳು ಸಾಧ್ಯವಾಗಲಿಲ್ಲ.ನೀರಿನ ಅಡಿಯಿಂದ ಬುಳುಬುಳು ಗುಳ್ಳೆ ಬರತೊಡಗಿದವು "ಹಾ ..ರಾಜೂ ನಾನು ಬರ್ತೀನಿ ನಿನ್ ಜೊತೆಗೆ"- ದಡಲ್ಲನೆ ತಾನು ಮುಳುಗಿ ನೀರೊಳಗೆ ಅವನ ದೇಹ ಬಿಗಿಯಾಗಿ ತಬ್ಬಿದಳು.

ಕಪ್ಪು ಬೆಟ್ಟದಂತೆ ಹಸಿದ ಭಾರಿ ಅಲೆಯೊಂದು ಈ ಪ್ರೇಮಿಗಳು ನನ್ನ ಉದರದೊಳಿರಲಿ ಎಂದೆದ್ದು ಬಂದು ಮುಚ್ಚಿಕೊಂಡಿತು.

O O O

ಕಡಲ ತೀರದಲ್ಲಿ ಗುರ್ತಿಸಲಾಗದಂತೆ ಕೊಳೆತು ನಾರುತಿದ್ದ ಮೂರು ಹೆಣಗಳು ದೊರೆತಿದ್ದವು. ಅಂದಾಜು ವಯಸ್ಸಿನೊಂದಿಗೆ,ತರುಣಿಯ ದೇಹವು ದೊರೆತಾಗ ಕಂಪ್ಲೇಟುಇತ್ತಿದ್ದ ವೆಂಕಟಯ್ಯ,ರಮೇಶಪ್ಪನವರಿಗೆ ಹೆಣ ಗುರ್ತಿಸಲು ಪೋಲಿಸ್ ಠಾಣೆಯಿಂದ ಕರೆ ಹೋಯಿತು. ಬಿಳಿ ಬಟ್ಟೆಯಲ್ಲಿ ಮುಚ್ಚಿದ್ದ ದೇಹ ಗುರ್ತಿಸಲು ತೊಟ್ಟ ಬಟ್ಟೆಯನ್ನು ನೋಡಬೇಕಿತಷ್ಟೆ,ಮುಖ ನೋಡಲಾರದಷ್ಟು ಕೆಟ್ಟು ಹೋಗಿದ್ದವು. ಇವರೆಲ್ಲರೂ ಹೋಗುವಷ್ಟರಲ್ಲಿ ಬಸವನ ತಂದೆ ತಾಯಿಯರಾಗಲೇ ಅಲ್ಲಿ ಹೆಣದ ಮುಂದೆ ಕುಳಿತು ರೋದಿಸುತಿದ್ದರು. ಅವರ ಸಣ್ಣ ಮಕ್ಕಳಲ್ಲಿ ದೊಡ್ಡವನು ಅಳುತಿದ್ದರೆ ಉಳಿದಿಬ್ಬರು ಅಲ್ಲೇ ಆಟವಾಡತೊಡಗಿದ್ದರು. ವೆಂಕಟಯ್ಯ ಮಂಜಮ್ಮ ತಮ್ಮ ಎದುರಿಗಿದ್ದ ಹೆಣದ ಪಕ್ಕದಲ್ಲಿದ್ದ ಮಗನ ವಾಚನ್ನೆ ದಿಟ್ಟಿಸಿದರು.ಬಟ್ಟೆ ಸರಿಸುವುದು ಬೇಕಿರಲಿಲ್ಲ.ಮಂಜಮ್ಮ ಆರ್ತನಾದ ಆರಂಭಿಸಿ ಹಿಂದಕ್ಕೊರಗಿದಳು. ವೆಂಕಟಯ್ಯ ಹಲ್ಲು ಕಚ್ಚಿ,ಕನ್ನಡಕ ತೆಗೆದು ತನ್ನ ಪ್ರಪಂಚವನ್ನೆ ಕತ್ತಲು ಮಾಡಿಕೊಂಡ. ಪಕ್ಕದಲ್ಲಿ ರಮೇಶಪ್ಪ ಸಾವಿತ್ರಿಯರ ಆಕ್ರಂದನ ಆರಂಭವಾಗಿ ಗಗನ ಮುಟ್ಟಿತು.

ಪುರುಷೋತ್ತಮ ಎದುರಿಗೆ ಕುಳಿತಿದ್ದ ಇನ್ಸ್‌ಪೆಕ್ಟರ್‌ಗೆ "ಸಾರ್ ಈ ಸಾವಿನಬಗ್ಗೆ ಹೇಳಿಕೆ ಕೊಡ್ತೀನಿ" ಎಂದ. ಇನ್ಸ್‌ಪೆಕ್ಟರ್ ಒಪ್ಪಿಗೆ ಇತ್ತ ನಂತರ" ಸಾರ್ ಇದಕ್ಕೆ ಮೂರು ಜನ ಮಧ್ಯದೊಳಗಿನ ಪ್ರೇಮ ಕಾರಣ ಇರ್ಬಹುದು. ಅಂದ್ರೆ ರಾಜು ಎಲೆಕ್ಷನ್ನಿನಲ್ಲಿ ನನೆದುರಿಗೆ ನಿಂತಾಗ ಲಕ್ಷ್ಮಿ,ಬಸವರಾಜ ಇಬ್ರೂ ನನ್ನ ಪರವಾಗಿ ಒಟ್ಟಿಗೆ ಕ್ಯಾನ್‌ವಾಸ್ ಮಾಡಿದ್ರು. ಈ ವಿಷ್ಯ ಕಾಲೇಜಿಗೆ ಗೊತ್ತು. ಆಗಾ ಅವ್ರಿಬ್ರೂ ಪ್ರೇಮಿಗಳು ಅನ್ನೋದು ನನಗೆ ಮಾತ್ರ ಗೊತ್ತಿತ್ತು. ಸ್ವಲ್ಪ ದಿನಗಳ ನಂತರ ಲಕ್ಷ್ಮಿ ಬಸವನ ಬಿಟ್ಟು ರಾಜನ ಪ್ರೇಮಿಸಲಾರಂಭಿಸಿದಳು.ಮದುವೆಯಾಗುವ ಯೋಚನೆಯಲ್ಲಿ ಇದ್ದಾಗ ಹಳೇ ಪ್ರೇಮಿಯಾದ ಬಸವನಿಗೆ ಈ ವಿಷ್ಯ ತಿಳಿದು ಕೊಲೆ ಮಾಡ್ತೀನಿ ಅಂತ ಕೂಗಾಡ್ತಿದ್ದ. ಬಹುಶಃ ಆ ಯತ್ನದಲ್ಲಿ ತಾನೇ ರಾಜು, ಲಕ್ಷ್ಮಿಯರಿಂದ ಕೊಲೆಯಾಗಿರ್ಬೇಕು. ಈ ಕೊಲೆಯ ಭಯದಿಂದ ರಾಜು, ಲಕ್ಷ್ಮಿ ಆತ್ಮಹತ್ಯೆ ಮಾಡ್ಕೊಂಡಿರ್ಬೇಕು" ಧೈರ್ಯವಾಗಿ ಹೇಳಬೇಕಾದುವನ್ನು ಹೇಳಿದ.

"ಹೌದು ಇರ್ಬೇಕು. ನೀವು ಬಂದು ಹೇಳಿಕೆ ಕೊಟ್ಟಿದ್ದು ತುಂಬಾ ಸಂತೋಷ" ಎಂದು ಹೇಳಿದ್ದನೆಲ್ಲ ಬರೆದಿಟ್ಟುಕೊಂಡ.

ಅದೇ ದಿಟ್ಟತನದಿಂದ ನಡೆದು ಹೊರ ಬಂದ ಪುರುಷೋತ್ತಮ, ಒಮ್ಮೆ ವಕ್ರ ನಗೆಯಿಂದ ಮೂರು ಹೆಣಗಳನ್ನು ನೋಡಿ ಬೈಕು ಹತ್ತಿ ಹೊರಟ.





# ಪ ರಿ ಚ ಯ

**'ಗೆಲ್ಲಬಲ್ಲವರು'** ಶ್ರೀ ಸುಮಂತರಾಜರ ಮೊದಲ ಕೃತಿ. ಬದುಕು ಕೂಡ ಸಿನಿಮಾದಂತೆಯೇ ಸಾಗುತ್ತದೆ ಎಂಬ ಭ್ರಾಮಕ ಲೋಕದಲ್ಲಿರುವ ಹದಿಹರೆಯದ ಓದುಗರಿಗೆ ಇಲ್ಲಿನ ರಾಜ ಮತ್ತು ಲಕ್ಷ್ಮಿಯರ ಪ್ರೇಮದ ದುರಂತ ಕತೆ ಪ್ರಿಯವಾಗಬಲ್ಲದು. ಕಾಲೇಜಿನ ಯುವಕ ಯುವತಿಯರ ಹದಿಹರೆಯದ ಕನಸುಗಳು, ಕೆಲಸಗಳು ಸಿನಿಮಾದ ಕತೆಯಂತೆ ಇಲ್ಲಿ ನಡೆಯುತ್ತವೆ. ಓದುಗರಿಗೆ ಯಾವ ಶ್ರಮವನ್ನೂ ಕೊಡದೆ ನಿರೀಕ್ಷಿತ ಅಂತ್ಯವನ್ನು ತಲುಪುತ್ತವೆ. ಸುಮಂತರಾಜರ ಬರೆಯಬೇಕೆಂಬ ಹಂಬಲ ಮೆಚ್ಚುವಂಥದ್ದು. ಅವರು ಭಾಷೆಯ ಬಗ್ಗೆ ಇನ್ನೂ ತುಂಬ ಎಚ್ಚರವಹಿಸಿ ಪಾತ್ರಚಿತ್ರಣ, ಸನ್ನಿವೇಶ ನಿರ್ಮಾಣಗಳಿಗೆ ಸಾಕಷ್ಟು ಗಮನ ಕೊಟ್ಟರೆ ಇನ್ನೂ ಉತ್ತಮ ಕೃತಿಗಳು ಅವರಿಂದ ಬರಬಹುದೆಂದು ತೋರುತ್ತದೆ. ತಮ್ಮ ಉತ್ಸಾಹ ಉಳಿಸಿಕೊಂಡು, ಅಧಿಕ ಪರಿಶ್ರಮದಿಂದ ಒಳ್ಳೆಯ ಕಾದಂಬರಿಗಳನ್ನು ಬರೆಯುವಂತಾಗಲೆಂದು ಹಾರೈಸುತ್ತೇನೆ.

**— ಓ. ಎಲ್. ನಾಗಭೂಷಣಸ್ವಾಮಿ.**
ಇಂಗ್ಲಿಷ್ ಉಪನ್ಯಾಸಕರು
ಸಹ್ಯಾದ್ರಿ ಕಲಾ ಕಾಲೇಜು. ಶಿವಮೊಗ್ಗ.